# ಮೈಸೂರು ವಿಶ್ವವಿದ್ಯಾನಿಲಯ

## "ಬೆಂಗಳೂರು ಗ್ರಾಮಾಂತರಜಿಲ್ಲೆಯ ದೇವನಹಳ್ಳಿ ತಾಲೂಕು- ಒಂದು ವಿವರಣಾತ್ಮಕ ಅಧ್ಯಯನ"

**ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ**

**ಮಹಾಪ್ರಬಂಧ**


ಸಂಶೋಧಕರು

**ಷಫಿ ಅಹಮದ್**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು-570006

ಮಾರ್ಗದರ್ಶಕರು

**ಡಾ. ಎನ್.ಎಸ್.ರಂಗರಾಜು**
ಎಂ.ಎ., ಪಿಎಚ್.ಡಿ., ಡಿಪ್‌ಇನ್‌ಎಪಿಗ್ರಫಿ., ಡಿಪ್‌ಇನ್ ಫೋಕ್ಲೋರ್
ನಿವೃತ್ತ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು-570006


2019

# ಪ್ರಮಾಣಪತ್ರ

**"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕು-ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯದಲ್ಲಿ ಡಾ.ಎನ್.ಎಸ್.ರಂಗರಾಜು, ನಿವೃತ್ತಪ್ರಾಧ್ಯಾಪಕರು ಇವರ ಮಾರ್ಗದರ್ಶನದಲ್ಲಿ ಸಂಶೋಧನೆಯನ್ನು ಕೈಗೊಂಡು ಪಿಎಚ್.ಡಿ., ಮಹಾಪ್ರಬಂಧವನ್ನು ಸಿದ್ಧಪಡಿಸಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವು ನನ್ನ ಸ್ವಂತ ಸಂಶೋಧನೆಯ ಫಲವಾಗಿದ್ದು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಷಫಿ. ಅಹಮದ್)**

ಸಂಶೋಧಕರ ಸಹಿ

ದಿನಾಂಕ:

**(ಎನ್.ಎಸ್.ರಂಗರಾಜು)**

ಮಾರ್ಗದರ್ಶಕರ ಸಹಿ

ದಿನಾಂಕ:

ಮೇಲುಸಹಿ

**(ಕೆ.ಪ್ರಭು)**

ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು

# ಮಾರ್ಗದರ್ಶಕರ ದೃಢೀಕರಣ ಪತ್ರ

ಷಫಿ. ಅಹಮದ್ ಇವರು **"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕು- ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಕೈಗೊಂಡು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ., ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದು ಈ ಮಹಾಪ್ರಬಂಧ ನನ್ನ ಮಾರ್ಗದರ್ಶನದಲ್ಲಿ ಕೈಗೊಂಡಿರುವ ಸಂಶೋಧನೆಯ ಫಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ದೃಡೀಕರಿಸುತ್ತೇನೆ..

ದಿನಾಂಕ: ಮಾರ್ಗದರ್ಶಕರು

ಸ್ಥಳ: ಮೈಸೂರು

**(ಡಾ.ಎನ್.ಎಸ್. ರಂಗರಾಜು)**
ನಿವೃತ್ತ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು

## **ಸಂಶೋಧಕರ ಪ್ರಮಾಣ ಪತ್ರ**

**"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕು-ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯಯದಲ್ಲಿ ಡಾ.ಎನ್.ಎಸ್.ರಂಗರಾಜು ನಿವೃತ್ತ ಪ್ರಾಧ್ಯಾಪಕರು ಇವರ ಮಾರ್ಗದರ್ಶನದಲ್ಲಿ ಸಂಶೋಧನೆಯನ್ನು ಕೈಗೊಂಡು ಪಿಎಚ್.ಡಿ. ಮಹಾಪ್ರಬಂಧವನ್ನು ಸಿದ್ಧಪಡಿಸಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧ ನನ್ನ ಸ್ವಂತ ಸಂಶೋಧನೆಯ ಫಲವಾಗಿದ್ದು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ; **(ಷಫಿ ಅಹಮದ್)**

ಸ್ಥಳ; ಮೈಸೂರು ಸಂಶೋಧನಾ ಅಭ್ಯರ್ಥಿ ಸಹಿ

# ಕೃತಜ್ಞತೆಗಳು

ಸಂಶೋಧನೆಯು ಒಂದು ನಿರಂತರ ಪ್ರಕ್ರಿಯೆಯಾಗಿದ್ದು ಇತ್ತೀಚಿನ ವರ್ಷಗಳಲ್ಲಿ ಉನ್ನತ ಶಿಕ್ಷಣದಲ್ಲಿ ವಸ್ತುನಿಷ್ಠ ವಿವರಣಾತ್ಮಕ ಅಧ್ಯಯನ ಮತ್ತು ಅಂತರಶಿಸ್ತೀಯ ಹಾಗೂ ಬಹುಶಿಸ್ತೀಯ ಸಂಶೋಧನೆಗಳಿಗೆ ಹೆಚ್ಚು ಒತ್ತನ್ನು ಕೊಡಲಾಗುತ್ತಿದೆ. ಈ ನಿಟ್ಟಿನಲ್ಲಿ ನಾನು ಪಿಎಚ್.ಡಿ. ಸಂಶೋಧನೆಯನ್ನು ಕೈಗೊಳ್ಳಲು ಅನುಮತಿ ನೀಡಿದ ಉನ್ನತ ಶಿಕ್ಷಣ ಇಲಾಖೆ ಮತ್ತು ಕಾಲೇಜು ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ಹಾಗೂ ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರುರವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಈ ಮಹಾಪ್ರಬಂಧದ ವಿಷಯದ ಆಯ್ಕೆಯಿಂದ ಹಿಡಿದು ಮಹಾಪ್ರಬಂಧ ರೂಪುಗೊಳ್ಳುವ ಅಂತಿಮ ಹಂತದವರೆವಿಗೂ ಮಹಾಪ್ರಬಂಧದ ಶೀರ್ಷಿಕೆಯಡಿಯಲ್ಲಿ ಸಂಶೋಧನೆ ಮಾಡಲು ಪ್ರೇರೇಪಿಸಿ, ಪ್ರೋತ್ಸಾಹಿಸಿ ಮತ್ತು ನನ್ನ ಜೊತೆಯಲ್ಲಿ ಕ್ಷೇತ್ರಕಾರ್ಯ ಮಾಡಿ ಪುರಾತತ್ವ ನೆಲೆಗಳು ದೇವಾಲಯಗಳು ಮತ್ತು ಸ್ಮಾರಕಗಳ ವಿವರಣೆಯನ್ನು ಸಂಗ್ರಹಿಸಿ ಸಮಗ್ರವಾಗಿ, ವಿಶ್ಲೇಷಣಾತ್ಮಕವಾಗಿ ಹಾಗೂ ವಿವರಣಾತ್ಮಕವಾಗಿ ಈ ಮಹಾಪ್ರಬಂಧ ರೂಪುಗೊಳ್ಳಲು ಕಾರಣಕರ್ತರಾದ ಮತ್ತು ಮಾರ್ಗದರ್ಶಕರಾದ ಡಾ.ಎನ್.ಎಸ್.ರಂಗರಾಜು, ನಿವೃತ್ತ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ರವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಸಂಶೋಧನಾ ವಿಷಯದ ಬಗ್ಗೆ ಸೂಕ್ತ ಸಲಹೆಗಳನ್ನು ನೀಡಿ, ಸಹಕರಿಸಿದ ಡಾ.ಎಂ.ಪಿ.ಮಹದೇವಯ್ಯ, ನಿವೃತ್ತ ಪ್ರಾಧ್ಯಾಪಕರು ಮತ್ತು ಡಾ.ಕೆ.ಪ್ರಭು, ಸಹಾಯಕ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಡಾ.ಜಿ.ಕರಿಯಪ್ಪ, ಪ್ರಾಧ್ಯಾಪಕರು ಹಾಗೂ ಡಾ.ವಿ.ಶೋಭಾ, ಸಹಾಯಕ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ರವರಿಗೆ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಸಂಶೋಧನೆಯ ಬಗ್ಗೆ ಸಲಹೆಗಳನ್ನು ನೀಡಿದ ಡಾ.ಎಸ್.ಕೆ.ಅರುಣಿ, ಉಪ ನಿರ್ದೇಶಕರು, ಐಸಿಹೆಚ್‌ಆರ್, ಬೆಂಗಳೂರು ಮತ್ತು ಡಾ.ದೇವರಕೊಂಡಾ ರೆಡ್ಡಿ, ನಿವೃತ್ತ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ ಹಾಗೂ ಡಾ.ಗವಿಸಿದ್ದಯ್ಯ, ಹಿರಿಯ

ಸಹಾಯಕ ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಮೈಸೂರು ಅವರಿಗೂ, ದೇವನಹಳ್ಳಿ ಕೋಟೆಯ ತಳನಕ್ಷೆಯನ್ನು ಒದಗಿಸಿದ ಡಾ.ಮೂರ್ತೀಶ್ವರಿ, ಅಧೀಕ್ಷಕ ಪುರಾತತ್ವ ತಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವೃತ್ತ, ಬೆಂಗಳೂರು ಮತ್ತು ಕಛೇರಿ ಸಿಬ್ಬಂದಿವರ್ಗದವರಿಗೂ ಧನ್ಯವಾದಗಳು.

ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರಿನ ಸಂಶೋಧಕರಾದ ಸಿ.ಎ.ಶಶಿಧರ ಮತ್ತು ಚಂದ್ರಯ್ಯ ಅವರಿಗೂ, ದೇವನಹಳ್ಳಿ ತಾಲೂಕು ಚನ್ನಹಳ್ಳಿಯ ವಕೀಲರಾದ ಸಿ.ವಿ.ರಾಮಚಂದ್ರ ಹಾಗೂ ದೇವನಹಳ್ಳಿಯ ನಿವೃತ್ತ ಶಿಕ್ಷಕರಾದ ಬಿಟ್ಟಸಂದ್ರ ಗುರುಸಿದ್ದಯ್ಯ ಬಿ.ಜಿ. ರವರಿಗೂ ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನೆಗೆ ಅಮೂಲ್ಯ ನೆರವು ನೀಡಿದ ಆದೆಪ್ಪ ಪಾಸೋಡಿ, ಶಿಕ್ಷಕರು, ಮತ್ತು ಅಲಸೂರು ಜೋಗುಪಾಳ್ಯದ ಬಿ.ತಾಯಪ್ಪ, ಬೆಂಗಳೂರು ಅವರಿಗೂ, ರಾಜಾ ಪಟೇಲ್ ಗುಲಬರ್ಗಾ ಅವರಿಗೂ, ಡಾ.ಹೆಚ್.ಗುಡ್ಡದೇಶ್ವರಪ್ಪ, ಇತಿಹಾಸ ಸಹಪ್ರಾಧ್ಯಾಪಕರು ಮತ್ತು ಹೆಚ್.ಎಂ.ಬೋರಯ್ಯ, ಅವರಿಗೂ, ಡಾ.ಆರ್.ವಿ.ರವೀಂದ್ರನಾಥ, ಡಾ.ಸಿ.ಸುರೇಶ್ ಅಂಬ್ಲೆ, ಡಾ.ಹೆಚ್.ಎನ್.ಕಾಳಸ್ವಾಮಿ ಹಾಗೂ ಕಛೇರಿ ಸಿಬ್ಬಂದಿಯವರಾದ ಟಿ.ವಿ.ಉಷಾ ಗಣೇಶ್ ಮತ್ತು ಶಿವರಾಜು, ಮೈಸೂರು ಅವರಿಗೂ ಹೃತ್ಪೂರ್ವಕವಾದ ಧನ್ಯವಾದಗಳು.

ನನ್ನ ಸಂಶೋಧನೆಗೆ ಪ್ರೋತ್ಸಾಹಿಸಿದ ಡಾ.ವಿ.ಸಾಂಬಾಜಿರಾವ್, ಡಾ.ಗೋವಿಂದ ಶೆಟ್ಟಿ, ಬಿ.ಎಸ್. ಚೇತನಾ, ಎಂ.ಎಸ್.ಪ್ರಸನ್ನ ಕುಮಾರ್, ಕೆ.ಎಸ್. ಗಂಗರಾಜು ನಾಯಕ್, ಸೈಫುಲ್ಲಾಖಾನ್, ಡಾ.ಮೊಹಮ್ಮದ್ ಮಂಜೂರ್ ಹುಸೇನ್, ಡಾ.ಅಬ್ದುಲ್ ರಜಾಕ್ ಎನ್ ಮಿರ್ಜಿ, ಜಿ.ಎ.ಸಲಗರ್ ಅವರಿಗೂ ಧನ್ಯವಾದಗಳು.

ನನ್ನ ಸಂಶೋಧನೆಗೆ ಅಗತ್ಯವಾದ ಆಕರಗಳನ್ನು ಒದಗಿಸಿದ ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು ಹಾಗೂ ದೇವನಹಳ್ಳಿ ತಾಲೂಕಿನ ದೇವಾಲಯಗಳ ಪಟ್ಟಿಯನ್ನು ಒದಗಿಸಿದ ಮುಜರಾಯಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ರವರಿಗೂ ಧನ್ಯವಾದಗಳು.

ನನ್ನ ಸಂಶೋಧನಾ ಕಾರ್ಯಕ್ಕೆ ಆಕರ ಗ್ರಂಥಗಳನ್ನು ಒದಗಿಸಿದ ಕನ್ನಡ ವಿಶ್ವವಿದ್ಯಾನಿಲಯ ಗ್ರಂಥಾಲಯ ಹಂಪಿ, ಬೆಂಗಳೂರಿನ ಮಿಥಿಕ್ ಸೊಸೈಟಿ, ಐ.ಸಿ.ಹೆಚ್.ಆರ್. ಬೆಂಗಳೂರು, ವಿಶ್ವವಿದ್ಯಾನಿಲಯ ಗ್ರಂಥಾಲಯ, ಮಾನಸಗಂಗೋತ್ರಿ, ಮೈಸೂರು, ಭಾರತೀಯ ಪುರಾತತ್ವ ಸರ್ವೇಕ್ಷಣ ಗ್ರಂಥಾಲಯ, ಮೈಸೂರು, ಕೇಂದ್ರ ಗ್ರಂಥಾಲಯ, ಕಬ್ಬನ್ ಪಾರ್ಕ್, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ರಾಜ್ಯ ಪತ್ರಾಗಾರ ಇಲಾಖೆ, ವಿಧಾನಸೌಧ, ಬೆಂಗಳೂರು ಈ ಎಲ್ಲಾ ಗ್ರಂಥಾಲಯಗಳ ಎಲ್ಲಾ ಸಿಬ್ಬಂದಿ ವರ್ಗದವರಿಗೆ ನಾನು ಆಭಾರಿಯಾಗಿದ್ದೇನೆ.

ದೇವನಹಳ್ಳಿ ತಾಲೂಕಿನ ವಿವಿಧ ಕಡೆ ದೊರಕಿದ ಅಪ್ರಕಟಿತ ಶಾಸನಗಳು ಮತ್ತು ಶಾಸನೋಕ್ತ ವೀರಗಲ್ಲುಗಳನ್ನು ಅರ್ಥೈಸಲು ಸಹಕರಿಸಿದ ಡಾ.ಎಸ್.ನಾಗರಾಜಪ್ಪ, ಸಹಾಯಕ ಅಧೀಕ್ಷಕ ಶಾಸನತಜ್ಞ ಮತ್ತು ಆರ್.ವಿ.ಅನಿಲ್ ಕುಮಾರ್, ಶಾಸನತಜ್ಞ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಶಾಸನಶಾಸ್ತ್ರ ಕಛೇರಿ, ಮೈಸೂರು ರವರಿಗೂ ಕೃತಜ್ಞತೆಗಳು.

ತಾಲೂಕಿನ ಪುರಾತತ್ವ ನೆಲೆಗಳು ಮತ್ತು ಸ್ಮಾರಕಗಳ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅಮೂಲ್ಯ ನೆರವು ನೀಡಿದ ಕೊಯಿರಾ ಗ್ರಾಮದ ಕೆ.ಎಸ್.ಕೃಷ್ಣಪ್ಪ ಮತ್ತು ರಾಜಣ್ಣರವರಿಗೂ, ಅರದೇಶಹಳ್ಳಿ ಗೋಪಾಲ, ಆವತಿ ರೈಲ್ವೆ ಆನಂದ್, ವಿಜಯಪುರದ ಕರೆನ್ಸಿ ಮತ್ತು ನಾಣ್ಯ ಸಂಗ್ರಹಕಾರರಾದ ಡಿ.ಕೇಶವಮೂರ್ತಿ, ದೇವನಹಳ್ಳಿ ಶಿಲ್ಪಕಲಾ ಶಾಲೆಯ ಕೆ.ವಿ.ಶಂಕರ ನಾರಾಯಣ ಹಾಗೂ ಡಿ.ಕೆ.ಮಹೇಂದ್ರ ಕುಮಾರ್ ಅವರಿಗೂ ಹೃತ್ಪೂರ್ವಕ ಧನ್ಯವಾದಗಳು.

ದೇವನಹಳ್ಳಿ ತಾಲ್ಲೂಕಿನ ವಿವಿದೆಡೆ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಅಪ್ರಕಟಿತ ಶಾಸನಗಳು ಮತ್ತು ಶಾಸನೋಕ್ತ ವೀರಗಲ್ಲುಗಳನ್ನು ಗುರುತಿಸುವಲ್ಲಿ ನೆರವು ನೀಡಿದ ಕಾರಹಳ್ಳಿ ಪುಟ್ಟೇನಹಳ್ಳಿ ಶಿವಣ್ಣ, ಸಾದಹಳ್ಳಿ ಪದ್ಮ ಮತ್ತು ಮುರುಗೇಶ್, ಜಿ.ಹೊಸಹಳ್ಳಿ ಜಯತೀರ್ಥ ಮತ್ತು ನಾಗೇಂದ್ರರವರ ಕುಟುಂಬ, ಬೊಮ್ಮವಾರದ ರಾಜೇಂದ್ರ ಪ್ರಸಾದ್, ವಿಜಯಪುರದ ವರ್ತಕರಾದ ಅಂಗಡಿ ಜಗನ್ನಾಥ ಜಿ.ವಿ. ಮತ್ತು ಬಿ.ಚಂದ್ರಣ್ಣರವರಿಗೂ ಹೃತ್ಪೂರ್ವಕ ಧನ್ಯವಾದಗಳು.

ನನ್ನ ಸಂಶೋಧನಾ ಕಾರ್ಯಕ್ಕೆ ನೆರವು ನೀಡಿದ ನನ್ನ ಮಿತ್ರರಾದ ಡಿ.ಎಂ.ಮಲ್ಲೇಶ್ ಕುಮಾರ್, ವಿ.ಎ.ಸಂಪತ್ ಕುಮಾರ್, ವಕೀಲರಾದ ಎಸ್.ಚಂದ್ರಶೇಖರ್, ಪ್ರಕಾಶ್ ವಿ. ಹಾಗೂ ವಿ.ರವಿಕುಮಾರ್ ರವರಿಗೆ ಧನ್ಯವಾದಗಳು.

ನನ್ನ ಆಶಯಗಳಿಗೆಲ್ಲ ಬಲನೀಡಿ ಪೋಷಿಸಿ ಸದಾ ನನ್ನ ಶ್ರೇಯಸ್ಸನ್ನು ಬಯಸುತ್ತಿರುವ ನನ್ನ ಅಜ್ಜಿಯವರಾದ ದಿ.ಮಹಬೂಬಿ, ನನ್ನ ತಾಯಿಯಾದ ಶ್ರೀಮತಿ ಷಾಕೀರ ಬೇಗಂ, ಸಹೋದರನಾದ ರಫಿ ಅಹಮದ್ ಎಂ.ಎಸ್., ಸಹೋದರಿಯವರಾದ ಸೊಹರಾಬಾನು ಎನ್., ಉಜಿರಾಬಾನು, ಅತ್ತಿಗೆಯವರಾದ ಸಮೀನಾ ಪರ್ವೀನ್ ತಾಜ್ ಮತ್ತು ಇವರ ಅಣ್ಣನಾದ ಅಲ್ತಾಫ್ ಷರೀಫ್ (ಮುನ್ನಾ), ನನ್ನ ಶ್ರೀಮತಿ ಎಸ್.ರುಕ್ಷಾನ ಮತ್ತು ಮಗನಾದ ಎಸ್.ಹಾರಿಸ್ ಅಹಮದ್ ಮತ್ತು ನನ್ನ ಪ್ರೀತಿಯ ಮೋತಿ ಅವರಿಗೂ ನನ್ನ ಕೃತಜ್ಞತೆಗಳು.

ನನ್ನ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿಕೊಟ್ಟ ಡಾ.ಸನತ್ ಕುಮಾರ್ ಹಾಗೂ ಕೆ.ವಿ.ರಾಘವೇಂದ್ರ ಕುಮಾರ್, ಸತ್ಯಶ್ರೀ ಪ್ರಿಂಟರ್ಸ್, ಬೆಂಗಳೂರು ಅವರಿಗೂ, ನನ್ನ ಮಹಾಪ್ರಬಂಧಕ್ಕೆ ಭೂಪಟಗಳನ್ನು ರಚಿಸಿಕೊಟ್ಟು ಸಹಕರಿಸಿದ ಆತ್ಮೀಯರಾದ ಎನ್.ಶ್ರೀನಾಥ್, ನಂದಿ ಗ್ರಾಫಿಕ್ಸ್ ಮತ್ತು ವೈ.ಅನಿಲ್ ಚಿಕ್ಕಬಳ್ಳಾಪುರ ಅವರಿಗೂ, ಛಾಯಾಚಿತ್ರಗಳನ್ನು ಅಂದವಾಗಿ ತೆಗೆದುಕೊಟ್ಟ ಎನ್.ನಾರಾಯಣಸ್ವಾಮಿ, ಡಿ.ಎನ್. ಡಿಜಿಟಲ್ ಫೋಟೋ ಸ್ಟುಡಿಯೋ, ದೇವನಹಳ್ಳಿ ರವರಿಗೂ, ಅಚ್ಚುಕಟ್ಟಾಗಿ ಬೈಂಡಿಂಗ್ ಮಾಡಿಕೊಟ್ಟಂತಹ ಏಕನಾಥ್, ಮಧುರ ಎಂಟರ್‌ಪ್ರೈಸಸ್, ಮೈಸೂರು ರವರಿಗೂ, ನನ್ನ ಮಹಾಪ್ರಬಂಧದ ರಚನೆಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಬಂಧುಬಾಂಧವರು ಹಾಗೂ ಎಲ್ಲಾ ಸ್ನೇಹಿತ ವೃಂದಕ್ಕೆ ಕೃತಜ್ಞತೆಗಳು.

**(ಷಫಿ ಅಹಮದ್)**

| | ಪರಿವಿಡಿ | ಪುಟ ಸಂಖ್ಯೆ |
|---|---|---|
| ಅಧ್ಯಾಯ-1 | ಪೀಠಿಕೆ, ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ, ಸ್ವರೂಪ, ಮಹತ್ವ ಹಾಗೂ ಇದೂವರೆಗೂ ನಡೆದಿರುವ ಅಧ್ಯಯನಗಳು | 1 – 18 |
| ಅಧ್ಯಾಯ-2 | ಭೌಗೋಳಿಕ ಲಕ್ಷಣಗಳು | 19 – 33 |
| ಅಧ್ಯಾಯ-3 | ಪ್ರಾಗೈತಿಹಾಸಿಕ ಮತ್ತು ಪುರಾತತ್ವ ನೆಲೆಗಳು | 34 – 56 |
| ಅಧ್ಯಾಯ-4 | ರಾಜಕೀಯ ಇತಿಹಾಸ ಮತ್ತು ಪ್ರಾದೇಶಿಕ ಆಡಳಿತ ವಿಭಾಗಗಳು | 57 – 110 |
| ಅಧ್ಯಾಯ-5 | ದೇವಾಲಯಗಳು, ಮಸೀದಿ-ದರ್ಗಾಗಳು, ಚರ್ಚ್‌ಗಳು, ಜೈನಬಸದಿಗಳ ಕಲೆ ಮತ್ತು ವಾಸ್ತುಶಿಲ್ಪ | 111 – 197 |
| ಅಧ್ಯಾಯ-6 | ದೇವನಹಳ್ಳಿ ತಾಲೂಕಿನ ಕೋಟೆಗಳು ಮತ್ತು ಸ್ಮಾರಕಗಳು | 198-226 |
| ಅಧ್ಯಾಯ-7 | ಶಿಲ್ಪಗಳು, ವೀರಗಲ್ಲು, ಮಾಸ್ತಿಗಲ್ಲುಗಳು ಮತ್ತು ಅಪ್ರಕಟಿತ ಶಾಸನಗಳು | 227-258 |
| ಅಧ್ಯಾಯ-8 | ಸಾಂಸ್ಕೃತಿಕ ಪರಂಪರೆಯ ವೈಶಿಷ್ಟ್ಯತೆಗಳು | 259 – 273 |
| ಅಧ್ಯಾಯ-9 | ಉಪಸಂಹಾರ | 274 – 278 |
| ಅನುಬಂಧಗಳು | | |
| | ಪರಾಮರ್ಶನ ಗ್ರಂಥಗಳು | 279 – 289 |
| | ಭೂಪಟಗಳು | |
| | ತಳನಕ್ಷೆಗಳು | |
| | ದೇವಾಲಯಗಳ ಪಟ್ಟಿ | |
| | ಛಾಯಾ ಚಿತ್ರಗಳು | |

**ಸಂಕೇತಾಕ್ಷರಗಳು**

| | | |
|---|---|---|
| ಎಂ.ಎ.ಆರ್. | – | ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ |
| ಎ.ಕ.ಸಂ. | – | ಎಪಿಗ್ರಾಫಿಯ ಕರ್ನಾಟಿಕ ಸಂಪುಟ |
| QJMS | | Quarterly Journal of Mythic Society |
| ಡಿ.ವಿ. | – | ದೇವನಹಳ್ಳಿ |
| ಡಿ.ಬಿ. | – | ದೊಡ್ಡಬಳ್ಳಾಪುರ |
| ಸಿ.ಬಿ. | – | ಚಿಕ್ಕಬಳ್ಳಾಪುರ |
| ಹೆಚ್.ಟಿ. | – | ಹೊಸಕೋಟೆ |
| ಕೆ.ಎನ್. | – | ಕನಕಪುರ |
| ಎನ್.ಎಲ್. | – | ನೆಲಮಂಗಲ |
| ಸಿ.ಪಿ. | – | ಚನ್ನಪಟ್ಟಣ |
| ಎಂ.ಎ. | – | ಮಾಗಡಿ |
| ಬಿ.ಎನ್. | – | ಬೆಂಗಳೂರು |
| ಶಾ.ಸಂ. | – | ಶಾಸನ ಸಂಖ್ಯೆ |
| ಚ.ಕಿ.ಮೀ | – | ಚದರ ಕಿಲೋ ಮೀಟರ್ |
| ಕಿ.ಮೀ | – | ಕಿಲೋ ಮೀಟರ್ |
| ಮೀ. | – | ಮೀಟರ್ |
| ಚಿ.ಸಂ. | – | ಚಿತ್ರಸಂಖ್ಯೆ |
| ಪು.ಸಂ. | – | ಪುಟ ಸಂಖ್ಯೆ |

# ಅಧ್ಯಾಯ-1

## ಪೀಠಿಕೆ, ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ, ಸ್ವರೂಪ, ಮಹತ್ವ ಹಾಗೂ ಇದೂವರೆಗೂ ನಡೆದಿರುವ ಅಧ್ಯಯನಗಳು

### ಪೀಠಿಕೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಗಳು ಪ್ರಾಚೀನವಾದುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲೂಕುಗಳಲ್ಲಿ ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿವೆ.ಜಿಲ್ಲೆಯಲ್ಲಿ ದೊಡ್ಡಬಳ್ಳಾಪುರ ತಾಲೂಕಿನ ಘಾಟಿ ಸುಬ್ರಮಣ್ಯ ದೇವಾಲಯ, ನೆಲಮಂಗಲ ತಾಲೂಕಿನಲ್ಲಿರುವ ಶಿವಗಂಗೆ ಬೆಟ್ಟ ಮತ್ತು ಶಿವಗಂಗೆ ವಿಜಯ ವಿಠಲ ದೇವಾಲಯ, ಶಿವಗಂಗೆಯು ಕುಮದ್ವತಿ ನದಿಯ ಉಗಮ ಸ್ಥಾನ,[1] ಮತ್ತು ರಾಜಘಟ್ಟ (ಬೌದ್ಧನೆಲೆ)ಮುಂತಾದವು ಪ್ರೇಕ್ಷಣೀಯ ಸ್ಥಳಗಳಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಒಂದಾಗಿದೆ. ಕರ್ನಾಟಕ ಸರ್ಕಾರ ಬೆಂಗಳೂರು ಜಿಲ್ಲೆಯನ್ನು ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರ ಜಿಲ್ಲೆಯೆಂದು ವಿಭಜಿಸಿದಾಗ ದಿನಾಂಕ:15-08-1986ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಉದಯಿಸಿತು.[2]ಈ ಜಿಲ್ಲೆಯಲ್ಲಿ ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ, ಹೊಸಕೋಟೆ, ರಾಮನಗರ, ಚನ್ನಪಟ್ಟಣ, ಮಾಗಡಿ ಮತ್ತು ಕನಕಪುರ ಎಂಬ 8 ತಾಲೂಕುಗಳಿದ್ದವು.[3]ತದನಂತರ 2008ರಲ್ಲಿ ಕರ್ನಾಟಕ ಸರ್ಕಾರವು ಆಡಳಿತಾತ್ಮಕ ಹಿತದೃಷ್ಟಿಯಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ವಿಭಜಿಸಿ ರಾಮನಗರ ಜಿಲ್ಲೆಯನ್ನು ಸೃಷ್ಟಿಸಿತು. ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ನೆಲಮಂಗಲ ಎಂಬ ನಾಲ್ಕು ತಾಲೂಕುಗಳಿವೆ[4]

ದೇವನಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲೂಕು ಕೇಂದ್ರ. ದೇವನಹಳ್ಳಿ ತಾಲೂಕಿನ ವಿವಿಧ ಪ್ರದೇಶಗಳಲ್ಲಿ ಪುರಾತತ್ವ ನೆಲೆಗಳು ಕಂಡುಬಂದಿವೆ. ತಾಲೂಕಿನ ಕುಂದಾಣ (ಹೊಯ್ಸಳ ರಾಮನಾಥನ ರಾಜಧಾನಿ) ಆವತಿ (ನಾಡಪ್ರಭುಗಳ ಆಳ್ವಿಕೆ-ಕೆಂಪೇಗೌಡನ ವಂಶಸ್ಥರು) ದೇವನಹಳ್ಳಿ ಟಿಪ್ಪುವಿನ ಜನ್ಮಸ್ಥಳ ಮತ್ತು ಕೋಟೆ, ವಿಜಯಪುರದ ಪುರಾತನ ದೇವಾಲಯಗಳು, ನಲ್ಲೂರಿನ ಹುಣಸೇತೋಪು-ಭಾರತದ ಮೊದಲ

ಜೀವವೈವಿದ್ಯತೆಯ ಪಾರಂಪರಿಕ ತಾಣ ಹಾಗೂ ಪ್ರಸ್ತುತ ಬೆಂಗಳೂರು ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಹೆಸರಾಗಿವೆ.

**ಅಧ್ಯಯನದ ಉದ್ದೇಶ:**

ಪ್ರಾಗೈತಿಹಾಸಿಕ ಕಾಲದಿಂದ ಮೈಸೂರಿನ ಒಡೆಯರ್‌ರವರ ಕಾಲದವರೆಗಿನ ಕುರುಹುಗಳಾದ ಪ್ರಾಗೈತಿಹಾಸಿಕ ಕಾಲದ ಅವಶೇಷಗಳು, ಪುರಾತತ್ವ ನೆಲೆಗಳು, ಶಾಸನಗಳು, ದೇವಾಲಯಗಳು, ಜೈನ ಬಸದಿಗಳು, ಮಸೀದಿ, ದರ್ಗಾಗಳು, ಚರ್ಚ್‌ಗಳು, ಮೂರ್ತಿಶಿಲ್ಪಗಳು, ಕೋಟೆಗಳು, ಲೌಕಿಕ ಕಟ್ಟಡಗಳು, ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು, ಸಾಂಸ್ಕೃತಿಕ ಪರಂಪರೆಯ ಅಂಶಗಳು ಮುಂತಾದವುಗಳ ಮೂಲಕ ದೇವನಹಳ್ಳಿ ತಾಲೂಕಿನ ಇತಿಹಾಸವನ್ನು ತಿಳಯುವುದು. ಈ ಅಧ್ಯಯನದ ಪ್ರಮುಖ ಉದ್ದೇಶವೇನೆಂದರೆ ದೇವನಹಳ್ಳಿ ತಾಲೂಕು ಕುರಿತಂತೆ ಇದುವರೆವಿಗೂ ಹೆಚ್ಚಿನ ಅಧ್ಯಯನ ಮತ್ತು ಸಂಶೋಧನೆಗಳು ನಡೆದಿರುವುದಿಲ್ಲ ಸಣ್ಣಪುಟ್ಟ ಬಿಡಿ ಲೇಖನಗಳು ಮತ್ತು ಕೈಪಿಡಿಗಳು ಪ್ರಕಟವಾಗಿವೆ. ಆದ್ದರಿಂದ ಈ ಕೊರತೆಯನ್ನು ನೀಗಿಸಲು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕಲೆ ಮತ್ತು ವಾಸ್ತುಶಿಲ್ಪ ಇದರಲ್ಲಿ ದೇವಾಲಯಗಳು ಮತ್ತು ಇತರೆ ಧಾರ್ಮಿಕ ಕಟ್ಟಡಗಳು, ಸ್ಮಾರಕಗಳು, ಪಾರಂಪರಿಕ ಮತ್ತು ಸಾಂಸ್ಕೃತಿಕ ಅಂಶಗಳು, ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳನ್ನು ಅಧ್ಯಯನ ಮಾಡಿ ಕ್ಷೇತ್ರಕಾರ್ಯವನ್ನು ಕೈಗೊಂಡು, ಮಾರ್ಗದರ್ಶಕರ ಸಲಹೆ ಸೂಚನೆಗಳನ್ನು ಪಡೆದುಕೊಂಡು ಇಡೀ ತಾಲೂಕಿನ ಮೇಲ್ಕಂಡ ವಿವರಣೆಗಳನ್ನು ಲಭ್ಯವಿರುವ ಪ್ರಸ್ತುತ ಮೂಲಧಾರಗಳ ಸಹಾಯದಿಂದ ಸಂಶೋಧನಾತ್ಮಕವಾಗಿ ಮತ್ತು ವಿವರಣಾತ್ಮಕವಾಗಿ ಪರಿಶೀಲಿಸಲಾಗಿದೆ. ತಾಲೂಕಿನ ಪ್ರಾಗೈತಿಹಾಸಿಕ ಅವಶೇಷಗಳು ಮತ್ತು ಪ್ರಾಚೀನ ದೇವಾಲಯಗಳನ್ನು ಹಾಗೂ ಸಾಂಸ್ಕೃತಿಕ ಪರಂಪರೆಯ ಅಂಶಗಳನ್ನು ಗುರುತಿಸಿ ವಾಸ್ತುಶಿಲ್ಪ, ಶಿಲ್ಪಕಲೆ, ಚಿತ್ರಕಲೆ, ಸಂಸ್ಕೃತಿ ಮುಂತಾದ ವಿಷಯಗಳನ್ನು ಬೆಳಕಿಗೆ ತರಲು ಪ್ರಯತ್ನಿಸಲಾಗಿದೆ. ಮತ್ತು ಸಂಬಂಧಪಟ್ಟ ಶಾಸನಗಳ ಮೂಲಕ ಮಾಹಿತಿ ಪಡೆದುಕೊಂಡು ದೇವಾಲಯಗಳನ್ನು ದಾಖಲೀಕರಣ ಮಾಡುವ ಉದ್ದೇಶದಿಂದಲೂ ಸಹ ಪ್ರಸ್ತುತ ಸಂಶೋಧನಾ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ತಾಲೂಕಿನಲ್ಲಿ ಜಾಗತೀಕರಣ, ನಗರೀಕರಣ ಮತ್ತು ಬೇರೆ ಕಡೆಯಿಂದ ಜನರ ವಲಸೆ ಕಂಡುಬಂದಿದ್ದು ಇವುಗಳು ಸಾಂಸ್ಕೃತಿಕ ಪರಂಪರೆ ಮೇಲೆ ಪ್ರಭಾವ ಬೀರಿದ್ದು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಭಾಗದ ಸ್ಮಾರಕಗಳು ಮತ್ತು ಐತಿಹಾಸಿಕ ಪರಂಪರೆಯ ಅಧ್ಯಯನವು ಅತ್ಯಂತ ಅವಶ್ಯಕವೆಂದು ಮನಗಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ವಿಧಾನ:**

ಸಂಶೋಧನಾ ಪ್ರಬಂಧವನ್ನು ರಚಿಸುವಲ್ಲಿ ಕ್ರಮಬದ್ಧವಾದ ಯೋಜಿತ ಅಧ್ಯಯನ ಕ್ರಮವನ್ನು ಅನುಸರಿಸುವುದು ಅತಿಮುಖ್ಯವಾಗಿರುತ್ತದೆ.ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಮತ್ತು ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ.ಪ್ರಸ್ತುತ ಸಂಶೋಧನಾ ಅಧ್ಯಯನವು "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕು–ಒಂದು ವಿವರಣಾತ್ಮಕ ಅಧ್ಯಯನ" ಎಂಬ ಶೀರ್ಷಿಕೆಯನ್ನು ಹೊಂದಿದ್ದು ಅದನ್ನು ಮುಂದಿನ ಕ್ರಮದಲ್ಲಿ ಅನುಸರಿಸಲಾಗಿದೆ.ಮೊದಲಿಗೆ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿಯನ್ನು ತಯಾರಿಸಿ ಆಕಾರಾದಿಯಾಗಿ ಸಿದ್ಧಪಡಿಸಿಕೊಳ್ಳಲಾಯಿತು. ಮಾಹಿತಿ ಸಂಗ್ರಹಣೆ (ಪ್ರಾಥಮಿಕ ಮತ್ತು ದ್ವಿತೀಯ ಆಕರಗಳು) ಯನ್ನು ಮಾಡಲಾಯಿತು. ಕ್ಷೇತ್ರಕಾರ್ಯವನ್ನುಕೈಗೊಳ್ಳಲಾಯಿತು. ದತ್ತಾಂಶ ಸಂಗ್ರಹಣೆ ಮಾಡಿಕೊಂಡು, ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಈಗಾಗಲೇ ಪ್ರಕಟವಾಗಿರುವ ಲೇಖನ, ಗ್ರಂಥಗಳು, ನಿಯತಕಾಲಿಕೆಗಳು, ಪತ್ರಿಕೆಗಳು, ಕೃತಿಗಳು, ಉಪನ್ಯಾಸ ಮತ್ತು ವಿಚಾರ ಸಂಕಿರಣಗಳು ಮುಂತಾದವುಗಳ ಮೂಲಕ ವಿಶ್ಲೇಷಣೆ ಮತ್ತು ವಿಮರ್ಶಾತ್ಮಕ ಹಾಗೂ ವಿವರಣಾತ್ಮಕ ದೃಷ್ಟಿಕೋನದ ಮೂಲಕ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಪುರಾತತ್ವ ಅವಶೇಷಗಳ ನೆಲೆಗಳು, ದೇವಾಲಯಗಳು, ಕೋಟೆ, ಶಾಸನಗಳು ಮುಂತಾದವುಗಳ ಛಾಯಾಚಿತ್ರಗಳನ್ನು ತೆಗೆದು ಅವುಗಳನ್ನು ಕ್ರಮಬದ್ಧವಾಗಿ ವಿಭಾಗಿಸಿಕೊಂಡು ಅಗತ್ಯವೆನಿಸಿದ ಕಡೆ ಸ್ಥಳೀಯರಿಂದ ಮೌಖಿಕ ಮಾಹಿತಿಯನ್ನು ಸಂಗ್ರಹಿಸಲಾಯಿತು. ನಂತರ ಇವೆಲ್ಲವುಗಳನ್ನು ಕ್ರೋಢಿಕರಿಸಿಕೊಂಡು ವಿಶ್ಲೇಷಿಸಿ ಸಂಶೋಧನಾತ್ಮಕವಾಗಿ ಬರವಣಿಗೆಯನ್ನು ಕೈಗೊಳ್ಳಲಾಯಿತು. ಇದರ ಜೊತೆಗೆ ಅಧ್ಯಯನದ ಸಾಧನಗಳಾಗಿ ಕ್ಷೇತ್ರಕಾರ್ಯ ಸಂದರ್ಭಗಳಲ್ಲಿ ಕ್ಯಾಮೆರಾ, ಟೇಪ್‌ರೆಕಾರ್ಡ್‌ರ್, ಲ್ಯಾಪ್‌ಟಾಪ್, ಪ್ರೊಜೆಕ್ಟರ್, ಭೂಪಟ, ಅಂತರ್ಜಾಲದ ಮೂಲಕ ನಕ್ಷೆಗಳ ಪಡೆಯುವಿಕೆ, ಛಾಯಾಚಿತ್ರಗಳು ಡ್ರೋಣ್ ಕ್ಯಾಮರಾ ಮುಖಾಂತರ ಛಾಯಾಚಿತ್ರ ಪಡೆದಿರುವುದು ಇವೇ ಮುಂತಾದ ಸಾಧನಗಳನ್ನು ಬಳಸಿಕೊಂಡು ಮಾಹಿತಿಯನ್ನು ಕಲೆಹಾಕಲಾಗಿದೆ. ಈ ಮೇಲಿನ ವಿಧಾನಗಳನ್ನು ಅನುಸರಿಸಿ ಪ್ರಸ್ತುತ ಅಧ್ಯಯನವನ್ನು ಪೂರ್ಣಗೊಳಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ:**

ಪ್ರಸ್ತುತ ಅಧ್ಯಯನವು ದೇವನಹಳ್ಳಿ ತಾಲೂಕಿನ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿದೆ.ದೇವನಹಳ್ಳಿ ತಾಲೂಕಿನ ನಾಲ್ಕು ಹೋಬಳಿಗಳು, ದೇವನಹಳ್ಳಿ ಮತ್ತು ವಿಜಯಪುರ

ಪುರಸಭೆ ವ್ಯಾಪ್ತಿಯ ಪ್ರದೇಶಗಳನ್ನು ಒಳಗೊಂಡಿದ್ದು ಕಾಲಮಿತಿಯನ್ನು ಪ್ರಾಗೈತಿಹಾಸಿಕ ಕಾಲದಿಂದ ಮೈಸೂರು ಒಡೆಯರ್‌ರವರ ಆಳ್ವಿಕೆಯ ಕಾಲದವರೆಗೆ ಸೀಮಿತಗೊಳಸಲಾಗಿದೆ.

**ಅಧ್ಯಯನದ ಸ್ವರೂಪ:**

ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕು ಒಂದು ವಿವರಣಾತ್ಮಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡುವ ದೃಷ್ಟಿಯಿಂದ ಒಂಬತ್ತು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದ್ದು ಅವುಗಳ ವಿವರ ಈ ಕೆಳಕಂಡಂತೆ ತಿಳಸಲಾಗಿದೆ.

ಅಧ್ಯಾಯ-1ರಲ್ಲಿ ಪೀಠಿಕೆ, ಅಧ್ಯಯನದ ಉದ್ದೇಶ, ಅಧ್ಯಯನದ ವಿಧಾನ, ಅಧ್ಯಯನದ ವ್ಯಾಪ್ತಿ, ಸ್ವರೂಪ, ಅಧ್ಯಯನದ ಮಹತ್ವಗಳನ್ನು ಒಳಗೊಂಡಿದ್ದು, ಈ ಅಧ್ಯಾಯದಲ್ಲಿ ದೇವನಹಳ್ಳಿ ತಾಲೂಕಿಗೆ ಸಂಬಂಧಿಸಿದಂತೆ ಸ್ಥಳೀಯ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಡುವ ನಿಟ್ಟಿನಲ್ಲಿ ಈ ಅಧ್ಯಯನದ ಅಗತ್ಯತೆಯನ್ನು ಚರ್ಚಿಸಲಾಗಿದ್ದು ಹಾಗೂ ಇದೂವರೆವಿಗೂ ನಡೆದಿರುವ ಅಧ್ಯಯನಗಳ ಬಗ್ಗೆ ತಿಳಸಲಾಗಿದೆ.

ಅಧ್ಯಾಯ-2ರಲ್ಲಿ ಭೌಗೋಳಿಕ ಲಕ್ಷಣಗಳ ಬಗ್ಗೆ ವಿವರಿಸಲಾಗಿದೆ. ದೇವನಹಳ್ಳಿ ತಾಲೂಕಿನ ನೆಲ-ಜಲ, ಈ ಪ್ರದೇಶಗಳಲ್ಲಿ ವಾಸಿಸುವ ಪ್ರಾಣಿ-ಪಕ್ಷಿಗಳು, ವಿವಿಧ ರೀತಿಯ ವೃಕ್ಷಗಳು, ಇಲ್ಲಿ ಬೆಳೆಯಲ್ಪಡುವ ಬೆಳೆಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ-3ರಲ್ಲಿಪ್ರಾಗೈತಿಹಾಸಿಕ ನೆಲೆಗಳು ಮತ್ತು ಪುರಾತತ್ವಗಳ ಬಗ್ಗೆ ವಿವರಿಸಲಾಗಿದೆ. ಈ ಪ್ರದೇಶವು ಇತಿಹಾಸ ಪೂರ್ವಕಾಲದಿಂದಲೂ ಮಾನವನ ವಸತಿ ಪ್ರದೇಶವಾಗಿತ್ತೆಂಬುದಕ್ಕೆ ಈ ತಾಲೂಕಿನಲ್ಲಿ ಕಂಡುಬರುವ ಕಬ್ಬಿಣಯುಗ ಅಥವಾ ಬೃಹತ್‌ಶಿಲಾಯುಗದ ಕಿಂಡಿಕೋಣೆ ಗೋರಿಗಳು ಮತ್ತು ನಿಲುಸುಗಲ್ಲುಗಳು ಹಾಗೂ ಈ ಪ್ರದೇಶದಲ್ಲಿ ದೊರೆತಿರುವ ಮಡಿಕೆ ಚೂರುಗಳು , ಇತಿಹಾಸ ಪೂರ್ವಕಾಲದ ಸಾಕ್ಷಿಯಾಗಿವೆ. ಈ ಹಿನ್ನೆಲೆಯಲ್ಲಿ ಈ ತಾಲೂಕಿನ ಪೂರ್ವೇತಿಹಾಸವನ್ನು ಚರ್ಚಿಸಲಾಗಿದೆ.

ಅಧ್ಯಾಯ-4ರಲ್ಲಿಈ ಪ್ರದೇಶವನ್ನು ಆಳ್ವಿಕೆ ಮಾಡಿದ ಗಂಗರು, ಚೋಳರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು, ಆವತಿ ನಾಡಪ್ರಭುಗಳು, ಪಾಳೆಗಾರರು, ನಲ್ಲೂರು ನಾಯಕರು, ಮೈಸೂರಿನ ಒಡೆಯರು, ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನ್, ಅಂತಿಮವಾಗಿ

ಮೈಸೂರು ಒಡೆಯರ್‌ರವರ ಆಳ್ವಿಕೆಗೆ ಈ ತಾಲೂಕು ಯಾವ ರೀತಿಯಾಗಿ ಒಳಪಟ್ಟಿತ್ತು ಎಂಬ ವಿಷಯವನ್ನು ಕುರಿತು ವಿಸ್ತೃತವಾಗಿ ಚರ್ಚಿಸಲಾಗಿದೆ.

ಅಧ್ಯಾಯ-5ರಲ್ಲಿಈ ತಾಲೂಕಿನ ದೇವಾಲಯಗಳು (ಶೈವ, ವೈಷ್ಣವ, ಶಾಕ್ತ) ಜೈನಬಸದಿಗಳು, ಮಸೀದಿ, ದರ್ಗಾಗಳು, ಚರ್ಚುಗಳ ಕಲೆ ಮತ್ತು ವಾಸ್ತುಶಿಲ್ಪ, ಅವುಗಳ ಶೈಲಿ, ಕಾಲ, ಪ್ರಸ್ತುತ ಅವುಗಳ ಸ್ಥಿತಿಗತಿಗಳ ನಿರ್ವಹಣೆ ಮುಂತಾದ ವಿಷಯಗಳನ್ನು ಮತ್ತು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ವಿವರಿಸಲಾಗಿದೆ.

ಅಧ್ಯಾಯ-6ರಲ್ಲಿದೇವನಹಳ್ಳಿ ತಾಲೂಕಿನಲ್ಲಿ ಕಂಡುಬರುವ ಕೋಟೆಗಳನ್ನು ವಿಜಯನಗರ ಕಾಲದ ಮತ್ತು ವಿಜಯನಗರೋತ್ತರ ಕಾಲದ ಕೋಟೆಗಳೆಂದು ವಿಭಜಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವುಗಳ ಜೊತೆಗೆ ಲೌಕಿಕ ಕಟ್ಟಡಗಳು ಮತ್ತು ಇತರೆ ಸ್ಮಾರಕಗಳ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ-7ರಲ್ಲಿ ಶಿಲ್ಪಗಳು, ವೀರಗಲ್ಲು, ಮಾಸ್ತಿಗಲ್ಲುಗಳು ಮತ್ತು ಅಪ್ರಕಟಿತ ಶಾಸನಗಳ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ-8ರಲ್ಲಿ ಈ ತಾಲೂಕಿನಲ್ಲಿ ಕಂಡುಬರುವಸಾಂಸ್ಕೃತಿಕ ಪರಂಪರೆಯ ಅಂಶಗಳಲ್ಲಿಶಿಲ್ಪಕಲೆ, ಚಿತ್ರಕಲೆ, ಕುಸ್ತಿ, ಚಕ್ಕೋತ ಹಣ್ಣು, ಕೊಯಿರಾ ಗ್ರಾನೈಟ್ ಕಲ್ಲು, ನಲ್ಲೂರು ಹುಣಸೆ ತೋಪು, ಕರಗ ಉತ್ಸವ ಮುಂತಾದವುಗಳ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ-9ಉಪಸಂಹಾರವಾಗಿದ್ದು ಮೇಲೆ ತಿಳಿಸಿರುವ ಒಟ್ಟಾರೆ ಎಲ್ಲಾ ಅಧ್ಯಾಯಗಳ ಬಗ್ಗೆ ಕೂಲಂಕುಷವಾಗಿ ಚರ್ಚಿಸಲಾಗಿದ್ದು ಸಂಶೋಧನೆಯ ಫಲಿತಗಳನ್ನು ತಿಳಿಸಲಾಗಿದೆ.

**ಅಧ್ಯಯನದ ಮಹತ್ವ:**

ದೇವನಹಳ್ಳಿ ತಾಲೂಕಿನ ಕೊಯಿರಾ, ಹೊಸೂರು, ಮನಗೊಂಡನಹಳ್ಳಿ, ಅರುವನಹಳ್ಳಿ ಮುಂತಾದ ಕಡೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬೃಹತ್ ಶಿಲಾಯುಗದ ಗೋರಿಗಳು ಮತ್ತು ನಿಲುಸುಗಲ್ಲುಗಳು ಕಂಡುಬಂದಿವೆ. ಇವು ಹೆಚ್ಚು ವಿಸ್ತಾರ ಪ್ರದೇಶದಲ್ಲಿ ವ್ಯಾಪಿಸಿಕೊಂಡಿವೆ. ರಾಜ್ಯದಲ್ಲಿ ಹಲವಾರು ಕೋಟೆಗಳು ಅಸ್ತಿತ್ವದಲ್ಲಿದ್ದು ಅದರಲ್ಲಿ ಉತ್ತಮ ಸ್ಥಿತಿಯಲ್ಲಿರುವ ಅತ್ಯುತ್ತಮ ಕೋಟೆಗಳಲ್ಲಿ ದೇವನಹಳ್ಳಿ ಕೋಟೆಯು ಸಹ ಒಂದಾಗಿದೆ. ದೇವನಹಳ್ಳಿ ತಾಲೂಕು ಸಾಂಸ್ಕೃತಿಕ ಪರಂಪರೆ ಅಂಶಗಳಾದ ಶಿಲ್ಪಕಲೆ ಮತ್ತು ಶಿಲ್ಪಿಗಳು, ಚಿತ್ರಕಲೆ, ಚಕ್ಕೋತ ಹಣ್ಣು, ಭಾರತದ ಮೊದಲನೆ ಜೀವ ವೈವಿಧ್ಯ ಪಾರಂಪರಿಕ ತಾಣ

ಎನಿಸಿರುವ ನಲ್ಲೂರು ಹುಣಸೆ ತೋಪು, ಕೊಯಿರಾ ಬಂಡೆಕಲ್ಲು, 108 ಪಾರ್ಶ್ವನಾಥ ಜೈನ ಬಸದಿ, ಕರಗ ಉತ್ಸವ, ಕುಸ್ತಿ, ಲಕ್ಷ ದೀಪೋತ್ಸವ ಮುಂತಾದವುಗಳಿಗೆ ಹೆಸರಾಗಿದೆ. ಈ ಅಧ್ಯಯನವು ದೇವನಹಳ್ಳಿ ತಾಲೂಕಿನ ಪುರಾತತ್ವ ನೆಲೆಗಳು, ದೇವಾಲಯಗಳು ಮತ್ತು ಇತರೆ ಧಾರ್ಮಿಕ ಕಟ್ಟಡಗಳು, ಸ್ಮಾರಕಗಳು, ಲೌಕಿಕ ಕಟ್ಟಡಗಳು ಸಾಂಸ್ಕೃತಿಕ ಪರಂಪರೆ ಮುಂತಾದ ಅಂಶಗಳ ಬಗ್ಗೆ ವಿವರಣಾತ್ಮಕವಾಗಿ ಅಭ್ಯಸಿಸಿ, ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಇವುಗಳ ಮಹತ್ವವನ್ನು ಬೆಳಕಿಗೆ ತಂದು ಅವುಗಳನ್ನು ಮುಂದಿನ ತಲೆಮಾರಿಗೆ ಕಾಯ್ದಿರಿಸಬೇಕು ಮತ್ತು ಉಳಸಿಕೊಂಡು ಸಂರಕ್ಷಿಸಬೇಕು ಎಂಬ ಉದ್ದೇಶವನ್ನು ಹೊಂದಲಾಗಿದೆ.

**ಇದುವರೆವಿಗೂ ನಡೆದಿರುವ ಅಧ್ಯಯನಗಳು**:

ದೇವನಹಳ್ಳಿ ತಾಲೂಕಿನ ದೇವಾಲಯಗಳ ಮತ್ತು ಸಾಂಸ್ಕೃತಿಕ ಅಧ್ಯಯನದ ಬಗ್ಗೆ ಕುರಿತಂತೆ ಸಮಗ್ರವಾದ ಅಧ್ಯಯನ ನಡೆದಿಲ್ಲ. ಕೆಲವು ಅಧ್ಯಯನಗಳು ನಡೆದಿದ್ದರೂ ಅವು ಒಂದು ನಿರ್ದಿಷ್ಟವಾದ ವಿಷಯವನ್ನು ಅಥವಾ ಒಂದು ಸ್ಥಳವನ್ನು ಕುರಿತು ಚರ್ಚಿಸಿವೆ.ಇಡೀ ದೇವನಹಳ್ಳಿ ತಾಲೂಕನ್ನು ಗಮನದಲ್ಲಿಟ್ಟುಕೊಂಡು ಇಲ್ಲಿ ದೊರೆಯುವ ಆಕರಗಳನ್ನು ಬಳಸಿಕೊಂಡು ನಡೆಸಿರುವ ದೇವನಹಳ್ಳಿ ತಾಲೂಕಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರಯ ಅಧ್ಯಯನದ ಕೊರತೆ ಇತ್ತು. ಈ ಕಾರಣದಿಂದ ಇದೇ ಪರಿಸರದವನಾದ ನಾನು ಈ ಭಾಗದಲ್ಲಿ ದೊರಕಿರುವ ಆಕರಗಳನ್ನು ಪ್ರಾಮಾಣಿಕವಾಗಿ ಬಳಸಿಕೊಂಡು, ಈ ತಾಲೂಕಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಿವರಣಾತ್ಮಕ ಅಧ್ಯಯನವನ್ನು ಕೈಕೊಂಡಿದ್ದೇನೆ. ಕೆಲವು ನಿಯತಕಾಲಿಕೆಗಳು, ಬಿಡಿಲೇಖನಗಳು,ಪುಸ್ತಕಗಳು, ಸಂಪುಟಗಳುಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ.

**ಗೋಪಿನಾಥ್,ಟಿ.ಎ**. ಅವರ 'ದಿ ಎಲಿಮೆಂಟ್ಸ್ ಆಫ್ ಹಿಂದೂ ಐಕಾನೋಗ್ರಫಿ' (1911) ಎಂಬ ಗ್ರಂಥದಲ್ಲಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ಉಲ್ಲೇಖಗಳಿವೆ.

**ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ-೨ರಲ್ಲಿ ದೇವನಹಳ್ಳಿ ತಾಲೂಕಿನ ಶಾಸನಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಈ ತಾಲೂಕಿನಲ್ಲಿ ಆಡಳಿತ ನಡೆಸಿದ ಗಂಗರು, ಚೋಳರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಆವತಿ ನಾಡಪ್ರಭುಗಳು, ಹೈದರ್‌ಆಲಿ ಮತ್ತು ಟಿಪ್ಪು ಸುಲ್ತಾನ್ ಅವರು ನೀಡಿದ ದಾನದತ್ತಿಗಳು ಅವರ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳು ಮತ್ತುಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ಮಾಹಿತಿಯನ್ನು ನೀಡುವ ಮೂಲಕ ಪ್ರಾಥಮಿಕ ಆಕಾರವೆನಿಸಿದೆ.

**ರೈಸ್,ಬಿ.ಎಲ್**. ರವರು ಕ್ರಿ.ಶ.1886 ರಿಂದ ಕ್ರಿ.ಶ.1906ರ ವೇಳೆಯಲ್ಲಿ ಹಳೆಯ ಮೈಸೂರು ಸಂಸ್ಥಾನ ಮತ್ತು ಬೆಂಗಳೂರು ಜಿಲ್ಲೆಯಲ್ಲಿ ಕ್ರಮಬದ್ಧವಾಗಿ ಶಾಸನಗಳನ್ನು ಸಂಗ್ರಹಿಸಿ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳನ್ನು ಹೊರತಂದರು.

**ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್:** ಕ್ರಿ.ಶ.1885ರಿಂದ 1947ರವರಗೆ ಬೆಂಗಳೂರು ಜಿಲ್ಲೆಯ ಪುರಾತತ್ವ ನೆಲೆಗಳು, ಭೂಸಂಶೋಧನೆಗಳು, ಭೂಉತ್ಖನನಗಳು, ನಾಣ್ಯಗಳು, ದೇವಾಲಯಗಳ ಬಗ್ಗೆ ವರದಿಗಳಲ್ಲಿ ಆಯಾ ವರ್ಷಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ದೇವಾಲಯಗಳು ಮತ್ತು ಇತರೆ ವಿಷಯಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಅಲ್ಲದೆ ದೇವಾಲಯದಲ್ಲಿರುವ ಶಾಸನಗಳು ಮತ್ತು ದೇವಾಲಯಗಳ ಸ್ಥಿತಿಗತಿ, ಜೀರ್ಣೋದ್ಧಾರ, ಸಂರಕ್ಷಣೆಯ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಈ ವರದಿಗಳಲ್ಲಿ ಪುರಾತತ್ವ ನೆಲೆಗಳ ಬಗ್ಗೆ ಪ್ರಾಥಮಿಕ ಮಾಹಿತಿ ಹಾಗೂ ಕೆಲವು ಪ್ರಮುಖ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಬಗ್ಗೆ ವಿವರಣೆಯನ್ನು ನೀಡುವುದರ ಜೊತೆಗೆ ತಳನಕ್ಷೆಯನ್ನು ನೀಡಿದ್ದಾರೆ.

**ಹಯವದನರಾವ್, ಸಿ**. ಮೈಸೂರು ಗ್ಯಾಜಿಟಿಯರ್, ಸಂಪುಟ-5, ಭಾಗ-1, (ಬೆಂಗಳೂರು, ಕೋಲಾರ, ತುಮಕೂರು, ಮೈಸೂರು) ಬೆಂಗಳೂರು, 1930ರಲ್ಲಿ ಜಿಲ್ಲೆ ಮತ್ತು ತಾಲೂಕಿನ ಬಗ್ಗೆ ಮಾಹಿತಿ ಒದಗಿಸುತ್ತದೆ.

**ಕೃಷ್ಣ,ಎಂ.ಎಚ್**. ಹೊಯ್ಸಳ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಪ್ರಮುಖರು. ಇವರು ಅವುಗಳಲ್ಲಿರುವ ಐತಿಹಾಸಿಕ, ಚಾರಿತ್ರಿಕ, ಧಾರ್ಮಿಕ ವಿಷಯಗಳ ಬಗ್ಗೆ ಬೆಳಕು ಚೆಲ್ಲಿದ್ದಾರೆ.

**ವೆಂಕೋಬರಾಯ, ಬಿ**. ಅವರು 'ಮೈಸೂರು ಜಿಲ್ಲೆಯ ವಾಸ್ತುಶಿಲ್ಪ' (1928) ಎಂಬ ತಮ್ಮ ಗ್ರಂಥದಲ್ಲಿ ಹಳೆಯ ಮೈಸೂರು ರಾಜ್ಯದ ದೇವಾಲಯಗಳನ್ನು ಕುರಿತು ಪರಿಚಯಾತ್ಮಕವಾಗಿ ತಿಳಿಸಿದ್ದಾರೆ. ಮೈಸೂರು ದೇಶದ ವಾಸ್ತುಶಿಲ್ಪದ ಹಿನ್ನೆಲೆ ಕುರಿತು ಬರೆಯುತ್ತಾ 'ದಕ್ಷಿಣ ದೇಶದಲ್ಲಿರುವ ಕಟ್ಟಡಗಳಲ್ಲಿ ಯಾವುದೂ ಪ್ರಾಯಶಃ ಕ್ರಿ.ಶ.6ನೆಯ ಶತಮಾನಕ್ಕಿಂತ ಹಿಂದಿನದಲ್ಲ, ಅಲ್ಲಿಂದ ಮುಂದಕ್ಕೆ ಕಟ್ಟಿದ ಕಟ್ಟಡಗಳು ಯಥೇಚ್ಛವಾಗಿವೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಲ್ಲದೆ ವಿವಿಧ ವಿದ್ವಾಂಸರ ಈವರೆಗಿನ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಪರಿಚಯಿಸಿದ್ದಾರೆ. ಆ ಕಾಲಕ್ಕೆ ಲಭ್ಯವಿದ್ದ ಮಾಹಿತಿಗಳ ಆಧಾರದ ಮೇರೆಗೆ ಆಗಿನ ಮೈಸೂರು ದೇಶದ ಭೌಗೋಳಿಕ ವ್ಯಾಪ್ತಿಗೆ ಅನ್ವಯಿಸಿ ನೋಡಿದಾಗ ಗ್ರಂಥದ ಮಹತ್ವ ತಿಳಿಯುತ್ತದೆ.

**ನರಸಿಂಹಾಚಾರ್,ಆರ್**. ಎಂ.ಎ.ಆರ್.ಗಳಲ್ಲಿ ಹೊಯ್ಸಳರ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಮೊದಲಿಗರು. ಕರ್ನಾಟಕದ ದೇವಾಲಯಗಳ ಬಗ್ಗೆ ವೈಜ್ಞಾನಿಕವಾದ ಮತ್ತು

ಕ್ರಮಬದ್ಧವಾದ ಅಭ್ಯಾಸ ಈ ಕಾಲದಲ್ಲಿಯೇ ಪ್ರಾರಂಭವಾಯಿತು. ಇವರು ಹೊಯ್ಸಳ ದೇವಾಲಯಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಿ ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್‌ಗಳಲ್ಲಿ ಪ್ರಕಟಿಸಿದರು.

**The Bangalore District Hand Book,** Bangalore 1930 ಈ ಕೃತಿಯಲ್ಲಿ ಬೆಂಗಳೂರು ಜಿಲ್ಲೆ ಮತ್ತು ದೇವನಹಳ್ಳಿ ತಾಲೂಕಿನ ಐತಿಹಾಸಿಕ ಮಹತ್ವ ಪಡೆದ ಸ್ಥಳಗಳು, ರೇಷ್ಮೆಬೆಳೆ ಮುಂತಾದವುಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**ಪರ್ಸಿಬ್ರೌನ್**ರವರ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್' (1942) ಎಂಬ ಗ್ರಂಥ ಭಾರತದ ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಉಗಮ ಮತ್ತು ವಿಕಾಸದ ಬಗ್ಗೆ ವಿವರಣೆ ನೀಡುವ ಮಹತ್ವದ ಗ್ರಂಥವಾಗಿದೆ.ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಸಂಶೋಧನೆ ಮಾಡುವವರಿಗೆ ಇದು ಆಧಾರ ಕೃತಿಯಾಗಿದೆ.

**ವಿಲಿಯಂ ಕೊಹಿಲೋ.,** 'ದಿ ಹೊಯ್ಸಳ ವಂಶ' ಮತ್ತು **ಡೇರೆಟ್,ಜೆ.ಡಿ.ಎಂ.,**ರವರ 'ದಿ ಹೊಯ್ಸಳಾಸ್'.**ಷೇಕ್ ಆಲಿ,ಬಿ.,** ಅವರು ಹೊಯ್ಸಳರನ್ನೇ ಕುರಿತು ವಿವಿಧ ಲೇಖನಗಳ ಸಂಗ್ರಹವನ್ನು ಸಂಪಾದಿಸಿರುವ 'ದಿ ಹೊಯ್ಸಳ ಡೈನಾಸ್ಟಿ'ಎಂಬ ಕೃತಿಗಳು ಬಹಳ ಪ್ರಮುಖವಾದವು. ಹೊಯ್ಸಳರ ಕಾಲದ ಶಿಲ್ಪಗಳನ್ನೇ ಕುರಿತಂತೆ ಸಾಕಷ್ಟು ಸಂಶೋಧನೆಗಳು ಸಹ ಆಗಿವೆ. ಇವುಗಳಲ್ಲಿ **ಕೆಲೇಸನ್ ಕೋಲಿಯರ್.,** ಅವರ 'ದಿ ಹೊಯ್ಸಳ ಆರ್ಟಿಸ್ಟ್, ದೇರ್ ಐಡೆಂಟಿಟಿ ಅಂಡ್ ಸ್ಟೈಲ್' ಎಂಬ ಗ್ರಂಥದಲ್ಲಿ ಶಿಲ್ಪಗಳ ಹೆಸರು, ಬಿರುದು ಅವರ ಸಾಮಾಜಿಕ ಮತ್ತು ರಾಜಕೀಯ ಜೀವನಗಳನ್ನು ಕುರಿತು ಚರ್ಚಿಸಲಾಗಿರುತ್ತದೆ.

**ಶ್ರೀನಿವಾಸನ್,ಪಿ.ಆರ್**.ಅವರ 'ದಕ್ಷಿಣ ಭಾರತದ ದೇವಾಲಯಗಳು' (1959) ಎಂಬ ಗ್ರಂಥದಲ್ಲಿ ಆಧ್ಯಾತ್ಮಿಕ ವಿಕಾಸಕ್ಕೆ ದೇಹದಂಡನೆಯ ಪ್ರಯೋಗ ಮಾಡಬೇಕೆಂದು ತಿಳಿದು ಧಾರ್ಮಿಕ ಆಚಾರಗಳು ಹುಟ್ಟಿಕೊಂಡು ದೇವಾಲಯಕ್ಕೆ ಬುನಾದಿಯಾದವೆಂಬ ವಿಚಾರಗಳನ್ನು ಚರ್ಚಿಸಲಾಗಿದೆ. ಜನಪದ ದೇವತೆಗಳಾದ ಗ್ರಾಮದೇವತೆಗಳ ಇಲ್ಲಿ ಬಗ್ಗೆ ವಿವರಗಳಿದ್ದು ಸ್ತ್ರೀ ದೇವತೆಗಳ ಆರಾಧನೆಯ ಬಗ್ಗೆ ವಿವರಗಳಿವೆ. ಗ್ರಾಮ ದೇವತೆಗಳಿಂದ ಶಿಷ್ಟ ದೇವತೆಗಳವರೆಗೆ ಆದ ಧಾರ್ಮಿಕ ಬೆಳವಣಿಗೆಯ ವಿಚಾರಗಳು ಈ ಕೃತಿಯಲ್ಲಿವೆ.

**ಶ್ರೀಕಂಠಶಾಸ್ತ್ರಿ,ಎಸ್**. ಅವರ 'ಹೊಯ್ಸಳ ವಾಸ್ತುಶಿಲ್ಪ', (1965) ಹೊಯ್ಸಳ ವಾಸುಶಿಲ್ಪವನ್ನೇ ವಿಶೇಷವಾಗಿ ಪರಿಶೀಲಿಸಿರುವ ಗ್ರಂಥ. ಇದು ಹೊಯ್ಸಳ ಶೈಲಿಯ ಕೆಲ ದೊಡ್ಡ ಮತ್ತು ಸಣ್ಣ

ದೇವಾಲಯಗಳನ್ನು ಕುರಿತ ಒಂದು ಉತ್ತಮ ಮಾರ್ಗದರ್ಶಕ ಕೃತಿಯಾಗಿದೆ. ಇದರಲ್ಲಿ ಸುಮಾರು 20 ಛಾಯಾಚಿತ್ರಗಳನ್ನು ನೀಡಿದ್ದಾರೆ.

**ಡಾಖೆ,ಎಂ.ಎ.**ಅವರ 'ದ ಇಂಡಿಯನ್ ಟೆಂಪಲ್ಸ್ ಪಾರ್ಮ್' (1977) ಎಂಬ ಗ್ರಂಥದಲ್ಲಿ ಸುಮಾರು 51 ಚಿತ್ರಗಳ ಸಹಿತ ದೇವಾಲಯಗಳ ವಾಸ್ತುಶೈಲಿ ಲಕ್ಷಣಗಳನ್ನು ತಿಳಿಸಿದ್ದಾರೆ.ಪ್ರಾಚೀನ ಗ್ರಂಥಗಳ ಮೂಲ ವಿಚಾರಗಳೊಂದಿಗೆ ಹೋಲಿಸಿ ವಾಸ್ತುವಿನ ಬೆಳೆವಣಿಗೆಯನ್ನು ತಿಳಿಸಲಾಗಿದೆ.ನಾಗರ, ದ್ರಾವಿಡ, ವೇಸರ ಶೈಲಿಯ ಲಕ್ಷಣಗಳ ವಿವರಣೆ ನೀಡಲಾಗಿದೆ. ಹಳೇ ಮೈಸೂರು ಪ್ರಾಂತ್ಯದಲ್ಲಿ ಹೊಯ್ಸಳರ ಕಾಲದಲ್ಲಿ ವೇಸರ ಶೈಲಿ ಅತ್ಯುನ್ನತ ಮಟ್ಟಕ್ಕೇರಿತು ಎಂದು ಅಭಿಪ್ರಾಯಪಟ್ಟಿದ್ದಾರೆ.

ಡಾಖೆ, ಎಂ.ಎ. ಮತ್ತು ಮೈಕಲ್ ಮೈಸ್ಟರ್.,ರವರು ಸಂಪಾದಿಸಿದ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಆಫ್ ಸೌತ್ ಇಂಡಿಯಾ', 'ಲೊಯರ್ ದ್ರಾವಿಡದೇಶ' (1983) 'ಅಪ್ಪರ್ ದ್ರಾವಿಡದೇಶ' (1986)ಎಂಬ ಶಬ್ಧಕೋಶಗಳಲ್ಲಿ (ಭಾಗ 1, 2, 3) ಭಾರತೀಯ ದೇವಾಲಯಗಳ ವಾಸ್ತುಲಕ್ಷಣಗಳ ಸಂಪೂರ್ಣ ವಿವರಣೆಯನ್ನು ನೀಡಲಾಗಿದೆ. ಇವುಗಳಲ್ಲಿ ದ್ರಾವಿಡ ಮತ್ತು ನಾಗರಶೈಲಿಯ ದೇವಾಲಯಗಳನ್ನು ಕುರಿತಂತೆ ಅನೇಕ ವಿಚಾರಗಳಿವೆ.

**ಆಚಾರ್ಯ,ಪಿ.ಕೆ.**ಅವರ 'ಇಂಡಿಯನ್ ಆರ್ಕಿಟೆಕ್ಚರ್' (1979) ಎಂಬ ಗ್ರಂಥದಲ್ಲಿ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ವಿವರಿಸುವ ಪ್ರಾಚೀನ ಸಾಹಿತ್ಯ ಕೃತಿಗಳು ಹಾಗೂ ಶಾಸ್ತ್ರ ಗ್ರಂಥಗಳ ಬಗ್ಗೆ ವಿವರಗಳಿವೆ. ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ಕುರಿತು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿರುವ ವಸ್ತು ವಿಷಯಗಳನ್ನು ಕ್ರೂಡೀಕರಿಸಲಾಗಿದೆ. ಮುಖ್ಯವಾಗಿ ಮಾನಸಾರ, ಮಯಮತ, ಪುರಾಣ, ಆಗಮ, ವೈದಿಕ ಸಾಹಿತ್ಯ, ಬೌದ್ಧ ಸಾಹಿತ್ಯ ಮುಂತಾದವುಗಳನ್ನು ಆಧರಿಸಿ ವಿವರಣೆಯನ್ನು ನೀಡಿದ್ದಾರೆ. ವಾಸ್ತುಶೈಲಿ ಮತ್ತು ಶಿಲ್ಪಗಳ ಅಧ್ಯಯನಕ್ಕೆ ಇದೊಂದು ಆಕರ ಗ್ರಂಥವಾಗಿದೆ ಎಂದರೆ ತಪ್ಪಾಗಲಾರದು.'ಎ ಡಿಕ್ಷನರಿ ಅಫ್ ಹಿಂದೂ ಆರ್ಕಿಟೆಕ್ಚರ್' (1981) ಎಂಬ ಇವರ ಮತ್ತೊಂದು ಗ್ರಂಥದಲ್ಲಿ ದೇವಾಲಯಗಳ ಪ್ರತಿಯೊಂದು ಭಾಗಗಳ ವಿವರಣೆಯನ್ನು ನೀಡಲಾಗಿದೆ. ವಾಸ್ತುಶಿಲ್ಪದ ಅಧ್ಯಯನಕ್ಕೆ ಇದೊಂದು ಮಹತ್ತರ ಗ್ರಂಥವಾಗಿದೆ.

**ಕರ್ನಾಟಕ ಪರಂಪರೆ, ಭಾಗ-1, 2,** ಕರ್ನಾಟಕ ಸರ್ಕಾರ, ಬೆಂಗಳೂರು, 1970 ಮತ್ತು 2014, ಈ ಕೃತಿಯಲ್ಲಿ ಕರ್ನಾಟಕದ ಭೂವಿಕಾಸ, ಪ್ರಾಕೃತಿಕ ಲಕ್ಷಣಗಳು, ಪ್ರಾಕ್ಚಾರಿತ್ರಿಕ, ರಾಜಕೀಯ

ಇತಿಹಾಸ, ಹೈದರ್ ಅಲಿ, ಟಿಪ್ಪುಸುಲ್ತಾನ್, ಆದಿಕಾಲ, ಮಧ್ಯಯುಗ, ಆಧುನಿಕ ಕಾಲದವರೆಗೆ ಮಾಹಿತಿ ಒದಗಿಸುತ್ತದೆ.

**Gururaja Rao. B.K.** The Megalithic Culture in South India, Mysore, 1972 ಈ ಕೃತಿಯಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿ ಮತ್ತು ನೆಲೆಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**ಡಾ. ಷೇಕ್ ಅಲಿ. ಬಿ. ಮತ್ತು ಪ್ರೊ. ಸುಂದರ,ಅ** ಕರ್ನಾಟಕ ಚರಿತ್ರೆ, ಸಂಪುಟ-1-5, ಸಂಪಾದಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಇದು ಕರ್ನಾಟಕ ಚರಿತ್ರೆಯನ್ನು ಮತ್ತು ಇತರೇ ವಿಷಯಗಳನ್ನು ದಾಖಲಿಸಿದೆ.

**ಶೇಷಶಾಸ್ತ್ರಿ, ಆರ್**. ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1982, ಈ ಕೃತಿಯಲ್ಲಿ ವೀರಸ್ಮಾರಕಗಳು, ವೀರಗಲ್ಲುಗಳ ವಿಂಗಡಣೆ, ವೀರಗಲ್ಲುಗಳ ಶಿಲ್ಪಗಳು ಮುಂತಾದವುಗಳ ಬಗ್ಗೆ ಮಾಹಿತಿ ಒದಗಿಸಿ, ದೇವನಹಳ್ಳಿ ತಾಲೂಕಿನ ನಲ್ಲೂರಿನ ವೀರಗಾರರ ಗುಡಿ ಬಗ್ಗೆ ತಿಳಿಸುತ್ತದೆ.

**ಇಸ್ಮಾಯಿಲ್,ಕೆ**. ಅವರ 'ಕರ್ನಾಟಕ ಟೆಂಪಲ್ಸ್' (1984) ಎಂಬ ಗ್ರಂಥ 8 ಅಧ್ಯಾಯಗಳ ನ್ನೊಳಗೊಂಡಿದ್ದು ಸಾಮಾಜಿಕ ಹಾಗೂ ಆರ್ಥಿಕ ಕೊಡುಗೆಗಳಲ್ಲಿ ದೇವಾಲಯಗಳ ಪಾತ್ರವೇನು ಎಂಬುದನ್ನು ತಿಳಿಸಲಾಗಿದೆ. ವಿಚಾರ ವಿಮರ್ಶೆಯಲ್ಲಿ ಹೆಚ್ಚಾಗಿ ಶಾಸನಾಧಾರಗಳನ್ನು ಅವಲಂಬಿಸಿದೆ.

**ಸುಂದರರಾವ್,ಬ.ನ**. ಬೆಂಗಳೂರು ಇತಿಹಾಸ (ಸ್ಥಾಪನೆಯಿಂದ ಹಿಡಿದು ಸ್ವರಾಜ್ಯ ಲಭಿಸುವವರೆಗೆ) ಬೆಂಗಳೂರು 1985 ಈ ಕೃತಿಯಲ್ಲಿ ಬೆಂಗಳೂರಿನ ಸಂಕ್ಷಿಪ್ತ ಪರಿಚಯ ಮತ್ತಿತರ ವಿಷಯಗಳ ಬಗ್ಗೆ ಮಾಹಿತಿ ಇದೆ.

**ಡಾ. ಚಿದಾನಂದ ಮೂರ್ತಿ,ಎಂ**.ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂಪುಟ-1 (450-1150) ಸ್ವಪ್ನ ಬುಕ್ ಹೌಸ್, ಬೆಂಗಳೂರು, ಈ ಕೃತಿಯು ಶಾಸನಗಳ ಮೂಲಕ ಸಾಂಸ್ಕೃತಿಕ ಪರಿಚಯ ಮಾಡಿಕೊಡುತ್ತದೆ.

**ಡಾ.ತಿಪ್ಪೇರುದ್ರಸ್ವಾಮಿ, ಹೆಚ್**, ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' (2013) ಈ ಗ್ರಂಥದಲ್ಲಿ ಭಾರತೀಯ ಸಂಸ್ಕೃತಿ,ಪ್ರಾಚೀನತೆ, ಕರ್ನಾಟಕದಲ್ಲಿ ಆಳ್ವಿಕೆ ನಡಿಸಿದ ರಾಜಮನೆತನಗಳು ಆಡಳಿತ ಕ್ರಮಕ್ಕೆ ಸಂಬಂಧಿಸಿದಂತೆ ಧಾರ್ಮಿಕ ಪರಿಸ್ಥಿತಿ ಹಾಗೂ ವಿದ್ಯಾಭ್ಯಾಸ, ದಾನಶಾಸನಗಳು ಮತ್ತು

ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಗೆ ಸಂಬಂಧಿಸಿದಂತೆ ಉಗಮ, ಬೆಳವಣಿಗೆ, ಚಾಲುಕ್ಯ, ಹೊಯ್ಸಳ, ವಿಜಯನಗರ ಮತ್ತು ಇಸ್ಲಾಂ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನ ಕುರಿತ ವಿಷಯಗಳನ್ನು ಒಂದೇ ಕಡೆ ನಿರೂಪಿಸಿರುವುದು. ಈ ಗ್ರಂಥವು ಸಂಶೋಧನಾತ್ಮಕವಾಗಿ ಅತ್ಯುಪಯುಕ್ತ ಕೃತಿಯಾಗಿದೆ.

**ಸಿಂದಗಿ ರಾಜಶೇಖರ** ಅವರ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' (1988) ಎಂಬ ಗ್ರಂಥದಲ್ಲಿ ಕರ್ನಾಟಕವನ್ನಾಳಿದ ಶಾತವಾಹನರು, ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದ ವಾಸ್ತುಶಿಲ್ಪಗಳ ಲಕ್ಷಣಗಳನ್ನು ಹಾಗೂ ಕರ್ನಾಟಕದಲ್ಲಿ ಜೈನರ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಲಕ್ಷಣಗಳನ್ನು ವಿಜಯನಗರ ಕಾಲದ ಚಿತ್ರಕಲೆಯನ್ನು ತಿಳಿಸಿದೆ. ಕರ್ನಾಟಕದ ವಾಸ್ತುಶಿಲ್ಪ ಕಲೆಯನ್ನು ಅಧ್ಯಯನ ಮಾಡುವುದಕ್ಕೆ ಇದೊಂದು ಬಹುಮುಖ್ಯ ಪೂರಕವಾದ ಗ್ರಂಥವಾಗಿದೆ.

**ಕೃಷ್ಣಸ್ವಾಮಿ ಅಯ್ಯಂಗಾರ್,ಎ.ಎನ್,ಜೋಷಿ,ಬಿ. ಎನ್,**'ಬೆಂಗಳೂರಿನ ಮಿಥಿಕ್ ಸೊಸೈಟಿಯ ತ್ರೈಮಾಸಿಕ' ಪತ್ರಿಕೆಯಲ್ಲಿ (ಕ್ಯೂ.ಜೆ.ಎಮ್.ಎಸ್) ಹಲವಾರು ಲೇಖನಗಳು ಪ್ರಕಟಗೊಂಡಿವೆ. ಇವರ ಲೇಖನದಲ್ಲಿ ಶ್ರೀವೈಷ್ಣವ ಧರ್ಮ, ಹೊಯ್ಸಳ ರಾಜವಂಶ ಕುರಿತು ಹಲವಾರು ವಿಷಯಗಳನ್ನು ಬರೆದಿದ್ದಾರೆ.

**ಸೂರ್ಯನಾಥ್ ಯು ಕಾಮತ್,** ಅವರ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಗ್ರಂಥವು ಕ್ರಿ.ಶ.1989ರಲ್ಲಿ ಪ್ರಕಟಗೊಂಡಿದ್ದು, ದೇವನಹಳ್ಳಿ ತಾಲೂಕಿಗೆ ಸಂಬಂಧಿಸಿದ ದೇವಾಲಯಗಳ ಸ್ಥಳನಾಮ, ಭೌಗೋಳಿಕತೆ, ವಾಯುಗುಣ, ಸಸ್ಯವರ್ಗ, ಪ್ರಾಣಿವರ್ಗ ಹಾಗೂ ನದಿಗಳು ಮುಂತಾದವುಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

**ಡಾ. ಸೂರ್ಯನಾಥ ಯು ಕಾಮತ್,** ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಬೆಂಗಳೂರು, 1989, ಈ ಕೃತಿಯು ಕರ್ನಾಟಕದ ರಾಜಕೀಯ, ಸಂಸ್ಕೃತಿ ಮುಂತಾದವುಗಳ ಬಗ್ಗೆ ತಿಳಿಸುತ್ತದೆ.

**ಡಾ. ಕಲಬುರ್ಗಿ, ಎಂ.ಎಂ.ಸಂಪಾದಕರು,** ಕರ್ನಾಟಕ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ 1991, ಪು.ಸಂ.69-70 ಮತ್ತು 72-74 ಈ ಕೃತಿಯಲ್ಲಿ ಕರ್ನಾಟಕದ ವಿವಿಧ ಕೈಫಿಯತ್ತುಗಳ ಬಗ್ಗೆ ಮಾಹಿತಿ ಇದೆ. ದೇವನಹಳ್ಳಿ ಬಗ್ಗೆ ಕರ್ನಲ್ ಮೆಕೆಂಜಿ ಸಿದ್ಧಪಡಿಸಿದ ದೇವಣಪುರ ಕೈಫಿಯತ್ತು ದೇವೇಗೌಡನಹಳ್ಳಿ ಕೈಫಿಯತ್ತು ದೇವನಕಲ್ಲು ಕೈಫಿಯತ್ತು ಮುಂತಾದವುಗಳ ಬಗ್ಗೆ ಮಾಹಿತಿ ಒದಗಿಸುತ್ತದೆ.

**ಶೆಟ್ಟರ್,ಎಸ್.,** ಅವರು ಬರೆದಿರುವ 'ದಿ ಹೊಯ್ಸಳ ಟೆಂಪಲ್ಸ ಅಟ್ ಕರ್ನಾಟಕ'(1992). ಇದರಲ್ಲಿ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಸಮಗ್ರವಾಗಿ ವಿವರಣೆಯನ್ನು ನೀಡಿದ್ದಾರೆ. ಇವರು ಬರೆದಿರುವ ಕೃತಿಯು ಸಂಪುಟ-1, ದೇವಾಲಯದ ವಿವರಣೆಗೆ ಸಂಬಂಧಿಸಿದ್ದು ಸಂಪುಟ-2 ಛಾಯಾಚಿತ್ರಕ್ಕೆ ಸಂಬಂಧಿಸಿದೆ.

**ಅಪರ್ಣ,ಕೂ.ಸ.,** ಅವರು ಬರೆದಿರುವ 'ದೇವಾಲಯಗಳ ವಾಸ್ತುಶಿಲ್ಪ ಪರಿಚಯ'(1999).ಇವರು ದೇವಾಲಯಗಳ ಲಕ್ಷಣಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡಿ ಸಂಶೋಧಕರಿಗೆ ಬಹಳ ಉಪಯುಕ್ತ ಮಾಹಿತಿಯನ್ನು ನೀಡುವಂತ ಪ್ರಯತ್ನವನ್ನು ಮಾಡಿದ್ದಾರೆ.

**ಡಾ.ಚನ್ನಬಸಪ್ಪ ಪಾಟೀಲ್,** ಕರ್ನಾಟಕದ ಕೋಟೆಗಳು, ಸಂಪುಟ-1-4, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಕರ್ನಾಟಕದ ವಿವಿಧ ಸ್ಥಳಗಳ ಕೋಟೆಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದ್ದು ಇದರಲ್ಲಿ ದೇವನಹಳ್ಳಿ ಕೋಟೆಯ ಬಗ್ಗೆ ಮಾಹಿತಿ ಒಳಗೊಂಡಿದೆ.

**ಡಾ.ದೇವರಕೊಂಡಾರೆಡ್ಡಿ,** ತಲಕಾಡಿನ ಗಂಗರ ಕಾಲದ ದೇವಾಲಯಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1994. ಈ ಕೃತಿಯಲ್ಲಿ ಗಂಗರ ಕಾಲದ ಹಲವು ದೇವಾಲಯಗಳ ಬಗ್ಗೆ ಮಾಹಿತಿ ಇದ್ದು ದೇವನಹಳ್ಳಿ ತಾಲೂಕಿನ ಗಂಗವಾರ ಗ್ರಾಮದ ಸೋಮೇಶ್ವರ ದೇವಾಲಯದ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

**ಬೆಂಗಳೂರು ದರ್ಶನ,** ಮೂರು ಸಂಪುಟಗಳು-ಉದಯಬಾನು ಕಲಾಸಂಘ, ಬೆಂಗಳೂರು ಈ ಕೃತಿಯಲ್ಲಿ ಬೆಂಗಳೂರಿನ ರಾಜಕೀಯ, ಸಾಂಸ್ಕೃತಿಕ ಪರಂಪರೆ ಮತ್ತು ಇತರೆ ವಿಷಯಗಳ ಬಗ್ಗೆ ಮಾಹಿತಿ ಇದೆ.

**ಶ್ರೀನಿವಾಸ್,ವಿ.ಪಾಡಿಗಾರ್,**ರವರ 'ದಿ ಕಲ್ಟ್ ಆಫ್ ವಿಷ್ಣು ಇನ್ ಕರ್ನಾಟಕ ' (1996) ಎಂಬ ಕೃತಿ ಹೊಯ್ಸಳ ಶಿಲ್ಪಗಳ ಉದಾಹರಣೆಗಳೊಂದಿಗೆ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ವಿವರಿಸುತ್ತದೆ.

**ಡಾ.ಶಿವತಾರಕ್,ಕೆ.ಬಿ.**ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2001, ಕರ್ನಾಟಕದ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿಯನ್ನು ನೀಡಿ ಇದರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ದೇವನಹಳ್ಳಿ ತಾಲೂಕಿನ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿಯನ್ನು ಒದಗಿಸಲಾಗಿದೆ.

**ಡಾ. ರಂಗರಾಜು,ಎನ್.ಎಸ್**. ಅವರ 'ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ಸ್' (2001) ಪಿ.ಎಚ್.ಡಿ. ಪ್ರೌಢಪ್ರಬಂಧದಲ್ಲಿ ಮಂಡ್ಯ ಮತ್ತು ತುಮಕೂರು ಜಿಲ್ಲೆಯ ಹೊಯ್ಸಳ ದೇವಾಲಯಗಳ ಲಕ್ಷಣಗಳು, ಉಗಮ ಮತ್ತು ವಿಕಾಸ ಹಾಗೂ ಕರ್ನಾಟಕದ ಹೊಯ್ಸಳ ವಾಸ್ತು ಶೈಲಿಗೆ ಈ ಎರಡು ಜಿಲ್ಲೆಗಳ ಕೊಡುಗೆಯನ್ನು ಸವಿವರವಾಗಿ ತಿಳಿಸಿದ್ದಾರೆ.

**ಡಾ.ವಸು. ಎಂ.ವಿ, ಸಂಪಾದಕರು,** ದಕ್ಷಣ ಕರ್ನಾಟಕದ ಅರಸು ಮನೆತನಗಳು, ಕರ್ನಾಟಕದ ರಾಜಸಂಸ್ಥಾನಗಳು-2, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001 ಈ ಕೃತಿಯಲ್ಲಿ ಕರ್ನಾಟಕದ ವಿವಿಧ ಅರಸು ಮನೆತನಗಳ ಬಗ್ಗೆ ವಿವಿಧ ಲೇಖಕರು ಮಾಹಿತಿಯನ್ನು ನೀಡಿದ್ದಾರೆ. ಈ ಕೃತಿಯಲ್ಲಿ ಆವತಿ ಪಾಳೇಗಾರರು, ಯಲಹಂಕ ನಾಡಪ್ರಭುಗಳು ಮುಂತಾದವರ ಬಗ್ಗೆ ಮಾಹಿತಿ ಇದೆ.

**ಜ್ಞಾನಾನಂದ,ಜಿ**. ಅವರ 'ಶಿಲ್ಪಾದರ್ಶ' (2002) ಕೃತಿಯು ಎರಡು ಸಂಪುಟಗಳಿಂದ ಕೂಡಿದ್ದು ಮೊದಲ ಸಂಪುಟ ಶಿಲ್ಪಶಾಸ್ತ್ರದ ಗಂಭೀರ ಅಧ್ಯಯನಕ್ಕೆ ಮೂಲ ಆರಕವಾಗಿದೆ. ಎರಡನೆಯ ಸಂಪುಟ ಭಾರತೀಯ ದೇವಾಲಯಗಳ ಇತಿಹಾಸದ ಬಗ್ಗೆ ಕುತೂಹಲಕರವಾದ ವಿವರಗಳನ್ನು ಸಂಕ್ಷಿಪ್ತವಾಗಿ ದಾಖಲಿಸುತ್ತದೆ.ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಸ್ವರೂಪ ವೈವಿಧ್ಯತೆಗಳನ್ನು ರೇಖಾಚಿತ್ರಗಳ ಮೂಲಕ ವಿವರಿಸಲಾಗಿದೆ.

**ಸಂರಕ್ಷಿತ ಸ್ಮಾರಕಗಳ ನಿರ್ದೇಶಿಕೆ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2003 ಈ ಕೃತಿಯಲ್ಲಿ ರಾಜ್ಯದ ವಿವಿಧ ಸ್ಥಳಗಳ ಸಂರಕ್ಷಿತ ಸ್ಮಾರಕಗಳ ಬಗ್ಗೆ ಮಾಹಿತಿ ಒಳಗೊಂಡಿದ್ದು ದೇವನಹಳ್ಳಿ ತಾಲೂಕಿನ ಅರದೇಶಹಳ್ಳಿ ಗ್ರಾಮದ ಶಾಸನಗಳು ಮತ್ತು ಗಂಗವಾರದ ಸೋಮೇಶ್ವರ ದೇವಾಲಯ ಮತ್ತು ಶಾಸನಗಳ ಬಗ್ಗೆ ಮಾಹಿತಿ ಒದಗಿಸುತ್ತದೆ.

**ಗೋಪಾಲ್,ಬಿ.ಆರ್**.ಕರ್ನಾಟಕದ ಕಲೆಗಳು, ವಾಸ್ತು ಸಂಪುಟ-4, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 2003 ಈ ಕೃತಿಯಲ್ಲಿ ವಾಸ್ತುವಿಜ್ಞಾನ ಮತ್ತು ಮೂಲ ವಿಷಯಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

**ಸುರೇಶ್,ಕೆ.ಎಂ**.ಅವರ 'ಟೆಂಪಲ್ಸ್ ಆಫ್ ಕರ್ನಾಟಕ' (2003) ಎಂಬ ಗ್ರಂಥ ಎರಡು ಸಂಪುಟಗಳನ್ನು ಒಳಗೊಂಡಿದೆ. ಮೊದಲನೆಯ ಸಂಪುಟದಲ್ಲಿ ಹಲವಾರು ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಲಾಗಿದೆ. ಏಕಕೂಟ ದೇವಾಲಯದಿಂದ ಆರಂಭಗೊಂಡು ನವಕೂಟ ದೇವಾಲಯದವರೆಗೆ ಅವುಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ.

ಎರಡನೆಯ ಸಂಪುಟದಲ್ಲಿ ದೇವಾಲಯಗಳ ತಲನಕ್ಷೆ ಹಾಗೂ 540 ಛಾಯಾಚಿತ್ರಗಳನ್ನು ನೀಡಲಾಗಿದೆ.

**ಡಾ.ಗೋಪಾಲ್,ಆರ್**. ಇವರ ಸಂಪಾದಕದಲ್ಲಿ ರಚಿತವಾದ ಕೋಲಾರ ಜಿಲ್ಲೆಯ ಇತಿಹಾಸ ಮತ್ತು  ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2004, ಈ ಕೃತಿಯು ನನ್ನ ಸಂಶೋಧನಾ ಪ್ರಬಂಧಕ್ಕೆ ಉಪಯುಕ್ತ ಮಾಹಿತಿಯನ್ನು ನೀಡುವ ಗ್ರಂಥವಾಗಿದೆ.

**ನರಸಿಂಹಮೂರ್ತಿ,ಎಂ**. ಮಲ್ಲಪ್ರಪಂಚ, ಬೆಂಗಳೂರು 2008, ಮತ್ತು ಪೈಲ್ವಾನರ ಜಗತ್ತಿನಲ್ಲಿ, ಬೆಂಗಳೂರು 2007 ಈ ಕೃತಿಗಳಲ್ಲಿ ಕುಸ್ತಿ, ಕುಸ್ತಿಪಟ್ಟುಗಳು ಮತ್ತು ಕುಸ್ತಿ ಪೈಲ್ವಾನರ ಬಗ್ಗೆ ಮಾಹಿತಿ ಇದೆ. ಈ ಕೃತಿಯಲ್ಲಿ ಅರಳೆಪೇಟೆ ಗೋಪಾಲರಾವ್ ಮತ್ತು ದೇವನಹಳ್ಳಿಯ ಪೈಲ್ವಾನರ ಬಗ್ಗೆ ಉಲ್ಲೇಖವಿದೆ.

**ಡಾ.ಅರುಣಿ,ಎಸ್.ಕೆ**. ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 2007, ಈ ಕೃತಿಯಲ್ಲಿ ಯಲಹಂಕ ನಾಡಪ್ರಭುಗಳ ಕಾಲದ ವಾಸ್ತುಶಿಲ್ಪ ಶಿಲ್ಪಕಲೆಗಳ ಬಗ್ಗೆ ಮಾಹಿತಿ ಇದೆ. ದೇವನಹಳ್ಳಿ ತಾಲೂಕಿನ ಆವತಿ ಗ್ರಾಮದ ದೇವಾಲಯಗಳು ಮತ್ತು ಕೋಟೆ, ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಾಲಯ ಮತ್ತು ಕೋಟೆ ಹಾಗೂ ಯಂಬ್ರಹಳ್ಳಿಯ ತಿಮ್ಮರಾಯಸ್ವಾಮಿ ದೇವಾಲಯಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

**ಇತಿಹಾಸ ಮತ್ತು ಪುರಾತತ್ವ,** ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2009, ಈ ಕೃತಿಯಲ್ಲಿ ದೇವನಹಳ್ಳಿ ಪಾಳೇಗಾರರು, ಗಂಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

**ಡಾ. ಇಬ್ರಾಹಿಂ ಎಂ. ಮುಲ್ಲಾ,** ಕರ್ನಾಟಕದ ಉರುಸುಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, 2008, ಈ ಕೃತಿಯಲ್ಲಿ ದರ್ಗಾ, ಉರುಸು ಮುಂತಾದ ವಿಷಯಗಳ ಬಗ್ಗೆ ಮಾಹಿತಿ ಇದೆ

**ಡಾ. ಜಯಮ್ಮ ಕರಿಯಣ್ಣ,ಎಚ್**.ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 2008, ಈ ಕೃತಿಯು ನೊಳಂಬ ಅರಸರ ರಾಜಕೀಯ ಇತಿಹಾಸ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಷಯಗಳ ಬಗ್ಗೆ ಮಾಹಿತಿ ಒದಗಿಸುತ್ತದೆ.

**ಮೈಸೂರು ನಾಗರಾಜ ಶರ್ಮಾ.,** ಅವರ ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-2010. ಈ ಕೃತಿಯು ಹೊಯ್ಸಳ ದೇವಾಲಯಗಳಲ್ಲಿ ಕಂಡು ಬರುವ ಲಿಂಗ ಸ್ವರೂಪಿ, ಶೈವ ಪರಂಪರೆಯ ಬಗ್ಗೆ ಉಲ್ಲೇಖಿಸುತ್ತದೆ. ಲಿಂಗಗಳ ಉದ್ಭವ, ಶೈವಾಗಮನ ವರ್ಣನೆ, ದೇವಾಲಯಗಳ ಲಕ್ಷಣಗಳು, ದೇವಾಲಯಗಳ ಕೂಟ ರಚನೆ, ದೇವಾಲಯಗಳ ವಿವಿಧ ಭಾಗಗಳ ಬಗ್ಗೆ ಚರ್ಚಿಸುತ್ತದೆ.

**ಡಾ. ಗುಡ್ಡದೇಶ್ವರಪ್ಪ,ಹೆಚ್**. ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪೂಜಾ ಪ್ರಕಾಶನ, ಚಿತ್ರದುರ್ಗ, 2010 ಈ ಕೃತಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಜಕೀಯ ಇತಿಹಾಸ, ಸಂಸ್ಕೃತಿ ಪರಂಪರೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

**Gopal,R. Editor,** Tippu Sultan, the Tiger of Mysore, Directorate of Archaeology and Museums, Mysore 2010 ಈ ಕೃತಿಯಲ್ಲಿ ಟಿಪ್ಪು ಕುರಿತು, ಟಿಪ್ಪುವಿನ ದೂರದೃಷ್ಟಿ, ಟಿಪ್ಪುವಿನ ಪ್ರಸ್ತುತತೆ, ಶೃಂಗೇರಿ ಮಠದೊಂದಿಗೆ ಸಂಬಂಧಗಳು, ವಾಣಿಜ್ಯಕರಣ, ನಾಣ್ಯಪದ್ಧತಿ, ಟಿಪ್ಪುವಿನ ಕೋಟೆಗಳು, ರಾಕೆಟ್ ತಂತ್ರಜ್ಞಾನ ಮುಂತಾದಲೇಖನಗಳನ್ನುಒಳಗೊಂಡಿದೆ.

**ಡಾ.ಕೃಷ್ಣಮೂರ್ತಿ, ಪಿ.ವಿ**.ಶಾಸನ ಇತಿಹಾಸ ಮಂಥನ, ತುಮಕೂರು ವಿಶ್ವವಿದ್ಯಾಲಯ, ತುಮಕೂರು 2011 ಈ ಕೃತಿಯಲ್ಲಿ ಬೆಂಗಳೂರು ಜಿಲ್ಲೆಯ ಪ್ರಾಚೀನ ಪ್ರಾದೇಶಿಕ ಆಡಳಿತ ವಿಭಾಗಗಳು, ಎಲಹಂಕ ನಾಡು ಮುಂತಾದ ವಿಷಯಗಳ ಬಗ್ಗೆ ಮಾಹಿತಿ ಒಳಗೊಂಡಿದೆ.

**ಡಾ.ಪುಟ್ಟಸ್ವಾಮಿ,ಬಿ.ಎಸ್**. ಯಲಹಂಕ ನಾಡಪ್ರಭು, ಕೆಂಪೇಗೌಡ ಮತ್ತು ಆತನ ವಂಶಸ್ಥರು. 2011, ಬೆಂಗಳೂರು, ಈ ಕೃತಿಯಲ್ಲಿ ಯಲಹಂಕ ನಾಡಪ್ರಭುಗಳ ಮೂಲ, ಆವತಿ ನಾಡಪ್ರಭು ರಣಭೈರೇಗೌಡ, ಕೋಟೆಗಳು (ಆವತಿ) ಕಲೆ ಮತ್ತು ವಾಸ್ತುಶಿಲ್ಪ ಮುಂತಾದವುಗಳ ಬಗ್ಗೆ ಮಾಹಿತಿ ಒದಗಿಸುತ್ತದೆ.

**ಕರ್ನಾಟಕ ಕೈಪಿಡಿ,** ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು, 1996, 2001, 2005, 2010, 2012 (ಕನ್ನಡ ಆವೃತಿಗಳು) ಇದರಲ್ಲಿ ಕರ್ನಾಟಕ

ಪ್ರಾಸ್ತಾವಿಕ, ಇತಿಹಾಸ, ಕೃಷಿ ಮತ್ತು ಸಂಬಂಧಿತ ಚಟುವಟಿಕೆಗಳು, ಸಂಸ್ಕೃತಿ ಮುಂತಾದವುಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. 2012ರ ಕೈಪಿಡಿಯಲ್ಲಿ ಪು.ಸಂ.70ರಲ್ಲಿ ಪಾರಂಪರಿಕ ತಾಣಗಳ ವೈಶಿಷ್ಟ್ಯ ಎಂಬ ಶೀರ್ಷಿಕೆಯಲ್ಲಿ ದೇವನಹಳ್ಳಿ ತಾಲೂಕಿನ ನಲ್ಲೂರು ಹುಣಸೆ ತೋಪು ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ

**ಡಾ.ಅರುಣಿ, ಎಸ್.ಕೆ. ರಾಜೇಶ್, ಹಂ.ಗು.**ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, ಇತಿಹಾಸ ದರ್ಪಣ, ಸಂಚಿಕೆ, ಸಂಪಾದಕರು, ಜನವರಿ–ಜೂನ್, 2012, ಬೆಂಗಳೂರು, ಪುಸ್ತಕ–12–13. ಈ ಸಂಚಿಕೆಯಲ್ಲಿ ಕರ್ನಾಟಕದಲ್ಲಿ ಪುರಾತತ್ವ ಉತ್ಖನನಗಳು ಮತ್ತು ಇತರೆ ವಿಷಯಗಳ ಮಾಹಿತಿ ಇದೆ.

**ಡಾ.ಗೋಪಾಲ್,ಆರ್**. ಇವರ ಸಂಪಾದಕದಲ್ಲಿ ರಚಿತವಾದ ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪುರಾತತ್ವ, ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು, 2013, ಈ ಕೃತಿಯು ನನ್ನ ಸಂಶೋಧನಾ ಪ್ರಬಂಧಕ್ಕೆ ಹೆಚ್ಚು ಉಪಯುಕ್ತ ಮಾಹಿತಿಯನ್ನು ನೀಡುವ ಗ್ರಂಥವಾಗಿದೆ.

**Bangalore Roots and Beyond-** Maya Jayapal Bangalore, 2014, ಈ ಕೃತಿಯಲ್ಲಿ ಬೆಂಗಳೂರು ಕೋಟೆ, ಹೈದರಾಲಿ ಪೂರ್ವಿಕರು ದಳವಾಯಿ ದೇವರಾಜಯ್ಯ ಮತ್ತು ನಂಜರಾಜಯ್ಯ ಮುಂತಾದ ವಿಷಯಗಳ ಬಗ್ಗೆ ಮಾಹಿತಿ ಇದೆ.

**Jain,V.K.**Prehistory and protohistory of India, New Delhi, 2014, ಈ ಕೃತಿಯು ಮೆಗಲಿಥಿಕ್ ಸಂಸ್ಕೃತಿಯ ಬಗ್ಗೆ ಮಾಹಿತಿ ನೀಡುತ್ತದೆ.

**ಕರ್ನಾಟಕ ರಾಜ್ಯಪತ್ರ,** ಬೆಂಗಳೂರು, ದಿನಾಂಕ 30ನೇ ಏಪ್ರಿಲ್2013, ಇದು ದೇವನಹಳ್ಳಿ ತಾಲೂಕಿನ ಹಿಂದೂ ಧಾರ್ಮಿಕ ದತ್ತಿ ದೇವಾಲಯಗಳ ವಿವರಗಳ ಪಟ್ಟಿಯಾಗಿದ್ದು, ದೇವನಹಳ್ಳಿ ತಾಲೂಕಿನ ಮುಜರಾಯಿ ಇಲಾಖೆಯ ದೇವಾಲಯಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

**ಡಾ.ಮನೋಜ್,ಜಿ.**ದೇವಾಲಯ ವಾಸ್ತುವಿಜ್ಞಾನ, ಸುಬೋದಿನಿ ಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ, 2015, ಈ ಕೃತಿಯು ದೇವಾಲಯ ವಾಸ್ತುಶಿಲ್ಪದ ವಿವಿಧ ಭಾಗಗಳು ಮತ್ತು ಛಾಯಾಚಿತ್ರಗಳನ್ನು ಒಳಗೊಂಡಿದೆ.

**ಬಿಟ್ಟಸಂದ್ರ ಗುರುಸಿದ್ದಯ್ಯ. ಬಿ.ಜಿ,** ದೇವನದೊಡ್ಡಿಯಿಂದ ದೇವನಹಳ್ಳಿಯವರೆಗೆ ಹೆಜ್ಜೆ ಗುರುತುಗಳು, ದೇವನಹಳ್ಳಿ, 2015 ಈ ಕೃತಿಯಲ್ಲಿ ದೇವನಹಳ್ಳಿ ತಾಲೂಕಿನ ವಿವಿಧ ದೇವಾಲಯಗಳು ಮತ್ತು ಪರಂಪರೆಯ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿಯನ್ನು ನೀಡುತ್ತದೆ.

**ಆದೆಪ್ಪ ಪಾಸೋಡಿ,** ಪುರಾವಸ್ತು (ಶಾಸನ ಇತಿಹಾಸ ಸಂಸ್ಕೃತಿ ಶೈಕ್ಷಣಿಕ ಮತ್ತು ಸಂಕೀರ್ಣ ವಿಷಯಗಳ ಸಂಪ್ರಬಂಧಗಳು) ಬೆಂಗಳೂರು, 2016 ಈ ಕೃತಿಯಲ್ಲಿ ದೇವನಹಳ್ಳಿ ತಾಲೂಕಿನ ನಲ್ಲೂರು ಪಾಳೇಗಾರರ ರಾಜಕೀಯ ಇತಿಹಾಸ, ನಲ್ಲೂರು ಚನ್ನರಾಯಸ್ವಾಮಿ ದೇವಾಲಯ ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

**ಬೋರಯ್ಯ,ಹೆಚ್.ಎಂ**. ಆವತಿ ನಾಡಪ್ರಭುಗಳು, ಗೋದೂಳಿ ಪ್ರಕಾಶನ, ಬೆಂಗಳೂರು, 2017 ಈ ಕೃತಿಯು ಆವತಿ ನಾಡಪ್ರಭುಗಳ ರಾಜಕೀಯ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

ಈ ಮೇಲೆ ವಿವರಿಸಿದ ಲೇಖಕರುಗಳಲ್ಲದೆ ಹಲವಾರು ವಿದ್ವಾಂಸರು ಪುರಾತತ್ವ, ದೇವಾಲಯಗಳ ವಾಸ್ತುಶಿಲ್ಪ, ಸಾಂಸ್ಕೃತಿಕ ಪರಂಪರೆ ಮುಂತಾದವುಗಳಿಗೆ ಸಂಬಂಧಿಸಿದಂತೆ ಲೇಖನಗಳನ್ನು ಪ್ರಕಟಿಸಿದ್ದಾರೆ ಮಾತ್ರವಲ್ಲದೆ 'ಇತಿಹಾಸ ದರ್ಶನ ಸಂಪುಟಗಳು', 'ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್' ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡದ ಪ್ರಕಟಣೆಗಳು, ಇತಿಹಾಸ ದರ್ಪಣ ಸಂಪುಟಗಳು ಮೊದಲಾದ ಗ್ರಂಥಗಳ ಮತ್ತು ಸಂಪುಟಗಳಲ್ಲಿ ಲೇಖನಗಳು ಪ್ರಕಟಗೊಂಡಿವೆ. ಈ ಎಲ್ಲ ಮಾಹಿತಿಗಳನ್ನು ಗಮನಿಸಿ, ವಿಶ್ಲೇಷಿಸಿ ನನ್ನ ಅಧ್ಯಯನದಲ್ಲಿ ಸಂದರ್ಭೋಚಿತವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಪುರಾತತ್ವ ನೆಲೆಗಳು ದೇವಾಲಯಗಳು, ಕೋಟೆಗಳು, ಲೌಕಿಕ ಕಟ್ಟಡಗಳು, ಸಾಂಸ್ಕೃತಿಕ ಪರಂಪರೆ ಅಂಶಗಳ ವಿವರಗಳನ್ನು ಟಿಪ್ಪಣಿ ಮಾಡಿಕೊಂಡು ಅಧ್ಯಯನದ ಫಲಿತವನ್ನು ನನ್ನ ಸಂಶೋಧನಾ ಪ್ರಬಂಧದಲ್ಲಿ ಅಳವಡಿಸಿಕೊಂಡಿದ್ದೇನೆ. ಆಯಾ ಕ್ಷೇತ್ರದ ಸ್ಥಳಪುರಾಣಗಳನ್ನು ಸಂಗ್ರಹಿಸಿ ಅವುಗಳ ಉಪಯೋಗವನ್ನು ಅಧ್ಯಯನಕ್ಕೆ ಪೂರಕವಾಗಿ ಸೇರಿಸಿಕೊಂಡಿದ್ದು ಛಾಯಾಚಿತ್ರಗಳು ಹಾಗೂ ದೇವಾಲಯಗಳ ತಳವಿನ್ಯಾಸಗಳನ್ನೂ ನೀಡಲಾಗಿದ್ದು ಒಟ್ಟಾರೆಯಾಗಿ ಸಂಶೋಧನಾತ್ಮಕ ಮತ್ತು ವಿವರಣಾತ್ಮಕ ವಿಷಯಗಳನ್ನು ನನ್ನ ಈ ಮಹಾಪ್ರಬಂಧದಲ್ಲಿ ನೀಡಲಾಗಿದೆ.

## ಅಡಿ ಟಿಪ್ಪಣಿಗಳು

1. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪುಟ ಸಂಖ್ಯೆ, 91, 2009-10.
2. ಅದೇ, ಪು.ಸಂ.91.
3. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, 1989, ಪು.ಸಂ.31.
4. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.1. 2009-10.

# ಅಧ್ಯಾಯ-2

## ಭೌಗೋಳಿಕ ಲಕ್ಷಣಗಳು

**ಪೀಠಿಕೆ:**

ಒಂದು ಪ್ರದೇಶದ ಅಧ್ಯಯನವನ್ನು ಕೈಗೊಳ್ಳುವ ಮುಂಚೆ ಆ ಪ್ರದೇಶದ ಭೌಗೋಳಿಕ ಅಂಶಗಳ ವಿವರಗಳನ್ನು ಸ್ಥೂಲವಾಗಿ ತಿಳಿದುಕೊಳ್ಳುವುದು ಅವಶ್ಯಕ, ಏಕೆಂದರೆ ಭೌಗೋಳಿಕ ಅಂಶಗಳು ಮತ್ತು ಪರಿಸರ ಆಯಾಪ್ರದೇಶದ ಜನಜೀವನವನ್ನು ರೂಪಿಸುವಲ್ಲಿ ಮತ್ತು ಸಾಂಸ್ಕೃತಿಕ ಚರಿತ್ರೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಪ್ರಾಕೃತಿಕ ಸಂಪತ್ತು ಆಯಾ ಪರಿಸರದ ರಾಜಕೀಯ, ಸಾಮಾಜಿಕ, ಆರ್ಥಿಕ ಅಂಶಗಳು ವ್ಯವಸ್ಥಿತ ರೀತಿಯಲ್ಲಿ ರೂಪುಗೊಳ್ಳಲು ಪ್ರಭಾವ ಬೀರುತ್ತದೆ. ಆದ್ದರಿಂದ ಯಾವುದೇ ಪ್ರದೇಶದ ಅಧ್ಯಯನವನ್ನು ವ್ಯವಸ್ಥಿತ ರೀತಿಯಲ್ಲಿ ಕೈಗೊಳ್ಳುವ ಸಂದರ್ಭದಲ್ಲಿ ಭೌಗೋಳಿಕ ಅಂಶಗಳು ಮತ್ತು ಪರಿಸರವನ್ನು ಮರೆತು ಇತಿಹಾಸವನ್ನು ರಚಿಸಲು ಸಾಧ್ಯವಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಭೌಗೋಳಿಕ ಲಕ್ಷಣಗಳಾದ ಭೂಮಿಯ ಮೇಲ್ಮೈ ಪರಿಸರ ಹವಾಮಾನ, ಮಣ್ಣಿನ ಫಲವತ್ತತೆ, ನೀರು, ಅರಣ್ಯ, ಮಳೆ  ಮುಂತಾದವು ಆಯಾ ಪ್ರದೇಶದ ಜನತೆಯ ಮೇಲೆ ಪ್ರಭಾವ ಬೀರಿವೆ.

ಕರ್ನಾಟಕವು ಪ್ರಾಕೃತಿಕ ಸಂಪತ್ತುಗಳಾದ ಬೆಟ್ಟಗುಡ್ಡಗಳು, ನದಿಗಳು, ಕಣಿವೆಗಳು, ಮೈದಾನಗಳು, ಅರಣ್ಯಗಳು, ಖನಿಜ ಸಂಪನ್ಮೂಲಗಳು ಮುಂತಾದವುಗಳನ್ನು ಒಳಗೊಂಡಿರುವ ವೈವಿಧ್ಯಮಯ ನಾಡಾಗಿದೆ.ಅರಬ್ಬಿಸಮುದ್ರ ತೀರದಲ್ಲಿ ಕರಾವಳಿ ಪ್ರದೇಶ, ಪಶ್ಚಿಮ ಘಟ್ಟಗಳು, ನಿತ್ಯಹರಿದ್ವರ್ಣ ಕಾಡುಗಳು, ಎತ್ತರವಾದ ಪರ್ವತ ಶ್ರೇಣಿಗಳು, ಬಯಲು ಸೀಮೆ, ವಿಶಾಲವಾದ ಕೆರೆಗಳು, ವಿವಿಧ ರೀತಿಯ ಮಣ್ಣುಗಳು, ಅಮೂಲ್ಯವಿರಳ ವೃಕ್ಷಗಳು, ಪೂರ್ವಭಾಗದ ಚಪ್ಪಟೆಯಾದ ಪೀಠಭೂಮಿ, ಶಿಲಾಖಂಡಗಳು, ಕೃಷಿಯೋಗ್ಯ ಭೂಮಿಗಳು, ಹಲವು ರೀತಿ ವನ್ಯಮೃಗಗಳು ಮುಂತಾದವುಗಳನ್ನು ಒಳಗೊಂಡ ರಾಜ್ಯವಾಗಿದೆ.[1]

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕರ್ನಾಟಕ ರಾಜ್ಯದ ಆಗ್ನೇಯ ದಿಕ್ಕಿನಲ್ಲಿದೆ.ಈ ಜಿಲ್ಲೆಯು '$12^{\circ}$ 15, ದಿಂದ $13^{\circ}$ 35' ಅಕ್ಷಾಂಶ ಮತ್ತು $77^{\circ}$ 05 ದಿಂದ $78^{\circ}$00 ರೇಖಾಂಶಗಳ ನಡುವೆ ಇರುತ್ತದೆ.ಈ ಜಿಲ್ಲೆಯು ಭೂಮಿಯ ಮೇಲ್ಮೈ ಸಮುದ್ರಮಟ್ಟದಿಂದ 629 ರಿಂದ 950 ಮೀಟರ್ ವ್ಯತ್ಯಾಸವಿರುತ್ತದೆ.[2]

ಜಿಲ್ಲೆಯ ಭೂ ವಿಸ್ತೀರ್ಣವು 2259 ಚ.ಕೀ.ಮೀಗಳಾಗಿರುತ್ತದೆ[3] ಈ ಜಿಲ್ಲೆಯಮೇರೆಗಳೆಂದರೆ, ಉತ್ತರಕ್ಕೆ ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು, ದಕ್ಷಿಣ ದಿಕ್ಕಿನಲ್ಲಿ ಬೆಂಗಳೂರು ನಗರ, ಪೂರ್ವ ದಿಕ್ಕಿನಲ್ಲಿ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳು ಹಾಗೂ ಪಶ್ಚಿಮ ದಿಕ್ಕಿನಲ್ಲಿ ತುಮಕೂರು ಮತ್ತು ರಾಮನಗರ ಜಿಲ್ಲೆಗಳಿವೆ.[4]ಪ್ರಸ್ತುತ ಈ ಜಿಲ್ಲೆಯಲ್ಲಿ 4 ತಾಲೂಕುಗಳು, 17 ಹೋಬಳಿಗಳು, 1052 ಗ್ರಾಮಗಳು (ಜನವಸತಿ ಇರುವ 951 ಗ್ರಾಮಗಳು ಮತ್ತು ಜನವಸತಿ ಇಲ್ಲದಿರುವ 101 ಗ್ರಾಮಗಳು ಸೇರಿದಂತೆ) ಇವೆ.[5]

2011ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ 990923(ಗಂ.509172, ಹೆಂ.481751) ಗಳಾಗಿರುತ್ತದೆ.[6] 2001ರ ಜನಗಣತಿಯಂತೆ ಪ್ರತಿ ಚದರ ಕಿ.ಮೀ.ಗೆ 377 ಜನಸಂಖ್ಯೆ ಇರುತ್ತದೆ.[7]

**ಬೆಂಗಳೂರು ಸ್ಥಳನಾಮ:**

ಬೆಂಗಳೂರು ಎಂಬ ಹೆಸರು ಹೇಗೆ ನಿಷ್ಪತ್ತಿಯಾಯಿತು ಎಂಬ ಬಗ್ಗೆ ಹಲವಾರು ಉಲ್ಲೇಖಗಳಿವೆ. ಅವುಗಳಲ್ಲಿ ಬೆಂಗಳೂರು ಹೆಸರಿಗೆ ಸಂಬಂಧಿಸಿದ ಪ್ರಾಥಮಿಕ ಉಲ್ಲೇಖವು ಕ್ರಿ.ಶ.9ನೇ ಶತಮಾನದ ಬೇಗೂರಿನ ಗಂಗರ ಕಾಲದ ಶಾಸನದಲ್ಲಿ 'ಬೆಂಗಳೂರು' ಎಂದು ಉಲ್ಲೇಖಿಸಿದೆ. ಬೇಗೂರು ಗ್ರಾಮವು ಬೆಂಗಳೂರಿನಿಂದ ಸುಮಾರು 13 ಕಿ.ಮೀ. ದೂರದಲ್ಲಿದ್ದು ಇಲ್ಲಿನ ನಗರೇಶ್ವರ ದೇವಾಲಯದ ಮುಂಭಾಗದಲ್ಲಿ ಕ್ರಿ.ಶ.9ನೇ ಶತಮಾನಕ್ಕೆ ಸೇರಿದ ಒಂದು ಶಾಸನೋಕ್ತ ವೀರಗಲ್ಲು ದೊರೆತಿದೆ ಅದರಲ್ಲಿ ಬೆಂಗಳೂರು ಎಂಬ ಪದದ ಉಲ್ಲೇಖವಿದೆ.ಈ ಶಾಸನವು "ಶ್ರೀಮತ್ ನಾಗರತನ ಮನೆವಗತಿ ಪೆರ್ವೊಣಶೆಟ್ಟಿ ಬೆಂಗಳೂರ ಕಾಳೆಗದೊಳ್ ನಾಗತರನ ಮಗಂ ಬುಟ್ಟಣಪತಿ ಸತ್ತಂ" ಎಂಬ ಮೂಲಪಾಠವನ್ನು ಹೊಂದಿದೆ.[8]ಬೇಗೂರು ಶಾಸನ ಆಧಾರದಿಂದ 'ಬೆಂಗಳೂರು' ಎಂಬ ಊರು ಮತ್ತು ಹೆಸರು ಕ್ರಿ.ಶ.890ರ ಕಾಲಘಟ್ಟಕ್ಕಾಗಲೇ ಅಸ್ಥಿತ್ವದಲ್ಲಿತ್ತು ಎಂದು ತಿಳಿದುಬರುತ್ತದೆ.

**ಬೆಂಗಳೂರಿನ ಪೌರಾಣಿಕ ಐತಿಹ್ಯ:**

ಸ್ಥಳಪುರಾಣದ ಪ್ರಕಾರ ಬೆಂಗಳೂರಿನ ಮೂಲವು ಬೆಂದಕಾಳೂರುನಿಂದ ಬಂದಿದೆ. ಹೊಯ್ಸಳ ಅರಸ ಬಲ್ಲಾಳನು ಈ ಭಾಗದಲ್ಲಿ ಬೇಟೆಯಾಡಲು ಬಂದಾಗ ದೀರ್ಘಕಾಲದ ಪ್ರಯಾಣ, ದಣಿವು ಮತ್ತು ಹಸಿವಾದ ಕಾರಣ ಅದೇ ಅರಣ್ಯದಲ್ಲಿ ವಾಸಿಸುತ್ತಿದ್ದ ಒಬ್ಬ ವೃದ್ಧೆಯ ಗುಡಿಸಲಿಗೆ ಬಂದು ತನಗೆ ಹಸಿವಾಗಿದೆ ಎಂದು ನಿವೇದಿಸಿಕೊಂಡಾಗ, ಆಕೆಯು ತನ್ನಲ್ಲಿದ್ದ

ಬೆಂದಕಾಳನ್ನು ನೀಡಿ ಸತ್ಕರಿಸುತ್ತಾಳೆ. ಬಲ್ಲಾಳನು ಆ ಸ್ಥಳವನ್ನು 'ಬೆಂದ ಕಾಳು ಊರು' ಎಂದು ಕರೆದನು[9] ಇದನ್ನು ಪುಷ್ಟಿಕರಿಸುವ ಯಾವುದೇ ಐತಿಹಾಸಿಕ ಆಧಾರಗಳಿಲ್ಲ. ಬೆಂಗೆ ಅಥವಾ ರಕ್ತ ಹೊನ್ನೆಮರದಿಂದ ಈ ಹೆಸರು ಬಂದಿರಬಹುದು[10]ಬೆಂದಕಾಳೂರಿನ ಐತಿಹ್ಯವಾಗಲಿ, ಬೆಂಗೆ ಅಥವಾ ರಕ್ತ ಹೊನ್ನೆಮರದ ನಿಷ್ಪತ್ತಿಯಾಗಲಿ ಒಪ್ಪಲು ಸಾಧ್ಯವಿಲ್ಲ, ಕಾರಣವೇನೆಂದರೆ ಇವುಗಳನ್ನು ಪುಷ್ಟೀಕರಿಸಲು ಯಾವುದೇ ಐತಿಹಾಸಿಕ ಆಧಾರಗಳಿಲ್ಲ.

**ದೇವನಹಳ್ಳಿ ತಾಲೂಕು:**

ದೇವನಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲೂಕು.ದೇವನಹಳ್ಳಿ ತಾಲೂಕು ಪುರಾತತ್ವ ನೆಲೆಗಳಿಗೆ ಹೆಸರಾಗಿದೆ.ಆವತಿ ನಾಡಪ್ರಭುಗಳ ಮತ್ತು ಪಾಳೆಗಾರರ ಆಳ್ವಿಕೆಯ ಕಾಲದಲ್ಲಿ ದೇವನಹಳ್ಳಿಯು ಸುತ್ತಮುತ್ತಲಿನ ಪ್ರದೇಶವನ್ನು ನಿಯಂತ್ರಿಸುವ ಒಂದು ಪ್ರಮುಖ ಕೇಂದ್ರವಾಗಿ ರೂಪುಗೊಂಡಿತ್ತು.ದೇವನಹಳ್ಳಿಯು ಒಂದು ಪ್ರಮುಖ ಆಯಾಕಟ್ಟಿನ ಸ್ಥಳವಾಗಿತ್ತೆಂದು ಅಲ್ಲಿರುವ ಕೋಟೆ, ದೇವಾಲಯಗಳು, ಮಂಟಪಗಳು, ಲೌಕಿಕ ಕಟ್ಟಡಗಳು ಮುಂತಾದವುಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ.[11]ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಹಾಗೂ ಮೈಸೂರಿನ ಒಡೆಯರ್‌ರವರ ಆಳ್ವಿಕೆಯ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿತು.

**ದೇವನಹಳ್ಳಿ ಸ್ಥಳನಾಮ:**

ದೇವನಹಳ್ಳಿಯು ಒಂದು ಪಟ್ಟಣವಾಗಿದ್ದು ಬೆಂಗಳೂರು-ಬಳ್ಳಾರಿ ರಸ್ತೆ, ಬೆಂಗಳೂರು-ಹೈದರಾಬಾದ್ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ-7ರಲ್ಲಿದ್ದು ಬೆಂಗಳೂರಿನ ಉತ್ತರಕ್ಕೆ ಸುಮಾರು 23 ಮೈಲಿಗಳ ದೂರದಲ್ಲಿದೆ.[12]ದೇವನಹಳ್ಳಿಯು ತಾಲೂಕಿನ ಕೇಂದ್ರವಾಗಿದೆ.ದೇವನಹಳ್ಳಿಯು ಮೂಲತಃ ಒಂದು ಸಣ್ಣ ಗ್ರಾಮವಾಗಿದ್ದು ಅದರ ಮುಖ್ಯಸ್ಥನಾದ ದೇವ ಎಂಬುವನು ದೇವನದೊಡ್ಡಿ ಎಂದು ಕರೆದನು.ಕ್ರಿ.ಶ.1501ರಲ್ಲಿ ಆವತಿಯ ಮಲ್ಲಭೈರೇಗೌಡ ಎಂಬುವನು ದೇವನದೊಡ್ಡಿಯ ಮುಖ್ಯಸ್ಥನಾದ ದೇವ ಎಂಬುವನ ಒಪ್ಪಿಗೆಯನ್ನು ಪಡೆದು ದೇವನದೊಡ್ಡಿಯಲ್ಲಿ ಒಂದು ಕೋಟೆಯನ್ನು ನಿರ್ಮಿಸಿ ಆತನ ಹೆಸರಿನಲ್ಲಿ ಊರನ್ನು 'ದೇವನಹಳ್ಳಿ' ಎಂದು ಕರೆಯಲಾಯಿತು.ಹಲವಾರು ದಾಖಲೆಗಳು ದೇವನಹಳ್ಳಿಯನ್ನು ದೇವಣಪುರ, ದೇವಂಡನಹಳ್ಳಿ ಎಂದು ಉಲ್ಲೇಖಿಸಿವೆ.[13]

ದೇವನಹಳ್ಳಿಯ ಬಗ್ಗೆ ಶಾಸನಗಳು ಮತ್ತು ಕೃತಿಗಳಲ್ಲಿ ಉಲ್ಲೇಖವಿದೆ. ಶಾಸನಗಳು ದೇವನಹಳ್ಳಿಯನ್ನು ದೇವಂಡಹಳ್ಳಿ[14]ದೇವಣಪುರಿ[15] ದೇವಣಪುರ ರಾಜ್ಯ[16]ವೆಂದು ಕರೆದಿವೆ.

ಗೋವಿಂದ ವೈದ್ಯನ ಕೃತಿಕಂಠೀರವ ನರಸರಾಜ ವಿಜಯದಲ್ಲಿ ಕರ್ನಾಟಕಕ್ಕೆ ಖಾನನು ಬಂದುದು ಎಂಬ ಶೀರ್ಷಿಕೆಯಡಿಯಲ್ಲಿ ಪು.ಸಂ.212, ಪದ್ಯ ಸಂಖ್ಯೆ 65ರಲ್ಲಿ ದೇವಂಡಪುರಿ ಸೂರೆಬಲೆ ಸಿಡಿಲ್ಗಟ್ಟದ ಭೂವರರೊಡನೈದಿದರು ಎಂದು ಪ್ರಸ್ತಾಪಿಸಲ್ಪಟ್ಟಿದೆ.[17]ಗೌಡಕುಲವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ, ಎರಡನೆಯ ಭಾಗ, ಪು.ಸಂ.11ರಲ್ಲಿ ದೇವಂಡಹಳ್ಳಿಯ ಜೇನಭೈರ ಎಂದು ಉಲ್ಲೇಖಿಸಲ್ಪಟ್ಟಿದೆ[18] ಮತ್ತು ಕರ್ನಲ್ ಮೆಕೆಂಜಿ ಸಿದ್ಧಪಡಿಸಿದ ದೇವಣಪುರ ಕೈಫಿಯತ್ತು ಡಿ.ನಂಬರ್ ಸಂಪುಟ 2048ರಲ್ಲಿ ದೇವಣಪುರ ಎಂದು ಮತ್ತು ದೇವೇಗೌಡನಹಳ್ಳಿ ಕೈಫಿಯತ್ತು ಸಂಪುಟ-287ರಲ್ಲಿ ದೇವೇಗೌಡನಹಳ್ಳಿಯೆಂದು ಸಂಬೋಧಿಸಲ್ಪಟ್ಟಿದೆ.[19]ದೇವನಹಳ್ಳಿ ತಾಲೂಕಿನ ದೇವನಹಳ್ಳಿ, ಆವತಿ, ವಡಿಗೇನಹಳ್ಳಿ, (ವಿಜಯಪುರ) ಕುಂದಾಣ, ನಲ್ಲೂರು, ಗಂಗವಾರ ಮುಂತಾದ ಸ್ಥಳಗಳ ಬಗ್ಗೆ ಶಾಸನಗಳು ಮತ್ತು ಕೃತಿಗಳಲ್ಲಿ ಉಲ್ಲೇಖಗೊಂಡಿದೆ.

**ದೇವನಹಳ್ಳಿ ತಾಲೂಕಿನ ಅಂಕಿ-ಅಂಶಗಳು:**

ದೇವನಹಳ್ಳಿ ತಾಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲೂಕಾಗಿದ್ದು ಈಶಾನ್ಯ ದಿಕ್ಕಿನಲ್ಲಿದ್ದುದಕ್ಷಿಣ ಪಿನಾಕಿನಿನದಿ ಪೂರ್ವದ ಗಡಿಯಾಗಿದೆ.[20]ಇದು 13° 15° ಅಕ್ಷಾಂಶ ಮತ್ತು 77° 42.30 ರೇಖಾಂಶಗಳ ನಡುವೆ ಇದೆ.[21]ದೇವನಹಳ್ಳಿ ತಾಲೂಕಿನ ಭೌಗೋಳಿಕ ವಿಸ್ತೀರ್ಣ 431 ಚ.ಕಿ.ಮೀ.ಗಳಾಗಿರುತ್ತದೆ.[22] ದೇವನಹಳ್ಳಿ ತಾಲೂಕನ್ನು ಉತ್ತರಕ್ಕೆ ಚಿಕ್ಕಬಳ್ಳಾಪುರ ತಾಲೂಕು ಈಶಾನ್ಯಕ್ಕೆ ಶಿಡ್ಲಘಟ್ಟ ತಾಲೂಕು, ಪೂರ್ವ ಮತ್ತು ಆಗ್ನೇಯಕ್ಕೆ ಹೊಸಕೋಟೆ ತಾಲೂಕು ದಕ್ಷಿಣಕ್ಕೆ ಬೆಂಗಳೂರು ಉತ್ತರ ಮತ್ತು ಹೊಸಕೋಟೆ ತಾಲೂಕುಗಳು, ನೈರುತ್ಯಕ್ಕೆ ಬೆಂಗಳೂರು ಉತ್ತರ ತಾಲೂಕು, ಪಶ್ಚಿಮ ಮತ್ತು ವಾಯುವ್ಯಕ್ಕೆ ದೊಡ್ಡಬಳ್ಳಾಪುರ ತಾಲೂಕುಗಳು ಸುತ್ತುವರೆದಿವೆ.

ದೇವನಹಳ್ಳಿ ತಾಲೂಕನ್ನು 1882ರಲ್ಲಿ ರದ್ದುಪಡಿಸಿ ತಾಲೂಕಿನ ಹೋಬಳಿಗಳಾದ ಕುಂದಾಣ ಹೋಬಳಿಯನ್ನು ದೊಡ್ಡಬಳ್ಳಾಪುರ ತಾಲೂಕಿಗೂ, ಜಾಲ ಹೋಬಳಿಯನ್ನು ಬೆಂಗಳೂರು ತಾಲೂಕಿಗೂ, ದೇವನಹಳ್ಳಿಯನ್ನು ಚಿಕ್ಕಬಳ್ಳಾಪುರ ತಾಲೂಕಿಗೂ ಸೇರಿಸಲಾಗಿತ್ತು ನಂತರ ದೇವನಹಳ್ಳಿ ತಾಲೂಕನ್ನು 1886ರಲ್ಲಿ ಪುನರ್ ಸ್ಥಾಪಿಸಲಾಯಿತು. ದೇವನಹಳ್ಳಿ ತಾಲೂಕು ಈ ಮುಂಚೆ ದೇವನಹಳ್ಳಿ ಕಸಬಾ, ವಡಿಗೇನಹಳ್ಳಿ (ವಿಜಯಪುರ) ಚನ್ನರಾಯಪಟ್ಟಣ, ಜಾಲ ಮತ್ತು ಕುಂದಾಣ ಎಂಬ 5 ಹೋಬಳಿಗಳನ್ನು ಮತ್ತು 279 ಗ್ರಾಮಗಳನ್ನು ಒಳಗೊಂಡ ತಾಲೂಕಾಗಿತ್ತು.ದೇವನಹಳ್ಳಿ ತಾಲೂಕಿನಲ್ಲಿ ಪ್ರಸ್ತುತ ಕಸಬಾ (ದೇವನಹಳ್ಳಿ) ವಿಜಯಪುರ, ಚನ್ನರಾಯಪಟ್ಟಣ, ಕುಂದಾಣ ಎಂಬ ನಾಲ್ಕು ಹೋಬಳಿಗಳವೆ.[23] 2001ರ ಮಾಹಿತಿ ಪ್ರಕಾರ

ತಾಲೂಕಿನ ಒಟ್ಟು ಗ್ರಾಮಗಳ ಸಂಖ್ಯೆ 214 ಆಗಿವೆ (ಜನವಸತಿ ಇರುವ ಗ್ರಾಮಗಳ ಸಂಖ್ಯೆ 187 ಮತ್ತು ಜನವಸತಿ ಇಲ್ಲದಿರುವ ಗ್ರಾಮಗಳ ಸಂಖ್ಯೆ 27) ದೇವನಹಳ್ಳಿ ಮತ್ತು ವಿಜಯಪುರಗಳಲ್ಲಿ ಪುರಸಭೆಗಳಿವೆ.[24] ಕಂದಾಯ ವಿಭಾಗದಲ್ಲಿ ದೇವನಹಳ್ಳಿ ತಾಲೂಕು, ದೊಡ್ಡಬಳ್ಳಾಪುರ ಉಪವಿಭಾಗದ ವ್ಯಾಪ್ತಿಗೆ ಒಳಪಟ್ಟಿದೆ. 2011ರ ಜನಗಣತಿ ಪ್ರಕಾರ ದೇವನಹಳ್ಳಿ ತಾಲೂಕಿನ ಒಟ್ಟು ಜನಸಂಖ್ಯೆಯು 209622 (ಗಂ.107842 ಮತ್ತು ಹೆಂ.101780) ಗಳಾಗಿರುತ್ತದೆ.[25]2001ರ ಜನಗಣತಿಯ ಪ್ರಕಾರ ಜನಸಾಂದ್ರತೆಯು ಪ್ರತಿ ಚದರ ಕಿ.ಮೀಗೆ 430 ಆಗಿರುತ್ತದೆ.[26]ದೇವನಹಳ್ಳಿಯು ಬೆಂಗಳೂರು ನಗರಕ್ಕೆ ಸಮೀಪದಲ್ಲಿದ್ದು ಮತ್ತು ಇಲ್ಲಿನ ತ್ವರಿತಗತಿಯ ನಗರೀಕರಣದ ಬೆಳವಣಿಗೆಯಿಂದಾಗಿ ಜನಸಂಖ್ಯೆಯಲ್ಲಿ ಏರಿಕೆ ಕಂಡುಬರುತ್ತಿದೆ.ದೇವನಹಳ್ಳಿ ತಾಲೂಕು ಮೈದಾನ ಪ್ರದೇಶವಾಗಿದ್ದು ತಾಲೂಕಿನ ಕಣಿವೆಗಳು ಫಲವತ್ತಾಗಿದ್ದು ಸಾಗುವಳಿಗೆ ಯೋಗ್ಯವಾಗಿವೆ. ತಾಲೂಕಿನ ನೆಲವು ಸಾಮಾನ್ಯವಾಗಿ ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದ್ದು ತಾಲೂಕಿನ ಭೌಗೋಳಿಕ ಲಕ್ಷಣಗಳು ಮತ್ತು ಅವುಗಳ ಪ್ರಭಾವವನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಬೆಟ್ಟ ಗುಡ್ಡಗಳು:**

ಜಿಲ್ಲೆಯು ಕೇಂದ್ರ ಉತ್ತರ ಮತ್ತು ಪೂರ್ವಭಾಗಗಳಲ್ಲಿ ಮೈದಾನ ಪ್ರದೇಶಗಳನ್ನು ಹೊಂದಿದೆ. ಪಶ್ಚಿಮದಲ್ಲಿ ಬೆಟ್ಟಗುಡ್ಡಗಳು ಮತ್ತು ಕಣಿವೆಗಳಿವೆ. ತಾಲೂಕಿನ ಪ್ರದೇಶಗಳು ಸಮುದ್ರಮಟ್ಟಕ್ಕಿಂತ ಎತ್ತರವಾಗಿದೆ.ದೇವನಹಳ್ಳಿ 899ಮೀ, ಮತ್ತು ವಿಜಯಪುರ 884ಮೀಗಳಾಗಿದ್ದು[27]ದೇವನಹಳ್ಳಿ ತಾಲೂಕು ಸಮುದ್ರಮಟ್ಟಕ್ಕಿಂತ 800-900 ಮೀಟರ್ ಎತ್ತರದಲ್ಲಿದೆ.ತಾಲೂಕಿನಲ್ಲಿ ಕೆಲವು ಸಣ್ಣ ಬೆಟ್ಟಗಳಿದ್ದು ವಾಯುವ್ಯ ಮೂಲೆಯಲ್ಲಿರುವ ದಿಬ್ಬಗಿರಿ ಬೆಟ್ಟ ಈ ತಾಲೂಕಿನ ಅತ್ಯಂತ ಎತ್ತರವಾದ ಬೆಟ್ಟ (1173 ಮೀ.) ವಾಗಿದೆ.

**ನದಿಗಳು:**

ಜಿಲ್ಲೆಯಲ್ಲಿ ಅರ್ಕಾವತಿ, ದಕ್ಷಿಣ ಪಿನಾಕಿನಿ, ಕಣ್ವ, ಕುಮುದ್ವತಿ ನದಿಗಳು ಹರಿಯುತ್ತವೆ. ಜಿಲ್ಲೆಯ ಈ ನದಿ ಪಾತ್ರಗಳು ಕಾವೇರಿ ನದಿಗೆ ಪೂರ್ವಭಾಗದ ಗಡಿಯಾಗಿ ರಚನೆಯಾಗಿವೆ. ಅರ್ಕಾವತಿ, ಕಣ್ವ ಮತ್ತು ದಕ್ಷಿಣ ಪಿನಾಕಿನಿ (ದಕ್ಷಿಣ ಪೆನ್ನಾರ್) ನದಿಗಳು ಉತ್ತರದಿಂದ ದಕ್ಷಿಣಾಭಿಮುಖವಾಗಿ ಹರಿಯುತ್ತದೆ.[28]ದೇವನಹಳ್ಳಿ ತಾಲೂಕಿನಲ್ಲಿ ವರ್ಷಪೂರ್ತಿ ಹರಿಯುವ ಯಾವುದೇ ಶಾಶ್ವತ ನದಿಗಳಿಲ್ಲ. ಮಳೆಗಾಲದಲ್ಲಿ ತಾಲೂಕಿನ ಪೂರ್ವದ ಗಡಿಭಾಗದಲ್ಲಿ ಸಣ್ಣ

ಹೊಳೆಯಾಗಿ ಹರಿಯುವ ನದಿಯೆಂದರೆ ದಕ್ಷಿಣ ಪಿನಾಕಿನಿ. ನದಿಗಳ ಬಗ್ಗೆ ಈ ಮುಂದಿನಂತೆ ವಿವರಿಸಲಾಗಿದೆ.

**ದಕ್ಷಿಣ ಪಿನಾಕಿನಿ:**

ಇದೊಂದು ಅಂತರರಾಜ್ಯ ನದಿಯಾಗಿದ್ದು ಕರ್ನಾಟಕ, ತಮಿಳುನಾಡು ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೆರಿಗಳಲ್ಲಿ ಹರಿಯುತ್ತಿದೆ.ಯೂರೋಪಿನ ಭೂಗೋಳಶಾಸ್ತ್ರಜ್ಞರಿಗೆ ಈ ನದಿಯು ದಕ್ಷಿಣ ಪೆನ್ನಾರ್ ಎಂದು ತಿಳಿದಿತ್ತು.ಈ ನದಿಯನ್ನು ತಮಿಳುನಾಡಿನಲ್ಲಿ ಪೊನ್ನೈಯಾರ್ ಎಂದು ಕರೆಯಲಾಗುತ್ತದೆ.[29]ದಕ್ಷಿಣ ಪಿನಾಕಿನಿ ಎಂಬ ಹೆಸರು ಶಿವನ ಪಿನಾಕ (ಬಾಣ) ದಿಂದ ಉಗಮವಾಗಿದ್ದು ನಂದಿಬೆಟ್ಟದ ಚನ್ನಕೇಶವ ಬೆಟ್ಟ ಶ್ರೇಣಿಗಳಲ್ಲಿ ಹುಟ್ಟುತ್ತದೆ ನಂತರ ಈ ನದಿಯು ಜಿಲ್ಲೆಯನ್ನು ಪ್ರವೇಶಿಸಿ ದೇವನಹಳ್ಳಿ, ಹೊಸಕೋಟೆ ತಾಲೂಕುಗಳನ್ನು ಪ್ರವೇಶಿಸಿ ದೊಡ್ಡ ಪ್ರಮಾಣದಲ್ಲಿ ಜಂಗಮಕೋಟೆ (ಕೋಲಾರಜಿಲ್ಲೆ) ಮತ್ತು ಹೊಸಕೋಟೆ ಕೆರೆಗಳನ್ನು ನಿರ್ಮಿಸಿ ನದಿಯು ದಕ್ಷಿಣಾಭಿಮುಖವಾಗಿ ಹರಿದು ಬೆಂಗಳೂರು ಜಿಲ್ಲೆ ಆನೇಕಲ್ ತಾಲೂಕಿನ ಸರ್ಜಾಪುರ ಎಂಬಲ್ಲಿ ರಾಜ್ಯದ ಗಡಿಯನ್ನು ದಾಟಿ ತಮಿಳುನಾಡನ್ನು ಪ್ರವೇಶಿಸುತ್ತದೆ.ಬೆಂಗಳೂರು ಜಿಲ್ಲೆಯಲ್ಲಿ ಇದರ ಒಟ್ಟು ಉದ್ದ ಸುಮಾರು 60 ಕಿ.ಮೀ.ಗಳಾಗಿದ್ದು ಈ ನದಿ ಚಿಕ್ಕದಾಗಿದ್ದರೂ ಜಿಲ್ಲೆಯಲ್ಲಿ ಹರಿದು ನೀರಾವರಿಗೆ ಅನುಕೂಲವಾಗಿವೆ.[30]ದೇವನಹಳ್ಳಿ ತಾಲೂಕಿನ ಪೂರ್ವಭಾಗದಲ್ಲಿ ದಕ್ಷಿಣ ಪಿನಾಕಿನಿ ನದಿಯ ಜಲಾನಯನ ಪ್ರದೇಶವಿದ್ದು ಈ ಪ್ರದೇಶವನ್ನು ದೇವನಹಳ್ಳಿ, ವಿಜಯಪುರ ಮತ್ತು ಬೂದಿಗೆರೆ ಎಂಬ ಮೂರು ಜಲಾನಯನ ಪ್ರದೇಶಗಳಾಗಿ ವಿಭಾಗಿಸಬಹುದು. ಈ ನದಿಯು ದೇವನಹಳ್ಳಿ ತಾಲೂಕಿನ ಗಂಗವಾರದ ಬಳಿ ಹೊಸಕೋಟೆ ತಾಲೂಕನ್ನು ಪ್ರವೇಶಿಸುತ್ತದೆ.

**ಭೂಗರ್ಭ ರಚನೆ (ಜಿಯೋಲಜಿ):**

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ದಖ್ಖನ್ ಪ್ರಸ್ಥಭೂಮಿಯ ಒಂದು ಭಾಗವಾಗಿದ್ದು ಇದನ್ನು ಬೆಣಚುಕಲ್ಲು, ಗ್ರಾನೈಟ್‌ಗಳು, ಕಂದಕಗಳು ಮತ್ತು ಲ್ಯಾಟರೈಟ್ಸ್‌ಗಳು ಸುತ್ತುವರೆದಿವೆ. ದೇವನಹಳ್ಳಿ ತಾಲೂಕು ಖನಿಜ ಸಂಪನ್ಮೂಲಗಳಲ್ಲಿ ಶ್ರೀಮಂತವಾಗಿಲ್ಲ, ಇಲ್ಲಿ ದೊರೆಯುವ ಖನಿಜ ಸಂಪನ್ಮೂಲಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಜೇಡಿಮಣ್ಣು**: ಇದು ತಾಲೂಕಿನಲ್ಲಿ ಕೆರೆ ಅಂಗಳಗಳಲ್ಲಿ ದೊರಕುತ್ತದೆ. ಇದನ್ನು ಕುಂಬಾರಿಕೆ, ಇಟ್ಟಿಗೆ ನಿರ್ಮಾಣ ಮತ್ತು ಸೆರಾಮಿಕ್ಸ್ ಉತ್ಪನ್ನಗಳ ನಿರ್ಮಾಣದಲ್ಲಿ ಉಪಯೋಗಿಸಲಾಗುತ್ತಿದೆ.[31]

**ಲ್ಯಾಟರೈಟ್**:ಇದು ದೇವನಹಳ್ಳಿ ತಾಲೂಕಿನಲ್ಲಿ ಕಂಡುಬಂದಿದ್ದು ಲ್ಯಾಟರೈಟ್ ಶಿಲೆಗಳ ಚೂರನ್ನು ರಸ್ತೆಗೆ ಜಲ್ಲಿಕಲ್ಲಾಗಿ ಉಪಯೋಗಿಸಲಾಗುತ್ತಿದೆ. [32]

**ಗ್ರಾನೈಟ್ ಕಲ್ಲುಗಳು**:

ದೇವನಹಳ್ಳಿ ತಾಲೂಕಿನ ವಿವಿಧ ಕಡೆ ಗ್ರಾನೈಟ್ ಶಿಲೆಗಳು ದೊರೆಯುತ್ತಿದ್ದು ಇದರ ರಚನೆ ವಿನ್ಯಾಸ ಮತ್ತು ರೂಪಗಳಲ್ಲಿ ಸ್ಥಳದಿಂದ ಸ್ಥಳಕ್ಕೆ ಬಿನ್ನತೆಯಿದ್ದುದೇವನಹಳ್ಳಿ ತಾಲೂಕಿನಲ್ಲಿ ಕೊಯಿರಾ, ಮನಗೊಂಡನಹಳ್ಳಿ, ಸಾದಹಳ್ಳಿ, ಚಿಕ್ಕಸಣ್ಣೆ ಮುಂತಾದ ಸ್ಥಳಗಳಲ್ಲಿ ಗ್ರಾನೈಟ್ ಶಿಲೆಯ ಬಂಡೆಗಳಿವೆ. ಈ ಬಂಡೆಗಳ ಕಲ್ಲುಗಳನ್ನು ಕಟ್ಟಡಗಳ ನಿರ್ಮಾಣದಲ್ಲಿ ಬಳಸಲಾಗುತ್ತಿದೆ.

ಗ್ರಾನೈಟ್ ಬಂಡೆಗಳಿಂದ ವಿವಿಧ ಗಾತ್ರದ ಕಲ್ಲುಗಳು, ಸ್ಲಾಬ್‌ಗಳು, ಕಂಬಕಲ್ಲುಗಳು ಇತರೇ ಸಾಮಾಗ್ರಿಗಳು ದೊರೆಯುತ್ತವೆ. ಗ್ರಾನೈಟ್ ಕಲ್ಲುಗಳನ್ನು ಹೆಚ್ಚಾಗಿ ರಸ್ತೆಗಳಲ್ಲಿ ಜಲ್ಲಿಕಲ್ಲುಗಳು ಮತ್ತು ಕಟ್ಟಡ ನಿರ್ಮಾಣದಲ್ಲಿ ತಳಪಾಯ ಮತ್ತು ಗೋಡೆ ನಿರ್ಮಾಣದಲ್ಲಿ ಬಳಸಲಾಗುತ್ತದೆ.ಉತ್ತಮ ಗುಣಮಟ್ಟದ ಗುಲಾಬಿಬಣ್ಣದ ಮತ್ತು ಬಿಳಿಬಣ್ಣದ ಶಿಲೆಗಳನ್ನು ಉತ್ಪಾದಿಸಿ ಅವುಗಳನ್ನು ನಯಮಾಡಿ ಅಲಂಕಾರಿಕ ಕಲ್ಲುಗಳಾಗಿ ಕಟ್ಟಡಗಳಿಗೆ ಬಳಸಲಾಗುತ್ತದೆ.ದೇಶದಲ್ಲೇ ಬೃಹತ್ ಆಧುನಿಕ ಗ್ರಾನೈಟ್ ಕಟ್ಟಡಗಳಲ್ಲಿ ಒಂದಾದ ಹೆಸರಾಂತ ವಿಧಾನಸೌಧವನ್ನು ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲೂಕಿನ ಕೊಯಿರಾ ಮತ್ತು ಬೆಟ್ಟಹಲಸೂರುಗಳ ಕಲ್ಲುಗಣಿ (ಕ್ವಾಯರಿ) ಗ್ರಾನೈಟ್ ಕಲ್ಲುಗಳಿಂದ ನಿರ್ಮಿಸಲಾಗಿದೆ.[33]ಕೊಯಿರಾ ಗ್ರಾನೈಟ್ ಚಪ್ಪರ ಕಲ್ಲುಗಳು, ಕಲ್ಲುದಿಮ್ಮಿ ಮತ್ತು ವಿಗ್ರಹ ಕೆತ್ತನೆಗಳಿಗೆ ಹೆಸರಾಗಿದ್ದು ಇಲ್ಲಿನ ಕಲ್ಲನ್ನು ಹೊರದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಸಾದಹಳ್ಳಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊರೆಯುವ ಗ್ರಾನೈಟ್ ಕಲ್ಲುಗಳಿಂದ ಅಲಂಕಾರಿಕ ಕಲ್ಲುಗಳನ್ನು ತಯಾರು ಮಾಡಲಾಗುತ್ತದೆ.

**ಅಂತರ್ಜಲ**:

ತಾಲೂಕಿನ ಭೌಗೋಳಿಕ ರಚನೆಗಳಲ್ಲಿ ಅಂತರ್ಜಲವಿದ್ದುಅದರ ಆಳವು ಭೌಗೋಳಿಕ ಮೇಲ್ಮೈಯನ್ನು ಆಧರಿಸಿದೆ.ಮಣ್ಣಿನ ಬಳಕೆ, ಹವಾಗುಣ, ಬಂಡೆಗಳ ರಚನೆಯು ಅಂತರ್ಜಲದ ಮೇಲೆ ಪರಿಣಾಮ ಬೀರುತ್ತವೆ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಬಾವಿಗಳು ಮತ್ತು ಕೊಳವೆ ಬಾವಿಗಳ ಮುಖಾಂತರ ಅಂತರ್ಜಲವನ್ನು ಬಳಸಲಾಗುತ್ತಿದೆ.ದೇವನಹಳ್ಳಿ ತಾಲೂಕಿನಲ್ಲಿ ದೊಡ್ಡ ಪ್ರಮಾಣದಲ್ಲಿ ನೀರಾವರಿ ಬಾವಿಗಳಿವೆ.[34]

**ಸಸ್ಯವರ್ಗ**:

ತಾಲೂಕಿನಲ್ಲಿ ಬೆಟ್ಟಗುಡ್ಡಗಳ ಸಸ್ಯವರ್ಗ, ಕೆರೆ ಮತ್ತು ನದಿ ಪಾತ್ರದ ಸಸ್ಯವರ್ಗಗಳು.ಅದರ ಜೊತೆಗೆ ರಸ್ತೆ ಬದಿಯಲ್ಲಿಗಿಡಮರಗಳು ಕಂಡುಬರುತ್ತವೆ. ಇದರಲ್ಲಿ ಅಕೇಶಿಯಾ, ಕಲ್ಲುಮಾವು, ಚುಜ್ಜುಲು, ದಿಂಡಿಗ, ಹೊಳೆಉಪ್ಪಿನ, ಆಲ ಮುಂತಾದ ಗಿಡ ಮರಗಳು ಬೆಟ್ಟಗಳ ತಳಭಾಗದಲ್ಲಿ ವಿವಿಧ ರೀತಿಯ ಗಿಡಬಳ್ಳಿಗಳು, ಹುಲ್ಲು, ಕಾಡುಅಂಚುಕಡ್ಡಿ, ಗರಿಕೆಹುಲ್ಲು ಬೆಟ್ಟಗರಿಕೆ ಮುಂತಾದವು. ಬೆಟ್ಟಗಳ ಇಳಿಜಾರಿನಲ್ಲಿ ಬಂಡೆಗಳ ರಚನೆ ಮತ್ತು ಮಣ್ಣಿನಿಂದಾಗಿ ನೀರಿನ ತೊರೆಗಳಿಂದಾಗಿ ಹಲವು ರೀತಿಯ ಮರಗಿಡಗಳು ಬಳ್ಳಿಗಳು ಕಂಡುಬರುತ್ತವೆ.ದಿನಬಳಕೆ ಮತ್ತು ಸೌದೆಗೋಸ್ಕರ ಗಿಡಮರಗಳನ್ನು ಕಟಾವು ಮಾಡಲಾಗುತ್ತಿದ್ದುಅದರ ಜೊತೆಗೆ ದನಗಳು ಮತ್ತು ಇತರ ಪ್ರಾಣಿಗಳು ಸಸ್ಯವರ್ಗವನ್ನು ನಾಶಪಡಿಸುತ್ತಿವೆ. ಇದು ಪರಿಸರದ ಮೇಲೆ ನಕಾರಾತ್ಮಕ ಪರಿಣಾಮವನ್ನು ಬೀರುತ್ತಿದೆ.[35]

**ಗಿಡ ಮರಗಳು:**

ತಾಲೂಕಿನಲ್ಲಿ ಕಂಡುಬಂದಿರುವ ಪ್ರಮುಖ ಗಿಡಮರಗಳೆಂದರೆ ನೆಲ್ಲಿ, ಮಾವಿನ ಮರ, ಅರಳಿಮರ, ಆಲದ ಮರ, ಬಿಲ್ವಪತ್ರೆ, ಸಂಪಿಗೆ,ಬೇವು, ಗಂಧದ ಮರ, ನಿಂಬೆ, ನೇರಳೆ, ಬಾಳೆಗಿಡ, ಹೊಂಗೆ,ತೆಂಗಿನ ಮರ, ಗೋಡಂಬಿ ಮುಂತಾದವು.

**ಪ್ರಾಣಿ ಸಂಪತ್ತು:**

ಪ್ರಾಣಿಗಳನ್ನು ಸಾಕುಪ್ರಾಣಿಗಳು ಮತ್ತು ಕಾಡುಪ್ರಾಣಿಗಳೆಂದು ವರ್ಗೀಕರಿಸಬಹುದು. ಹಸು ಎತ್ತು, ಎಮ್ಮೆ ಕೋಣ, ಕುರಿ, ನಾಯಿ, ಕತ್ತೆ, ಕುದುರೆ ಮುಂತಾದವು ಸಾಕುಪ್ರಾಣಿಗಳು, ಕರಡಿ, ಹುಲಿ, ಚಿರತೆ, ಆನೆ ಮುಂತಾದವು ಕಾಡು ಪ್ರಾಣಿಗಳು. ಈ ಭಾಗದಲ್ಲಿ ಜಿಂಕೆ, ಕೋತಿ, ಕಾಡುಬೆಕ್ಕು, ವಿವಿಧ ರೀತಿಯ ಸರಿಸೃಪಗಳು, ಸಸ್ತನಿಗಳು, ಹಲ್ಲಿಗಳು, ಹಾವುಗಳು, ಆಂಫಿಬಿಯಾಗಳಲ್ಲಿ (ಉಭಯಚರ) ಕಪ್ಪೆಗಳು, ಎರಹುಳಗಳು, ಚೇಳುಗಳು, ಜೇಡರಗಳು, ಇರುವೆಗಳು ಸಣ್ಣಕೋಳಿಗಳು, ಮರಕುಟಿಕ ಮುಂತಾದವುಕಂಡುಬರುತ್ತವೆ.[36]

**ಅರಣ್ಯ ಸಂಪತ್ತು:**

ದೇವನಹಳ್ಳಿ ತಾಲೂಕಿನಲ್ಲಿ 2275 ಹೆಕ್ಟೇರ್ ಪ್ರದೇಶದಲ್ಲಿ ಅರಣ್ಯವಿದೆ.[37]ದೇವನಹಳ್ಳಿ ತಾಲೂಕು ಪೂರ್ವಕಾಲದಲ್ಲಿ ದಂಡಕಾರಣ್ಯದ ಭಾಗವೆಂದು ಕರೆಯಲ್ಪಟ್ಟಿದ್ದು ದೇವನಹಳ್ಳಿ ಬಳಿಯ

ಕುಂದಾರಣ್ಯ (ಜಾಸ್ಮಿನ್ ಅರಣ್ಯ)ವನ್ನು ಒಳಗೊಂಡಿತ್ತು.[38] ದೇವನಹಳ್ಳಿ ತಾಲೂಕಿನ ಅರಣ್ಯ ಪ್ರದೇಶವನ್ನು ನೆಡುತೋಪು ಪ್ರದೇಶ, ಕಾಯ್ದಿಟ್ಟ ಅರಣ್ಯ ಮತ್ತು ರಾಜ್ಯ ಕಾಡು ಎಂದು ವಿಂಗಡಿಸಲಾಗಿದ್ದು ಇವುಗಳಲ್ಲಿ ನೀಲಗಿರಿ, ಹುಣಸೆ, ಹೊಂಗೆ, ಗೋಡಂಬಿ, ಜಾಲಿ, ನೇರಳೆ ಮುಂತಾದ ಮರಗಳು, ಕಾಡುಹಂದಿ ಜಿಂಕೆಗಳು ಮೊಲ ನರಿ ಮುಂತಾದ ಪ್ರಾಣಿಗಳು, ಹಲವು ರೀತಿಯ ಪಕ್ಷಿಗಳು, ಹಾವುಗಳು, ಸಸ್ತನಿಗಳು ಕಂಡು ಬರುತ್ತವೆ. ದೇವನಹಳ್ಳಿ ತಾಲೂಕಿನ ಅರಣ್ಯ ಪ್ರದೇಶಗಳೆಂದರೆ ಕೋರಮಂಗಲ, ಮಂಡಿಬೆಲೆ, ಸಾಂಬಾರ ಗಿಡಕಾವಲ್, ಸಾವಕನಹಳ್ಳಿ, ಕೋಡಿಮಂಚೇನಹಳ್ಳಿ, ಅಕ್ಕುಪೇಟೆ ಮುಂತಾದವು.

**ಅರಣ್ಯಗಳ ನಿರ್ವಹಣೆ:**

ಅರಣ್ಯ ಇಲಾಖೆಯು ಅರಣ್ಯಗಳ ಮೇಲ್ವಿಚಾರಣೆಯನ್ನು ಮಾಡುತ್ತಿದ್ದುಕಂದಾಯ ಇಲಾಖೆಗೆ ಒಳಪಟ್ಟ ವ್ಯವಸಾಯಕ್ಕೆ ಯೋಗ್ಯವಾಗದ ಜಮೀನುಗಳನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲಾಗಿದೆ.ಗಿಡಮರಗಳು ಮತ್ತು ಕಾಡುಪ್ರಾಣಿಗಳ ಸಂರಕ್ಷಣೆ ಬಂಜರು ಜಮೀನು ಮತ್ತು ಕೆರೆಗಳಲ್ಲಿ ಸಾಮಾಜಿಕ ಅರಣ್ಯಕರಣ ಮುಂತಾದ ಕಾರ್ಯಗಳನ್ನು ಅರಣ್ಯ ಇಲಾಖೆ ನಿರ್ವಹಿಸುತ್ತಿದೆ.[39]

**ಯೂಕಲಿಪ್ಟಿಸ್ (ನೀಲಗಿರಿ) ಪ್ಲಾಂಟೇಶನ್:**

ದೇವನಹಳ್ಳಿ ತಾಲೂಕಿನಲ್ಲಿಕಡಿಮೆ ಮಳೆ ಬೀಳುವ ಪ್ರದೇಶ ಬಂಜರು ಜಮೀನುಗಳಲ್ಲಿ ಮತ್ತು ಸರ್ಕಾರಿ ಅರಣ್ಯಗಳಲ್ಲಿ ನೀಲಗಿರಿಯನ್ನು ಬೆಳಸಲಾಗುತ್ತಿದೆ.1974ರಲ್ಲಿ ಕೈಗಾರಿಕೆಗಳಗೆ ಬದ್ಧವಾಗಿ ಈ ಪ್ಲಾಂಟೇಶನ್‌ಗಳನ್ನು ಬೆಳೆಸಲಾಗುತ್ತಿದೆ. ನೀಲಗಿರಿ ಮರಗಳನ್ನು ಕೈಗಾರಿಕೆಗಳಗೆ ರವಾನಿಸಲಾಗುತ್ತಿದೆ,[40]ನೀಲಗಿರಿ ತೋಪುಗಳಂದಾಗಿ ಅಂತರ್ಜಲಕ್ಕೆ ಮತ್ತು ಮಣ್ಣಿನ ಫಲವತ್ತತೆಗೆ ಧಕ್ಕೆಯಾಗುತ್ತಿದೆ ಎಂಬ ಮಾತು ಕೇಳಬರುತ್ತಿದೆ.

**ವಾಯುಗುಣ:**

ರಾಜ್ಯದ ಹವಾಗುಣವು ಋತುಮಾನಕ್ಕೆ ಅನುಗುಣವಾಗಿ ವ್ಯತ್ಯಯವಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ದಕ್ಷಿಣ ಒಳನಾಡ ಕರ್ನಾಟಕ ವಾಯುಗುಣ ವೈವಿಧ್ಯತೆಗೆ

ಒಳಪಟ್ಟಿದ್ದುಹವಾಗುಣವನ್ನು ಸಾಂದರ್ಭಿಕವಾಗಿ ಋತುಗಳನ್ನಾಗಿ ವಿಂಗಡಿಸಲಾಗಿದೆ.ನವೆಂಬರ್‌ನಿಂದ ಫೆಬ್ರವರಿವರೆಗೆ ಚಳಿಗಾಲವಿದ್ದರೆ ಮಾರ್ಚ್‌ನಿಂದ ಮೇವರೆಗೆ ಬೇಸಿಗೆ ಕಾಲವಿರುತ್ತದೆ.ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ಗುಡುಗು ಮಿಂಚು ಸಹಿತ ಬಿರುಗಾಳಿ ಕಂಡುಬರುತ್ತದೆ.ಜೂನ್‌ನಿಂದ ಸೆಪ್ಟೆಂಬರ್ ಮತ್ತು ಅಕ್ಟೋಬರ್‌ನಿಂದ ನವೆಂಬರ್‌ವರೆಗೆ ಎರಡು ಅವದಿಯವರೆಗೆ ಮಳೆಗಾಲವಿರುತ್ತದೆ.[41]ಬಂಗಾಳ ಕೊಲ್ಲಿಯಲ್ಲಿನ ವಾಯುಭಾರ ಕುಸಿತವು ಈ ಪ್ರದೇಶದ ಮೇಲೆ ಪರಿಣಾಮ ಬೀರುತ್ತದೆ.

**ಮಳೆ:**

ನೈರುತ್ಯ ಮಾನ್ಸೂನ್ ರಾಜ್ಯಕ್ಕೆ ಮಳೆ ತರುವ ಪ್ರಧಾನ ಮಾನ್ಸೂನ್ ಆಗಿದ್ದು ಮಾನ್ಸೂನ್ ಅವಧಿಯಲ್ಲಿ ರಾಜ್ಯಕ್ಕೆ ಶೇಕಡ ೮೦ರಷ್ಟು ಮಳೆಯಾಗುತ್ತಿದೆ.ಜಿಲ್ಲೆಯು ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ವಾರ್ಷಿಕ ಶೇಕಡ 51ರಷ್ಟು ಮಳೆಯನ್ನು ನೈರುತ್ಯ ಮಾನ್ಸೂನ್‌ಗಳಿಂದ ಪಡೆಯುತ್ತದೆ.ದೇವನಹಳ್ಳಿ ತಾಲೂಕು ಮಾನ್ಸೂನ್ ಮಳೆಯನ್ನು ಅವಲಂಬಿಸಿದ್ದು ದೇವನಹಳ್ಳಿ ತಾಲೂಕಿನಲ್ಲಿ ವಾಡಿಕೆ ಮಳೆ (1901-70) 744 ಮಿ.ಮೀ ಮತ್ತು ವಾಸ್ತವಿಕ ಮಳೆ (2009) 807 ಮಿ.ಮೀ ಮಳೆಯಾಗಿರುತ್ತದೆ.[42] ದೇವನಹಳ್ಳಿ ತಾಲೂಕಿನಲ್ಲಿ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳಲ್ಲಿ ಅರ್ಧಕ್ಕಿಂತ ಹೆಚ್ಚು ಮಳೆಯಾಗುತ್ತದೆ.

**ಉಷ್ಣಾಂಶ:**

ತಾಲೂಕಿನಲ್ಲಿ ಏಪ್ರಿಲ್/ಮೇ ತಿಂಗಳಿನಲ್ಲಿ ಗರಿಷ್ಟ ಉಷ್ಣಾಂಶವು38 ಡಿಗ್ರಿ ಸೆಲ್ಸಿಯಸ್ ಮತ್ತು ಕನಿಷ್ಟ ಉಷ್ಣಾಂಶವು 21.2 ಡಿಗ್ರಿ ಸೆಲ್ಸಿಯಸ್ ಇರುತ್ತದೆ.ಜೂನ್‌ನಲ್ಲಿ ಮಾನ್ಸೂನ್ ಪ್ರವೇಶದಿಂದ ತಂಪಾದ ವಾತಾವರಣ ಕಂಡುಬಂದರೆ ಡಿಸೆಂಬರ್ ತಿಂಗಳಿನಲ್ಲಿ ಸಾಮಾನ್ಯವಾಗಿ ಚಳಿಯ ವಾತಾವರಣ ಕಂಡುಬರುತ್ತದೆ.ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಗರಿಷ್ಟ ಉಷ್ಣಾಂಶವಿದ್ದರೆಜನವರಿ ಮಧ್ಯದಿಂದ ಮಾರ್ಚ್‌ವರೆಗೆ ಉಷ್ಣಾಂಶದಲ್ಲಿ ಏರಿಕೆ ಕಂಡುಬರುತ್ತದೆ.[43]ತಾಲೂಕಿನಲ್ಲಿ ಸರಾಸರಿ ಉಷ್ಣತೆ ಗರಿಷ್ಟ 27 ಡಿಗ್ರಿ ಸೆಲ್ಸಿಯಸ್ ಮತ್ತು ಕನಿಷ್ಟ ಉಷ್ಣತೆ 10 ಡಿಗ್ರಿ ಸೆಲ್ಸಿಯಸ್ ಆಗಿದ್ದು ವಾತಾವರಣದಲ್ಲಿ ಅತಿ ಆರ್ದ್ರವೂ ಇಲ್ಲ, ಅತೀ ಶುಷ್ಕವು ಇಲ್ಲ ಎಂದು ಹೇಳಬಹುದು.

**ಗಾಳಿ:**

ಏಪ್ರಿಲ್‌ನಿಂದ ಅಕ್ಟೋಬರ್ ಅವಧಿಯಲ್ಲಿ ಗಂಟೆಗೆ 8 ರಿಂದ 9 ಕಿ.ಮೀ. ಸರಾಸರಿಯಲ್ಲಿ ಗಾಳಿಯು ಚಲಿಸುತ್ತದೆ.[44]ಸಾಮಾನ್ಯವಾಗಿ ಮಧ್ಯಾಹ್ನ ಮತ್ತು ಸಂಜೆ ವೇಳೆಯಲ್ಲಿ ಗಾಳಿಯ ಬೀಸುವಿಕೆಯು ಹೆಚ್ಚಾಗಿರುತ್ತದೆ.

**ಮಣ್ಣು:**

ಗುಣಲಕ್ಷಣಗಳನ್ನು ಆಧರಿಸಿ ಮಣ್ಣನ್ನು ಕೆಂಪುಮಣ್ಣು, ಲ್ಯಾಟರೇಟರ್ ಮಣ್ಣು, ಮೆಕ್ಕಲು ಮಣ್ಣು, ಇಳಿಜಾರು ಮಣ್ಣು, ಅರಣ್ಯ ಮಣ್ಣು ಮತ್ತು ತೀರಪ್ರದೇಶ ಮಣ್ಣು.ಎಂದು 6 ರೀತಿಯಾಗಿ ವರ್ಗೀಕರಿಸಲಾಗಿದೆ.ಜಿಲ್ಲೆ ಮತ್ತು ತಾಲೂಕಿನಲ್ಲಿ ಕಪ್ಪು, ಕೆಂಪು ಮರಳು ಮಿಶ್ರಿತ ಹಾಗೂ ಜೇಡಿಮಣ್ಣು ಕಂಡುಬರುತ್ತದೆ.[45] ಶಾಸನಗಳಲ್ಲಿ ಮಣ್ಣಿನ ಗುಣಲಕ್ಷಣಗಳನ್ನು ಆಧರಿಸಿ ಕೆಂಪುಭೂಮಿ[46] ಮತ್ತುಮಳಲ ಹೊಲ [47] ಮುಂತಾದ ಮಣ್ಣಿನ ವಿಧಗಳು ಉಲ್ಲೇಖವಾಗಿವೆ.

**ಕೃಷಿ:**

ಪ್ರಾಚೀನ ಕಾಲದಿಂದಲೂ ತಾಲೂಕಿನ ಜನರು ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದುಸಾಗುವಳಿ ಜಮೀನನ್ನು ದೇವಮಾತೃಕ (ಕಾಡಾರಂಭ)[48]ಮತ್ತು ನದಿಮಾತೃಕ (ನೀರಾರಂಭ)[49] ಗಳೆಂದು 2 ಭಾಗಗಳಾಗಿ ವಿಂಗಡಿಸಲಾಗಿತ್ತು. ಕೇವಲ ಮಳೆಯ ನೀರನ್ನೇ ಆಧರಿಸಿ ಬೆಳೆಯುವ ಖುಷ್ಕಿ ಅಥವಾ ಬೆದ್ದಲು ಭೂಮಿಗಳನ್ನು ದೇವಮಾತೃಕಗಳೆಂದು, ನದಿ, ಕೆರೆ, ಕಾಲುವೆ, ಬಾವಿ ಮುಂತಾದವುಗಳನ್ನು ಆಶ್ರಯಿಸಿ ಬೆಳೆಯುವ ಗದ್ದೆ ಅಥವಾ ತರಿ ಭೂಮಿಗಳನ್ನು ನದಿಮಾತೃಗಳೆಂದು ಕರೆಯಲಾಗುತ್ತಿತ್ತು. ನೀರಾರಂಭವು ಗದ್ದೆಯಲ್ಲದೆ ತೋಟ, ತುಟಿಕೆ, ಆಣೆ, ಅಚ್ಚುಕಟ್ಟೆಗಳ ನೀರಾವರಿ ಭೂಮಿಯನ್ನು ಒಳಗೊಂಡಿತ್ತು.ಕ್ರಿ.ಶ.1050ರ ಶಾಸನವು ‘ಕುಮರಿ ಉಳುಮೆ’ ಪದ್ಧತಿ ಬಗ್ಗೆ ತಿಳಿಸುತ್ತದೆ.[50]ಕುಮರಿ ಎಂದರೆ ಕಾಡನ್ನು ಕಡಿದು ಸಾಗುವಳಿ ಮಾಡಿದ ಪ್ರದೇಶವಾಗಿತ್ತು.ಅಂದರೆ ಈ ಭಾಗದಲ್ಲಿ ಕ್ರಿ.ಶ.1050ರ ಕಾಲಘಟ್ಟಕ್ಕಾಗಲೇ ಕಾಡನ್ನು ಕಡಿದು ಸಾಗುವಳಿ ಮಾಡುವ ಪ್ರಕ್ರಿಯೆ ಅಸ್ತಿತ್ವದಲ್ಲಿತ್ತು ಎಂದು ಹೇಳಬಹುದು.ಬಾವಿ, ಕೆರೆಕಟ್ಟೆ, ನದಿಗಳು ನೀರಾವರಿಯ ಮೂಲಗಳಾಗಿದ್ದು ಸಾಮಾನ್ಯವಾಗಿ ತೋಟಗಳಲ್ಲಿ ಬಾವಿಗಳು ಮತ್ತು ಕೊಳವೆ ಬಾವಿಗಳು ಕಂಡುಬರುತ್ತವೆ. ರಾಜರು, ಸಾಮಂತರು, ಗಾಮುಂಡರು ಮತ್ತು ಇತರರು ಕೆರೆಗಳನ್ನು ಕಟ್ಟಿಸಿರುವ ನಿದರ್ಶನಗಳು ಕಂಡುಬಂದಿದ್ದು ಕೆರೆ ನಿರ್ವಹಣೆಗಾಗಿ ನೀಡಿದ ಭೂಮಿಯನ್ನು ಬಿತ್ತುವಾಟ[51]ಎಂದು ಕರೆಯಲಾಗುತ್ತದೆ.ಇದರಿಂದ ಬಂದ ಆದಾಯದಿಂದ ಕೆರೆಯ ದುರಸ್ಥಿಯನ್ನು ಮಾಡಲಾಗುತ್ತದೆ.

**ಬೆಳೆಗಳು:**

ತಾಲೂಕಿನಲ್ಲಿ ಹಿಂದಿನ ಕಾಲದಿಂದಲೂ ಬೆಳೆಯುತ್ತಿದ್ದ ಬೆಳೆಗಳನ್ನು ಈಗಲೂ ಸಹ ಬೆಳೆಯುತ್ತಿರುವುದನ್ನು ಕಾಣಬಹುದಾಗಿದೆ.ಖುಷ್ಕಿ ಜಮೀನುಗಳಲ್ಲಿ ರಾಗಿ, ಜೋಳ, ಮಾವು, ಹಲಸುಗಳನ್ನು ಬೆಳೆದರೆಕೆರೆ, ಬಾವಿ ಮುಂತಾದ ನೀರಿನ ಸೌಕರ್ಯ ಇರುವ ಜಮೀನುಗಳಲ್ಲಿ ಭತ್ತ, ಕಬ್ಬು, ತರಕಾರಿ, ಬಾಳೆ, ತೆಂಗು, ಅಡಿಕೆ, ವೀಳ್ಯದೆಲೆ ಆಲೂಗೆಡ್ಡೆ ಮುಂತಾದವುಗಳನ್ನು ಬೆಳೆಯಲಾಗುತ್ತಿದೆ.ತಾಲೂಕಿನಲ್ಲಿ ಏಕದಳ ಧಾನ್ಯಗಳಾದ ಭತ್ತ, ರಾಗಿ, ಸಜ್ಜೆ, ಮುಸುಕಿನ ಜೋಳಗಳನ್ನು, ದ್ವಿದಳ ಧಾನ್ಯಗಳಾದ ಹುರುಳ, ಉದ್ದು, ಹೆಸರುಗಳನ್ನು ಅವರೆ, ಅಲಸಂದಿ, ಕಡಲೆ[52] ಗಳನ್ನು ಎಣ್ಣೆಕಾಳುಗಳಾದ ಶೇಂಗಾ, ಹರಳು, ಎಳ್ಳು, ಹುಚ್ಚೆಳ್ಳು, ಸಾಸಿವೆಗಳನ್ನುತೋಟದ ಬೆಳೆಗಳಾದ ತೆಂಗು ಅಡಿಕೆ ಗೋಡಂಬಿಗಳನ್ನು ತೋಟಗಾರಿಕೆ ಬೆಳೆಗಳಾದ ಬಾಳೆ, ಮಾವು, ನಿಂಬೆ, ಸೀಬೆ, ದ್ರಾಕ್ಷಿ, ಸಪೋಟ, ದಾಳಿಂಬೆ, ಪರಂಗಿಗಳನ್ನು ಮುಖ್ಯ ತರಕಾರಿ ಬೆಳೆಗಳಾದ ಆಲೂಗೆಡ್ಡೆ, ಟೋಮಾಟೋ, ಬದನೆ, ಹುರಳ ಕಾಯಿ, ಗೋರಿಕಾಯಿ, ಈರುಳ್ಳಿ, ಹಸಿರುಮೆಣಸಿನಕಾಯಿ[53]ಗಳನ್ನು ಬೆಳೆಯಲಾಗುತ್ತಿದೆ.

ದೇವನಹಳ್ಳಿ ತಾಲೂಕು ರೇಷ್ಮೆ ಕೃಷಿಗೆ ಹೆಸರಾಗಿದೆ.[54] ತಾಲೂಕಿನಲ್ಲಿ ಹಲವಾರು ಕಡೆ ಹಿಪ್ಪುನೇರಳೆ (ರೇಷ್ಮೆ)ಯನ್ನು ಬೆಳೆಯಲಾಗುತ್ತಿದ್ದು ತಾಲೂಕಿನಲ್ಲಿ ರೇಷ್ಮೆ ಚಾಕಿ ಸಾಕಾಣಿಕೆ ಕೇಂದ್ರ, ಬಿತ್ತನೆ ಕೋಠಿ ಮತ್ತು ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಗಳಿವೆ. ದೇವನಹಳ್ಳಿ ತಾಲೂಕಿನಲ್ಲಿ ಸ್ವಾತಂತ್ರ್ಯಪೂರ್ವದಿಂದಲೂ ರೇಷ್ಮೆಯನ್ನು ಬೆಳೆಯುತ್ತಿದ್ದುಕ್ರಿ.ಶ.1928-29ನೇ ಸಾಲಿನಲ್ಲಿ ರೇಷ್ಮೆಯನ್ನು 1284.34 ಗುಂಟೆಯಲ್ಲಿ ಬೆಳೆದಿರುವ ಅಂಶವು ದಾಖಲಾಗಿದೆ.[55] ದೇವನಹಳ್ಳಿ, ಬೂದಿಗೆರೆ, ವಿಜಯಪುರ ಮುಂತಾದ ಕಡೆಗಳಲ್ಲಿ ರೇಷ್ಮೆ ನೂಲು ಬಿಚ್ಚುವ ಚರಕಗಳಿದ್ದು ದೇವನಹಳ್ಳಿ ತಾಲೂಕಿನ ವಿಜಯಪುರದ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಯು ರಾಜ್ಯದ ಪ್ರಮುಖ ರೇಷ್ಮೆ ಮಾರುಕಟ್ಟೆಗಳಲ್ಲಿ ಒಂದೆನಿಸಿದೆ.

ತಾಲೂಕಿನಲ್ಲಿ ವಿವಿಧ ರೀತಿಯ ಹೂಗಳಾದ ಸುಗಂಧರಾಜ, ರೋಜಾ, ಕನಕಾಂಬರ, ಮಲ್ಲಿಗೆ, ಸೇವಂತಿಗೆ, ಸಂಪಿಗೆ, ಚೆಂಡುಹೂಗಳನ್ನು ಬೆಳೆಯಲಾಗುತ್ತಿದೆ. ದೇವನಹಳ್ಳಿ ತಾಲೂಕು ದ್ರಾಕ್ಷಿಬೆಳೆಗೆ ಹೆಸರಾಗಿದ್ದುತಾಲೂಕಿನ ವಿಜಯಪುರ ಹೋಬಳಿ, ವೆಂಕಟಗಿರಿ ಕೋಟೆ, ಬಿಜ್ಜವಾರ, ಆವತಿ ಮುಂತಾದ ಕಡೆಗಳಲ್ಲಿ ದ್ರಾಕ್ಷಿಯನ್ನು ಬೆಳೆಯಲಾಗುತ್ತಿದೆ.ತಾಲೂಕಿನಲ್ಲಿ ಬೆಳೆದ ಹೂಗಳು, ದ್ರಾಕ್ಷಿ ಮತ್ತು ತರಕಾರಿಗಳನ್ನು ಬೆಂಗಳೂರು, ಮೈಸೂರು, ಚೆನ್ನೈ, ಹೈದರಾಬಾದ್ ಮುಂತಾದ ನಗರಗಳಿಗೆ ಪೂರೈಸಲಾಗುತ್ತಿದೆ. ಚಕ್ಕೋತವನ್ನು ತಾಲೂಕಿನ ಆಯ್ದ ಕೆಲವು ಪ್ರದೇಶಗಳಲ್ಲಿ

ಬೆಳೆಯಲಾಗುತ್ತಿದ್ದು ಕರ್ನಾಟಕದ ಭೌಗೋಳಿಕ ಸೂಚಿಯಲ್ಲಿ ೩೩ ಉತ್ಪನ್ನಗಳಿದ್ದು, ಇವುಗಳಲ್ಲಿ ದೇವನಹಳ್ಳಿಯ ಚಕ್ಕೋತವು ಕೂಡ ಒಂದಾಗಿದೆ.[56]ದೇವನಹಳ್ಳಿಯ ಚಕ್ಕೋತಕ್ಕೆ ತನ್ನದೇ ಆದ ಪಾರಂಪರಿಕ ಮಹತ್ವವಿದೆ.

## ಅಡಿ ಟಿಪ್ಪಣಿಗಳು

1. ಕರ್ನಾಟಕ ಕೈಪಿಡಿ, ಕರ್ನಾಟಕ ಸರ್ಕಾರ, ಬೆಂಗಳೂರು, ಪು.ಸಂ.1,2012.
2. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.91, 2009-10.
3. ಅದೇ, ಪು.ಸಂ.6.
4. ಅದೇ, ಪು.ಸಂ.91.
5. ಅದೇ, ಪು.ಸಂ.1.
6. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.11, 2015-16
7. ಅದೇ, ಪು.ಸಂ.6, 2009-10.
8. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ-9, ಎಸ್.ಪಿ, ಬಿ.ಎನ್, 174, ಬೇಗೂರು, ಪು.ಸಂ.37, ಕ್ರಿ.ಶ.890.
9. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.2.1989.
10. ಅದೇ, ಪು.ಸಂ.2.
11. ಡಾ. ಅರುಣಿ, ಎಸ್.ಕೆ. ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.73, 2007.
12. ಹಯವದನರಾವ್, ಸಿ.  ಮೈಸೂರು ಗ್ಯಾಜೆಟಿಯರ್, ಸಂಪುಟ-5, ಪು.ಸಂ.157, 1930.
13. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.806, 1989.
14. ಎ.ಕ.ಸಂ.9, ಡಿ.ವಿ.8, ಚಿಕ್ಕವೋಬನಹಳ್ಳಿ, ಪು.ಸಂ.162.
15. ಎ.ಕ.ಸಂ.10, ಶಿಡ್ಲಘಟ್ಟ ಶಾಸನ ಸಂಖ್ಯೆ 116.
16. ಎ.ಕ.ಸಂ.9, ಡಿ.ವಿ.15, 30, 37, 51, ಡಿ.ಬಿ, 63, ಎ.ಕ.ಸಂ.10, ಶಿಡ್ಲಘಟ್ಟ 53, 56, 57.
17. ಶಾಮಶಾಸ್ತ್ರಿ, ಆರ್. ಸಂಪಾದಕ, ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.212, 1971.
18. ಕವಿ ಸದ್ಗುರು ನಂಜೇಶ್ವರ, ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ, ಕರ್ಲಮಂಗಲ ಶ್ರೀಕಂಠಯ್ಯ, ಸಂಪಾದಕ, ಎರಡನೇ ಭಾಗ, ಪು.ಸಂ.11.
19. ಕಲಬುರ್ಗಿ, ಎಂ.ಎಂ. ಸಂಪಾದಕರು, ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.69-70 ಮತ್ತು 72-74, 1994.
20. ಹಯವದನರಾವ್, ಸಿ. (ಸಂ) ಮೈಸೂರು ಗ್ಯಾಜೆಟಿಯರ್, ಸಂಪುಟ-5, ಭಾಗ1, ಬೆಂಗಳೂರು, ಪು.ಸಂ.154-155, 1930.
21. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.96, 2009-10.
22. ಅದೇ, ಪು.ಸಂ.6.
23. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.6, 1989.

24. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ ಅಂಶಗಳ ನೋಟ, ಪು.ಸಂ.1, 2009-10.

25. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ ಅಂಶಗಳ ನೋಟ, ಪು.ಸಂ.11, 2015-16.

26. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ ಅಂಶಗಳ ನೋಟ, ಪು.ಸಂ.6, 2009-10.

27. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, ಪು.ಸಂ.9, 1989.

28. ಅದೇ ಪು.ಸಂ.9

29. ಹಯವದನರಾವ್, ಸಿ. (ಸಂ)ಮೈಸೂರು ಗ್ಯಾಜೆಟಿಯರ್, ಸಂಪುಟ-5, ಭಾಗ, 1, ಬೆಂಗಳೂರು, ಪು.ಸಂ.212, 1930.

30. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.10, 1989.

31. ಅದೇ, ಪು.ಸಂ.12.

32. ಅದೇ, ಪು.ಸಂ.12.

33. ಅದೇ, ಪು.ಸಂ.13, 14.

34. ಅದೇ, ಪು.ಸಂ.14.

35. ಅದೇ, ಪು.ಸಂ.15-18.

36. ಅದೇ, ಪು.ಸಂ. 20-21.

37. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.24, 2009-10.

38. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.21, 1989.

39. ಅದೇ, ಪು.ಸಂ.22.

40. ಅದೇ, ಪು.ಸಂ.22-23.

41. ಅದೇ, ಪು.ಸಂ.24-25.

42. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.17, 2009-10.

43. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.26-27, 1989.

44. ಅದೇ, ಪು.ಸಂ.29-30.

45. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಬೆಂಗಳೂರು, ಪು.ಸಂ.22, 2012.

46. ಎ.ಕ.ಸಂ.9, ಡಿ.ಬಿ.12, ತೂಬಗೆರೆ, ಪು.ಸಂ.136, ಕ್ರಿ.ಶ.1785.

47. ಎ.ಕ.ಸಂ.9, ಬಿ.ಎನ್.124, ಯಶವಂತಪುರ, ಪು.ಸಂ.46.

48. ಎ.ಕ.ಸಂ.9, ಹೆಚ್,ಟಿ, 69, ಕದಮನಪುರ, ಪು.ಸಂ.213, ಕ್ರಿ.ಶ.1550.

49. ಅದೇ, ಪು.ಸಂ.213.

50. ಎ.ಕ.ಸಂ.9, ಡಿ.ವಿ, 76, ಗಂಗವಾರ, ಪು.ಸಂ.85, ಕ್ರಿ.ಶ.1050.

51. ಎ.ಕ.ಸಂ.9, ಎಸ್.ಪಿ, ಸಿ.ಪಿ, 192, ರಾಮಪುರ, ಪು.ಸಂ.46.

52. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.28, 2009-10.

53. ಅದೇ, ಪು.ಸಂ.33,37,39, 40, 41, 2015-16.

54. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.ಸಂ.32, 2009-10.

55. Bangalore District Hand Book-1930, P, 127.

56. ಕನ್ನಡ ಪ್ರಭ, ವಿಶೇಷ-05, ಗುರುವಾರ, ದಿ.20/08/2015, ಬೆಂಗಳೂರು.

## ಅಧ್ಯಾಯ-3

## ಪ್ರಾಗೈತಿಹಾಸಿಕ ಮತ್ತು ಪುರಾತತ್ವ ನೆಲೆಗಳು

**ಪೀಠಿಕೆ:**

ಅಧ್ಯಯನ ಮತ್ತು ಸಂಶೋಧನೆ ದೃಷ್ಟಿಯಿಂದ ಹಾಗೂ ಮಾನವನ ಸಂಸ್ಕೃತಿ ಬೆಳವಣಿಗೆ ಹೊಂದಿದ ರೀತಿಯನ್ನು ಆಧರಿಸಿ, ಪ್ರಾಗೈತಿಹಾಸವನ್ನು ಹಳೆಶಿಲಾಯುಗ, ಮಧ್ಯ ಹಳೆಶಿಲಾಯುಗ, ಅಂತ್ಯಹಳೆಶಿಲಾಯುಗ, ಸೂಕ್ಷ್ಮ ಶಿಲಾಯುಗ, ನವಶಿಲಾಯುಗ-ತಾಮ್ರಯುಗ ಮತ್ತು ಕಬ್ಬಿಣಯುಗ ಅಥವಾ ಬೃಹತ್‌ಶಿಲಾಯುಗಗಳೆಂದು ವರ್ಗೀಕರಿಸಬಹುದು.[1]

ಕ್ರಿ.ಪೂ.1000 ದಿಂದ ಕ್ರಿ.ಪೂ.300ರವರೆಗಿನ ದಕ್ಷಿಣ ಭಾರತ ಮತ್ತು ದಖ್ಖನ್ ಪ್ರದೇಶಗಳು ಮೆಗಲಿಥಿಕ್ ಸಂಸ್ಕೃತಿಗೆ ಸಾಕ್ಷಿಯಾಗಿವೆ. ಮೆಗಲಿಥಿಕ್ ಎಂಬ ಪದವು ಗ್ರೀಕ್ ಭಾಷೆಯ ಪದಗಳಾದ ಮೆಗಾ ಅಂದರೆ ದೊಡ್ಡದಾದ ಮತ್ತು ಲಿಥೋಸ್ ಅಂದರೆ ಕಲ್ಲು ಎಂಬರ್ಥವನ್ನು ಹೊಂದಿದ್ದು ಅಂದರೆ ಬೃಹತ್‌ಶಿಲಾಯುಗ ಎಂದರ್ಥವಾಗುತ್ತದೆ. ಸಾಮಾನ್ಯವಾಗಿ ಕಲ್ಲುಗಳು ಒರಟು ಮಾದರಿಯಲ್ಲಿ ಇದ್ದು ಅವುಗಳನ್ನು ಸತ್ತ ವ್ಯಕ್ತಿಯ ಜ್ಞಾಪಕಾರ್ಥಕವಾಗಿ ನೆಡಲಾಗುತ್ತಿತ್ತು.ಈ ರೀತಿಯ ಪದ್ಧತಿಯು ಭಾರತದ ಉಪಖಂಡದ ವಿವಿಧ ಪ್ರದೇಶಗಳಲ್ಲಿ ವಿವಿಧ ರೀತಿಯ ನಮೂನೆ ಮತ್ತು ರಚನೆಗಳಲ್ಲಿ ಕಂಡು ಬಂದಿದ್ದು ಹೋಮೋಜೀನಿಯಸ್ ಸಂಸ್ಕೃತಿಯು ಎರಡು ರೀತಿಯ ಅಂಶಗಳನ್ನು ಒಳಗೊಂಡಿದೆ. ಅವುಗಳೆಂದರೆ ಎ) ಕಬ್ಬಿಣದ ಉಪಕರಣಗಳು ಮತ್ತು ಆಯುಧಗಳ ಬಳಕೆ ಬಿ) ಕಪ್ಪು ಮತ್ತು ಕೆಂಪು ಬಣ್ಣದ ಹೊಳಪಿನ ಮತ್ತು ಸುಟ್ಟ ನಯಗೊಳಿಸಿದ ಮಡಿಕೆಗಳು ಕಂಡು ಬರುತ್ತವೆ. ಮೆಗಲಿಥಿಕ್ ನೆಲೆಗಳಲ್ಲಿ ಕಂಡುಬರುವ ಆಹಾರ ಧಾನ್ಯಗಳು ಮತ್ತು ಮಾನವ ನಿರ್ಮಿತವಾದ ವಸ್ತುಗಳು ಕೃಷಿ ಆಧಾರಿತ ವ್ಯವಸ್ಥೆ ಮತ್ತು ಬೇಟೆ ಮುಂತಾದ ಚಟುವಟಿಕೆಗಳನ್ನು ಸೂಚಿಸುವುದರ ಜೊತೆಗೆ ಕರಕುಶಲ ಚಟುವಟಿಕೆಗಳು ಕಬ್ಬಿಣ, ಚಿನ್ನ, ಬೆಳ್ಳಿ ಇತ್ಯಾದಿ ಬಳಕೆಯ ಬಗ್ಗೆ ಮಾಹಿತಿ ಒದಗಿಸುತ್ತವೆ. ಮೆಗಲಿಥಿಕ್ ಸಂಸ್ಕೃತಿಯ ಉಗಮ, ಕಾಲ ಮತ್ತು ಮಾಲೀಕತ್ವದ ಬಗ್ಗೆ ಚರ್ಚೆಗಳು ನಡೆಯುತ್ತಿವೆ.[2]

ಮೆಗಲಿಥಿಕ್ ಸಂಸ್ಕೃತಿಯು ದಕ್ಷಿಣ ಭಾರತದಲ್ಲಿ ಪ್ರಥಮಬಾರಿಗೆ ಕಬ್ಬಿಣದ ಬಳಕೆ ಮಾಡಿದ ಸಮುದಾಯಗಳಾಗಿವೆ. ಮುಖ್ಯವಾದ ಅಂಶವೇನೆಂದರೆ ಇದು ನಿಯೋಲಿಥಿಕ್ ಮತ್ತು ಚಾಲ್ಕೋಲಿಥಿಕ್ ಸಂಸ್ಕೃತಿಗಳ ನಡುವಿನ ಸಂಬಂಧಗಳನ್ನು ಪುಷ್ಟೀಕರಿಸುವ ಪುರಾವೆಯಾಗಿದ್ದು, ಅದರ ಜೊತೆಗೆ ಡೆಕ್ಕನ್‌ನಲ್ಲಿ ಶಾತವಾಹನರ ಕಾಲದ ಪ್ರಾರಂಭಿಕ ಐತಿಹಾಸಿಕ ಕಾಲ ಮತ್ತು

ತಮಿಳುನಾಡಿನ ಸಂಘಮ್ ಸಾಹಿತ್ಯದ ಸಂಪ್ರದಾಯಗಳನ್ನು ಸ್ಪಷ್ಟೀಕರಿಸುವ ಪುರಾವೆಗಳಾಗಿವೆ. ಅತ್ಯಂತ ಪ್ರಮುಖ ವಿಚಾರವೇನೆಂದರೆ ದಕ್ಷಿಣ ಭಾರತದಲ್ಲಿ ತಾಮ್ರ ಮತ್ತು ಕಂಚಿನ ಕಾಲವು ಕಡಿಮೆ ಪ್ರಮಾಣದಲ್ಲಿ ಕಂಡುಬಂದಿದ್ದು ನೂತನ ಶಿಲಾಯುಗದ ಹಂತದಿಂದ ಪ್ರಾರಂಭವಾಗುವ ಕಬ್ಬಿಣಶಿಲಾಯುಗ ಪ್ರಾರಂಭವಾಗುತ್ತದೆ.[3]

ಸಿಂಧೂ ಗಂಗಾ ನದಿ ಬಯಲಿನ ಪ್ರದೇಶವನ್ನು ಹೊರತುಪಡಿಸಿ ಭಾರತದ ವಿವಿಧ ಭಾಗಗಳಲ್ಲಿ ಮೆಗಲಿಥಕ್ ಸಂಸ್ಕೃತಿಗಳ ಬಗ್ಗೆ ಮಾಹಿತಿಗಳು ಪ್ರಕಟಗೊಂಡವು.ಮೆಗಲಿಥಿಕ್ ಸಂಸ್ಕೃತಿಯ ಮುಖ್ಯ ಲಕ್ಷಣವೆಂದರೆ ಕಪ್ಪು ಮತ್ತು ಕೆಂಪುಬಣ್ಣದ ನಯಗೊಳಿಸಿದ ಮಡಿಕೆಗಳ ಬಳಕೆ ಇದರಿಂದ ಇವರು ಕುಂಬಾರಿಕೆ ತಂತ್ರಜ್ಞಾನ (ಸೆರಾಮಿಕ್)ಗಳ ಬಳಕೆಯನ್ನು ಬಲ್ಲವರಾಗಿದ್ದರು ಎಂದು ತಿಳಿದುಬರುತ್ತದೆ.ಕೆಲವು ಸಂಶೋಧಕರ ಪ್ರಕಾರ ಮೆಗಲಿಥಿಕ್ ಕುಂಬಾರಿಕೆಯು ಹರಪ್ಪ ಸಂಸ್ಕೃತಿಗೆ ಸಂಬಂಧವಿತ್ತೆಂದು ಪ್ರತಿಪಾದಿಸುತ್ತಾರೆ.[4]ಆದರೆ ಈ ಸಂಬಂಧಗಳ ಕುರಿತು ಪ್ರಕ್ರಿಯೆ ಮತ್ತು ಅಂಶಗಳು ಸ್ಪಷ್ಟವಾಗಿಲ್ಲ.

ಮತ್ತೊಂದು ವಿಶೇಷವೇನೆಂದರೆ ದಕ್ಷಿಣ ಭಾರತದಲ್ಲಿ ಮೆಗಲಿಥಿಕ್ ಸಂಸ್ಕೃತಿಯು ಕಬ್ಬಿಣದಿಂದ ಮಾಡಿದ ಸಾಮಾಗ್ರಿ ಮತ್ತು ಆಯುಧಗಳನ್ನು ಬಳಕೆ ಮಾಡಿರುವುದು.ಆಯುಧಗಳಲ್ಲಿ ಕಳೆಗುದ್ದಲಿ, ಮಚ್ಚುಗತ್ತಿ, ಕೊಡಲಿಗಳನ್ನು ಕೃಷಿಯಲ್ಲಿ ಬಳಸುತ್ತಿದ್ದರು.ಉಳಿ, ಆಣಿಗಳನ್ನು ಕಸುಬುದಾರರ ಚಟುವಟಿಕೆಗಳಿಗೆ ಮತ್ತು ಕತ್ತಿ, ಕಠಾರಿ, ಭರ್ಜಿ, ಬಾಣತಲೆಗಳನ್ನು ಯುದ್ಧ ಅಥವಾ ಹೋರಾಟ ಮತ್ತು ಬೇಟೆಗೆ ಬಳಸುತ್ತಿದ್ದರು.ದಕ್ಷಿಣ ಭಾರತದ ಮೆಗಲಿಥಿಕ್ ಸಂಸ್ಕೃತಿಯ ಜನರು ಭಾರತದಲ್ಲಿ ಕಬ್ಬಿಣವನ್ನು ಮೊದಲ ಬಾರಿಗೆ ಬಳಕೆ ಮಾಡಿದ್ದರಿಂದ ಇದನ್ನು ದಕ್ಷಿಣ ಭಾರತದ ಕಬ್ಬಿಣ ಸಂಸ್ಕೃತಿಯೆಂದು ಕರೆಯಲಾಗುತ್ತದೆ. [5]

ಮೆಗಲಿಥಿಕ್ ಸಂಸ್ಕೃತಿಯ ಜನರು ಕೃಷಿ ಚಟುವಟಿಕೆ ಮತ್ತು ಪ್ರಾಣಿಗಳನ್ನು ಬೇಟೆಯಾಡುವುದರ ಮೂಲಕ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದರು.ದಕ್ಷಿಣ ಭಾರತದ ಮೆಗಲಿಥಿಕ್ ಸಂಸ್ಕೃತಿಯಲ್ಲಿ ಶ್ರೇಣಿಕೃತ ಸಮಾಜವಿದ್ದು ಅದನ್ನು ಮುಖ್ಯಸ್ಥನು ನಿರ್ವಹಿಸುತ್ತಿದ್ದನು. ಸಮಾಜೋ–ಆರ್ಥಿಕ ಜೀವನವು ಪ್ರಾಗೈತಿಹಾಸಿಕ ಸಮುದಾಯಗಳಿಗೆ ಸಾಕ್ಷಿಯಾಗಿವೆ. ಗೋರಿಗಳಲ್ಲಿ ಶವದ ಜೊತೆಗೆ ಶವ ಸಂಸ್ಕಾರದ ವಸ್ತುಗಳನ್ನು ಇಟ್ಟಿರುವುದನ್ನು ಗಮನಿಸಿದರೆ ಜನರು ಧಾರ್ಮಿಕ ಸಂಪ್ರದಾಯಗಳು ಮತ್ತು ಸತ್ತ ನಂತರ ಜೀವನದ ಬಗ್ಗೆ ಹೊಂದಿರುವ ನಂಬಿಕೆಯನ್ನು ಸೂಚಿಸುತ್ತವೆ.[6]ಕಬ್ಬಿಣಯುಗದಲ್ಲಿ ಕಂಡುಬರುವ ಸ್ಪಷ್ಟವಾದ ಬದಲಾವಣೆಗಳೆಂದರೆ ಮಡಿಕೆಗಳ ವಿನ್ಯಾಸ, ಬಣ್ಣ, ವಿಧಗಳು ಮತ್ತು ಚಿತ್ರಲಂಕಾರ ಇದರ

ಜೊತೆಗೆ ಕಬ್ಬಿಣದ ಆಯುಧಗಳು ಮತ್ತು ವಿವಿಧ ಉಪಕರಣಗಳ ಬಳಕೆ, ಕಲ್ಲಿನ ಕೊಡಲಿಗಳು, ಕಲ್ಲಿನ ಹಲಗುಗಳು, ತಾಮ್ರದ ಉಪಯೋಗ, ಚಿನ್ನಾಭರಣಗಳು ಕಲ್ಲು ಮತ್ತು ಮಣ್ಣಿನ ಮಣಿಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಕಿವೆ. ಮಡಿಕೆ ವಿಧದಲ್ಲಿ ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆಗಳು, ಕೆಲವು ಮಡಿಕೆಗಳ ಮೇಲೆ ಗೀರು ಚಿತ್ರ ಅಥವಾ ಚಿನ್ಹೆಗಳು ನಮೂದಿಸಲ್ಪಟ್ಟಿವೆ. ಇವುಗಳನ್ನು ಗ್ರಾಫಿಟಿಯೆಂದು ಕರೆಯಲಾಗಿದೆ. ಕಬ್ಬಿಣಯುಗದ ಬೃಹತ್‌ಶಿಲಾಯಗದ ಅತ್ಯಂತ ಪ್ರಮುಖ ಅಂಶವೆಂದರೆ ಆ ಜನಾಂಗದವರು ನಿರ್ಮಿಸಿರುವ ವಿವಿಧ ರೀತಿಯ ಸಮಾಧಿಗಳು ಇವುಗಳಲ್ಲಿ ಬಹಳಷ್ಟು ಸಮಾಧಿಗಳು ಬೃಹತಾಕಾರದ ಕಲ್ಲು ಚಪ್ಪಡಿಗಳಿಂದ ಗುಂಡುಗಳಿಂದ ನಿರ್ಮಿತವಾಗಿವೆ ಆದ್ದರಿಂದ ಈ ಸಂಸ್ಕೃತಿಗೆ ಬೃಹತ್‌ಶಿಲಾಯುಗ ಸಂಸ್ಕೃತಿ ಎಂಬ ಹೆಸರು ಕೂಡ ಇದೆ.

**ಬೃಹತ್‌ಶಿಲಾಯುಗದ ಕಲ್ಗೋರಿಗಳು ಮತ್ತು ನಿಲುಸುಗಲ್ಲುಗಳು**

ಸಹಜವಾಗಿಯೇ ಬೆಟ್ಟಗುಡ್ಡಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸುಲಭವಾಗಿ ಕಲ್ಲು ಚಪ್ಪಡಿಗಳ ಗುಂಡುಗಳು ದೊರೆಯಬಹುದಾದ ಪ್ರದೇಶದಲ್ಲಿಯೇ ಬೃಹತ್‌ಶಿಲಾಯುಗದ ಗೋರಿಗಳು ಕಂಡುಬರುತ್ತವೆ. ಸಾಧ್ಯವಾದಷ್ಟು ಮಟ್ಟಿಗೆ ಬೆಟ್ಟಗುಡ್ಡಗಳ ಸಮತಟ್ಟು, ಇವುಗಳ ತಪ್ಪಲು ಪ್ರದೇಶ ಅಥವಾ ಹೆಚ್ಚು ಶಿಲಾಮಯವಾದ ಬರಡು ಭೂಮಿಯನ್ನು ಕಲ್ಗೋರಿಗಳ ನಿರ್ಮಾಣಕ್ಕೆ ಮೀಸಲಾಗಿಡುತ್ತಿದ್ದರು. ಕೃಷಿಗೆ ಯೋಗ್ಯವಾದ ಭೂಮಿಯಲ್ಲಿ ಇಂತಹ ನಿರ್ಮಿತಿಗಳಿರುತ್ತಿರಲಿಲ್ಲ. ಹೇರಳವಾಗಿ ಕಬ್ಬಿಣ ನಿಕ್ಷೇಪಗಳುಳ್ಳ ಅಥವಾ ಅಲಂಕರಣ ಸಲಕರಣೆಗಳಿಗೆ ಬೇಕಾಗುವ ಮತ್ತು ಪೋಣಿಸುವ ಮಣಿಗಳಿಗೆ ಬೇಕಾದ ಉತ್ತಮ ದರ್ಜೆಯ ಕಲ್ಲುಗಳು ಅಂದರೆ ಅಗೇಡ್ ಜಾಲ್ಸಿಡಾನಿ, ಕಾರ್ನೀಲಿಯಾ, ಜಾಸ್ಪರ್ ಮೊದಲಾದ ಕಲ್ಲುಗಳು ದೊರೆಯುವ ಹತ್ತಿರದಲ್ಲಿ ಕಲ್ಗೋರಿಗಳ ನೆಲೆಗಳಿವೆ. ಬೆಟ್ಟಗುಡ್ಡಗಳ ಆಯ್ಕೆಯಲ್ಲಿಯೂ ಕಣಿವೆ ಪ್ರದೇಶಗಳನ್ನು ಆರಿಸಿಕೊಳ್ಳಲಾಗುತ್ತಿತ್ತು. ಇಂತಹ ಪ್ರದೇಶಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಬೇಕಾದ ಕಲ್ಲುಗಳು ದೊರೆಯುವುದಲ್ಲದೆ ನೀರಿನ ಸೌಕರ್ಯವಿರುತ್ತದೆ.[7]

ಈ ಸಂಸ್ಕೃತಿಯ ಜನಸಮುದಾಯವು ಬಹುಮಟ್ಟಿಗೆ ಕಬ್ಬಿಣ ಅದಿರಿನಿಂದ ಲೋಹ ತಯಾರಕೆ ಮತ್ತು ಕಮಾರಿಕೆಯ ತಂತ್ರಗಾರಿಕೆಯನ್ನು ಪ್ರಥಮಬಾರಿಗೆ ಸುಮಾರು ಕ್ರಿ.ಪೂ.1500–1300ರಲ್ಲಿ ದಕ್ಷಿಣ ಭಾರತದಲ್ಲಿ ಆರಂಭಿಸಿದರೆಂದು ಹೇಳಬಹುದು. ಇದರಿಂದ ಸ್ವಲ್ಪ ಕಾಲದಲ್ಲಿಯೇ ಶಿಲಾ ಉಪಕರಣಗಳನ್ನು ಮಾಡುವ ಮತ್ತು ಉಪಯೋಗಿಸುವ ಉದ್ಯಮ ಕೊನೆಗೊಂಡಿತು, ಜೊತೆಗೆ ಚಿನ್ನದ ಗಣಿಗಾರಿಕೆಯನ್ನು ಉತ್ತಮ ದರ್ಜೆಯ ಜಾಸ್ಟರ್, ಕ್ಯಾಲ್ಸಿಡೋಣಿ, ಅಗೇಟ್, ಕಾರ್ನಿಲಿಯನ್, ಕ್ರಸ್ಟಲ್ ಮೊದಲಾದ ಕಲ್ಲುಗಳಲ್ಲಿ ಮಾಲೆಯಂತೆ ಪೋಣಿಸಲಾಗುವಂಥಹ ಆಭರಣದ ಮಣಿಗಳನ್ನು ಮಾಡುವ ಕುಶಲ ಕರ್ಮಿಗಳಾಗಿದ್ದರು. ಈ

ಕಸುಬಿಗೋಸ್ಕರ ಲೋಹಗಳ ಅದರಿನ ನಿಕ್ಷೇಪವಿದ್ದ ಮತ್ತು ಉತ್ತಮ ದರ್ಜೆಯ ಶಿಲೆಗಳಿರುವ ಸ್ಥಳಗಳ ಮೇಲೆ ಇವರ ನಿಯಂತ್ರಣವಿರಬೇಕಾಗುತ್ತಿತ್ತು.ಈ ಎಲ್ಲಾ ಬೆಳವಣಿಗೆಗಳಿಂದ ನಗರ ಸಂಸ್ಕೃತಿ ಘಟ್ಟವನ್ನು ಮುಟ್ಟಲು ಸಾಧ್ಯವಾಯಿತು.ಕ್ರಮೇಣ ಪ್ರಾದೇಶಿಕ ಪ್ರಭುತ್ವ ಬೆಳೆಯಲು ಅವಕಾಶವಾಯಿತು.[8]

**ಮೆಗಲಿಥಿಕ್ ಸ್ಮಾರಕಗಳ ಹಂಚಿಕೆ ಮತ್ತು ಅವುಗಳ ರಚನಾತ್ಮಕ ನಮೂನೆಗಳು**

ಭಾರತದಲ್ಲಿ ಬೃಹತ್‌ಶಿಲಾಯುಗದ ಸಮಾಧಿಗಳು ಪ್ರ.ಶ.ಪೂ.1300 ಹೊತ್ತಿಗೆ ಅಂದರೆ ಆದಿ ಕಬ್ಬಿಣಯುಗ ಸಂಸ್ಕೃತಿಯೊಂದಿಗೆ ಮೊದಲ ಬಾರಿಗೆ ಕಂಡುಬರುತ್ತವೆ. ಪಂಜಾಬ್, ಗಂಗಾನದಿ ಬಯಲು, ರಾಜಾಸ್ಥಾನದ ಮರುಭೂಮಿ ಪ್ರದೇಶ ಮತ್ತು ಗುಜರಾತ್‌ನ್ನು ಹೊರತುಪಡಿಸಿ ಭಾರತದ ಉಳಿದೆಲ್ಲ ಭಾಗಗಳಲ್ಲಿ ಬೃಹತ್ ಶಿಲಾಯುಗ ಗೋರಿಗಳು ಹರಡಿವೆ.[9]
ಬಿ.ಕೆ.ಥಾಪರ್‌ರವರು ಸಮಾಧಿಗಳನ್ನು 4 ಪ್ರಾದೇಶಿಕ ವಲಯ ಅಥವಾ ಸಂಕೀರ್ಣಗಳಾಗಿ ವಿಂಗಡಿಸಿದ್ದಾರೆ.ಇವುಗಳೆಂದರೆ ಪರ್ಯಾಯ ಭಾರತ, ಪರ್ಯಾಯ ಭಾರತದಾಚೆಯ ವಲಯ, ವಿಂಧ್ಯಪ್ರದೇಶ ಮತ್ತು ಈಶಾನ್ಯ ಭಾರತ. ಪರ್ಯಾಯ ಭಾರತದಲ್ಲಿ ಮುಖ್ಯವಾಗಿ ಆಂಧ್ರ, ಕರ್ನಾಟಕ, ತಮಿಳುನಾಡು ಮತ್ತು ಕೇರಳ ರಾಜ್ಯಗಳಲ್ಲಿ ಇವು ಅತ್ಯಧಿಕ ಸಂಖ್ಯೆಯಲ್ಲಿವೆ.[10]

**ಸಮಾಧಿ ನಮೂನೆಗಳು**:

ಮೆಗಲಿಥಿಕ್ ಸ್ಮಾರಕಗಳ ರಚನಾತ್ಮಕ ನಮೂನೆಗಳನ್ನು ವಿ.ಡಿ.ಕೃಷ್ಣಸ್ವಾಮಿ, ಆಲ್ಚಿನ್ ಮತ್ತಿತರು ಗುರುತಿಸಿದ್ದಾರೆ. ಅವುಗಳೆಂದರೆ ನಿಲಸುಗಲ್ಲುಗಳು (ಮೆನ್ಹಿರ್), ಕಲ್ಮನೆ (ಡಾಲ್ಮೆನ್) ಕಲ್ಗುಪ್ಪೆಗಳು (ಕೇಯಿರ್ನ್), ಸ್ಟೋನ್, ಕಲ್ಲುವೃತ್ತಗಳು (ಸರ್ಕಲ್), ಅಸ್ಥಿ ಮಡಕೆಗಳು (ಅರ್ನ್) ಸಮಾಧಿದಿಬ್ಬ (ಬರೊ), ನೆಲಕೋಣೆ (ಸಿಸ್ಟ್), ಟೋಪಿಕಲ್ಲು, ಹೆಡೆಕಲ್ಲು (ಹುಡ್‌ಸ್ಟೋನ್) ಮತ್ತು ಮಾನವಾಕೃತಿಯ ಚಪ್ಪಡಿಕಲ್ಲು (ಅಂಥ್ರೋಪೊಮಾರ್ಫ್)[11]

**ವಸತಿ ನೆಲೆಗಳು**: ಈ ಸಂಸ್ಕೃತಿಯ ವಸತಿ ನೆಲೆಗಳು ಬೆರಳೆಣಿಕೆಯಲ್ಲಿ ಕಂಡುಬಂದಿದೆ. ವಸತಿ ನೆಲೆಗಳಲ್ಲಿ ಉತ್ಖನನ ಸಂದರ್ಭದಲ್ಲಿ ಸುಣ್ಣ ಲೇಪಿತ ನೆಲಗಟ್ಟುಗಳಿದ್ದ ಮಣ್ಣಿನ ಮನೆಗಳ (ವೃತ್ತ, ಚೌಕ, ಆಯತಾಕಾರ) ಅವಶೇಷ, ಒಲೆ, ಕಣಜ (ಧಾನ್ಯ ಶೇಖರಣಾ ಗುಂಡಿಗಳು) ಕಬ್ಬಿಣ ಮತ್ತು ತಾಮ್ರದ ಉಪಕರಣಗಳು, ಜಾನುವಾರು, ಎಮ್ಮೆ, ಕುರಿ, ಹಂದಿ, ಕತ್ತೆ, ನಾಯಿ, ಕುದುರೆ ಮುಂತಾದ ಸಾಕುಪ್ರಾಣಿ ಹಾಗೂ ವನ್ಯಮೃಗಗಳ ಮೂಳೆಗಳು, ಸುಟ್ಟ ಧಾನ್ಯ-ಕಾಳುಗಳು ಉತ್ಖನನದಲ್ಲಿ ಕಂಡುಬಂದಿವೆ. ನೀರಿನ ಸೆಲೆಗಳ ಸಮೀಪದಲ್ಲಿ ಫಲವತ್ತಾದ ಅಥವಾ ಖನಿಜ

ಸಂಪತ್ತು (ಕಬ್ಬಿಣ, ತಾಮ್ರ, ಚಿನ್ನ, ಬೆಳ್ಳಿ, ಸತು–ತವರ) ಹೇರಳವಾಗಿರುವ ಪ್ರದೇಶದಲ್ಲಿ ವಸತಿ ನೆಲೆಗಳಿದ್ದರೆ ಸಮಾಧಿಗಳು ಕೃಷಿಗೆ ಯೋಗ್ಯವಲ್ಲದ ಸ್ಥಳ ಅಥವಾ ಬಂಜರು ಭೂಮಿಯಲ್ಲಿಇಲ್ಲವೇ ಬಂಡೆಗಳು ಸುಲಭವಾಗಿ ಸಿಗುವಂತಹ ಸ್ಥಳಗಳಲ್ಲಿ ಇರುತ್ತವೆ. ವಸತಿ ನೆಲೆಯ ಆಯ್ಕೆಯಲ್ಲಿ ವಾಣಿಜ್ಯ ಚಟುವಟಿಕೆಗಳು ಮುಖ್ಯಪಾತ್ರ ವಹಿಸಿದ್ದಂತೆ ತೋರುತ್ತದೆ.

**ತಂತ್ರಜ್ಞಾನ**: ಕಬ್ಬಿಣ ತಂತ್ರಜ್ಞಾನ ಬೃಹತ್ ಶಿಲಾಯುಗದ ಒಂದು ವಿಶೇಷ ಅಂಶವಾಗಿದೆ. ಈ ಯುಗದಲ್ಲಿ ಕಬ್ಬಿಣ ತಂತ್ರಜ್ಞಾನ ಭಾರತದಾದ್ಯಂತ ಪ್ರಸರಿಸಿತು.

**ಉಪಕರಣಗಳು**:ಕಠಾರಿ, ಭಲ್ಲೆ, ತ್ರಿಶೂಲ, ಬಾಣದಮೊನೆ, ಕೊಕ್ಕೆ, ಕೊಂಡಿ, ಹಣತೆ, ಸೌಟು, ಬಾಚಿ, ಮಚ್ಚು, ನೇಗಿಲಿನ ಗುಳ, ಉಳಿ, ಚಾಣ, ಚಪ್ಪಟೆ ಕೊಡಲಿ–ಹೀಗೆ ನಾನಾ ವಿಧಧ ಉಪಕರಣಗಳನ್ನು ತಯಾರಿಸುವ ಕೌಶಲ್ಯ ಇವರಲ್ಲಿತ್ತು. ಕುದುರೆಯ ಕಡಿವಾಣದ ಭಾಗಗಳನ್ನು ಇವರು ಕಬ್ಬಿಣದಿಂದಲೇ ಮಾಡುತ್ತಿದ್ದರು.ಬಳೆ, ಉಂಗುರ, ಬಟ್ಟಲು, ಗಂಟೆ, ತಟ್ಟೆ, ಹಿಡಿಕೆ ಮೊದಲಾದ ದಿನಬಳಕೆಯ ವಸ್ತುಗಳಿಗೆ ತಾಮ್ರ ಮತ್ತು ಕಂಚುಗಳೆರಡನ್ನೂ ಬಳಸಿದ್ದಾರೆ.ಮಣಿಗಾರಿಕೆಯಲ್ಲಿಯೂ ಇವರು ಪ್ರಗತಿ ಹೊಂದಿದ್ದರು.[12]

ಭಾರತೀಯ ಪುರಾತತ್ತ್ವ ಕ್ಷೇತ್ರಕ್ಕೆ ಕರ್ನಾಟಕವು ಸಾಕಷ್ಟು ಕೊಡುಗೆ ನೀಡಿದೆ.ಸುಮಾರು 150ವರ್ಷಕ್ಕೂ ಅಧಿಕವಾದ ಪರಂಪರೆಯನ್ನು ಕರ್ನಾಟಕ ಪುರಾತತ್ತ್ವ ಇಲಾಖೆ ಹೊಂದಿದೆ.ಪುರಾತತ್ತ್ವ ಸಂಶೋಧನೆಗಳಿಗೆಂದೆ ಮೀಸಲಾದ ಪ್ರತ್ಯೇಕ ವಿಭಾಗ ಒಂದನ್ನು ಹೊಂದಿದ್ದ ಭಾರತದ ಕೆಲವೇ ರಾಜ್ಯಗಳಲ್ಲಿ ಕರ್ನಾಟಕವು ಕೂಡ ಒಂದು.ಕರ್ನಾಟಕದಲ್ಲಿ ಆದಿಶಿಲಾಯುಗದ ಕಾಲದಿಂದಲೂ ಮಾನವನು ನೆಲೆಸಿದ್ದನು.19ನೇ ಶತಮಾನದಲ್ಲಿ ರಾಬರ್ಟ್ ಬ್ರೂಸ್‌ಫ್ರೂಟ್ ಅವರ ಸಂಶೋಧನೆಯಿಂದ ಪ್ರಾರಂಭದಿಂದ ಕರ್ನಾಟಕದ ಪುರಾತತ್ತ್ವ ಅಧ್ಯಯನ ಹೊಸ ಹೊಸ ಸಂಶೋಧನೆಗಳಿಂದಾಗಿ ನಿರಂತರವಾಗಿ ವಿಕಾಸವಾಗುತ್ತ ಬಂದಿದೆ.ಪುರಾತತ್ತ್ವ ಸಂಶೋಧನೆಯಲ್ಲಿ ವಿವಿಧ ಶಾಖೆಗಳಾದ ಪುರಾತತ್ತ್ವ ಅನ್ವೇಷಣೆ, ಉತ್ಖನನ, ಶಾಸನಶಾಸ್ತ್ರ, ಕಲೆ ಮತ್ತು ವಾಸ್ತುಶಿಲ್ಪ, ಚಿತ್ರಕಲೆ ಮುಂತಾದ ಎಲ್ಲಾ ಕ್ಷೇತ್ರಗಳಲ್ಲೂ ಕರ್ನಾಟಕ ಸಂಶೋಧನಾ ವಲಯದಲ್ಲಿ ಗಣನೀಯ ಸಾಧನೆ ಕಂಡುಬಂದಿದೆ.[13]ಕರ್ನಾಟಕ ಪುರಾತತ್ತ್ವ ಸಂಶೋಧನೆಗೆ ಅಸ್ತಿಭಾರ ಹಾಕಿದ ವಿದ್ವಾಂಸರೆಂದರೆ ರಾಬರ್ಟ್ ಬ್ರೂಸ್‌ಫ್ರೂಟ್.ಇವರನ್ನು ಕರ್ನಾಟಕ ಪುರಾತತ್ತ್ವ ಸಂಶೋಧನೆಯ ಪಿತಾಮಹ ಎಂದು ಕರೆಯಲಾಗಿದೆ.ಇವರು ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಚರಿಸಿ ಶಿಲಾಯುಗಕ್ಕೆ ಸಂಬಂಧಿಸಿದ ಅನೇಕ ಅವಶೇಷಗಳನ್ನು ಸಂಗ್ರಹಿಸಿದ್ದಾರೆ.ನಂತರ ಹಲವಾರು ಸಂಶೋಧಕರು ಶಿಲಾಯುಗದ

ನೆಲೆಗಳನ್ನು ಸಂಶೋಧಿಸಿದರು.[14]ಕರ್ನಾಟಕದಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ನಿವೇಶನಗಳು ಕಂಡುಬಂದಿವೆ ಆದರೆ ಈ ನಿವೇಶನಗಳ ಉತ್ಖನನ ಮತ್ತು ವೈಜ್ಞಾನಿಕ ವಿಶ್ಲೇಷಣೆ ಇನ್ನೂ ಹೆಚ್ಚಿನ ರೀತಿಯಲ್ಲಿ ಆಗಬೇಕಾಗಿದೆ. ಕರ್ನಾಟಕದ ಇತಿಹಾಸದಲ್ಲಿ ಪೂರ್ವಭಾವಿಯುಗ ಬಹಳ ಮಹತ್ವದ ಕಾಲ ಕಾರಣವೇನೆಂದರೆ ಕರ್ನಾಟಕ ಸಂಸ್ಕೃತಿ ಮತ್ತು ನಾಗರಿಕತೆ ವಿಕಾಸಗೊಂಡ ಕಾಲವಿದು, ಕರ್ನಾಟಕದ ಪೂರ್ವಭಾವಿ ಯುಗವನ್ನು ಅಧ್ಯಯನ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ನವಶಿಲಾ-ತಾಮ್ರಯುಗ ಮತ್ತು ಕಬ್ಬಿಣಯುಗ-ಬೃಹತ್ ಶಿಲಾಯುಗ ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ಉತ್ಖನನದಲ್ಲಿ ನವಶಿಲಾಯುಗ-ತಾಮ್ರಯುಗವನ್ನು ಪತ್ತೆ ಮಾಡಿದವರು ಡಾ.ಎಂ.ಎಚ್.ಕೃಷ್ಣ ಅವರು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯಲ್ಲಿ 1940ರಲ್ಲಿ ನಡೆಸಿದ ಉತ್ಖನನದಲ್ಲಿ ನಯಮಾಡಿದ ಕಲ್ಲಿನ ಕೊಡಲಿಗಳು, ಬೂದು ಬಣ್ಣದ ಹೊಳಪು ಮಾಡಿದ ಮಡಿಕೆಗಳು ದೊರೆತವು ತದನಂತರ ಹಲವಾರು ವಿದ್ವಾಂಸರು ಬೇರೆ ಬೇರೆ ಕಡೆ ಸಂಶೋಧನೆ ನಡೆಸಿದರು.[15]

ಬೃಹತ್ ಶಿಲಾಯುಗದ ಕಲ್ಲಿನ ಗೋರಿಗಳು ಬಹುತೇಕ ಸಂದರ್ಭಗಳಲ್ಲಿ ಭೂಮಿಯ ಮೇಲ್ಮೈಯಲ್ಲಿ ಕಂಡುಬರುತ್ತವೆ. ಕ್ರಿ.ಶ.1851-60ರಲ್ಲಿ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ, ಅಂಡೋಲ (ಜೇವರ್ಗಿ ತಾಲೂಕು) ಚಿಕ್ಕನಹಳ್ಳಿ ಮತ್ತು ಹಗರಟಗಿ (ಸುರಪುರ ತಾಲೂಕು) ಗ್ರಾಮ ಪ್ರದೇಶಗಳ ಬಯಲು ಭೂಮಿಯಲ್ಲಿದ್ದ ದೊಡ್ಡ ದೊಡ್ಡ ನೂರಾರು ದುಂಡು ಕಲ್ಲು ವೃತ್ತಗಳನ್ನು ಆಗ ಸುರಪುರ ಸಂಸ್ಥಾನದ ಬ್ರಟಿಷ್ ಅಧಿಕಾರಿಯಾದ ಕರ್ನಲ್ ಮೆಡೋಸ್ ಟೇಲರ್ ಕುತೂಹಲದಿಂದ ವೀಕ್ಷಿಸಿ ಕೆಲವನ್ನು ವ್ಯವಸ್ಥಿತವಾಗಿ ತೆಗೆದು ಪರಿಶೀಲಿಸಿದರು. ಅವುಗಳಲ್ಲಿ ಕೋಜಿಕೋಡಿನಲ್ಲಿಯ ಗವಿಯಲ್ಲಿದ್ದಂತೆ ಮೃತ್ಪಾತ್ರೆಗಳು, ಕಬ್ಬಿಣದ ಉಪಕರಣಗಳು ಮತ್ತು ಮನುಷ್ಯರ ಅಸ್ಥಿಪಂಜರ ಅವಶೇಷಗಳು ಇದ್ದವು.[16]

ಸಂಶೋಧನಾ ದೃಷ್ಟಿಯಿಂದ ಆದ ಬೃಹತ್ ಶಿಲಾ ಸಮಾಧಿಯ ಉತ್ಖನನವೆಂದರೆ 1940ರಲ್ಲಿ ಬ್ರಹ್ಮಗಿರಿಯಲ್ಲಿ ಡಾ.ಎಂ.ಎಚ್.ಕೃಷ್ಣರವರು ನಡೆಸಿದ ಉತ್ಖನನ. 1947 ಏಪ್ರಿಲ್‌ನಲ್ಲಿ ಇದೇ ಸ್ಥಳದಲ್ಲಿ ಆಗಿನ ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಮಾರ್ಟಿಮರ್ ವೀಲ್ಹರ್‌ರವರು ಉತ್ಖನನ ನಡೆಸಿದರು.ಕ್ರಿ.ಶ. 1954ರಲ್ಲಿ ಥಾಪರ್ ಎಂಬುವವರು ಮಸ್ಕಿಯಲ್ಲಿ ನಡೆಸಿದ ಉತ್ಖನನದಲ್ಲಿ 8 ಬೃಹತ್ ಶಿಲಾಯುಗ ಸಮಾಧಿಗಳು ಕಂಡುಬಂದವು.[17] ಕ್ರಿ.ಶ.1956-57ರಿಂದ ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯು ಇಡೀ ದೇಶಕ್ಕೆ ಅನ್ವಯಿಸುವಂತೆ ಪ್ರತಿಯೊಂದು ಹಳ್ಳಿಯಲ್ಲಿ ಇದ್ದಿರಬಹುದಾದ ಎಲ್ಲಾ ಪ್ರಕಾರದ ಅವಶೇಷಗಳನ್ನು ಶೋಧಿಸಿ ರೇಖಾ ಮತ್ತು ಛಾಯಾಚಿತ್ರಗಳೊಡನೆ ಒಂದು ವಸ್ತುನಿಷ್ಟ

ಪ್ರತ್ಯೇಕ ವರದಿಯನ್ನು ಸಿದ್ಧಮಾಡುವ ಒಂದು ಬೃಹತ್ ಯೋಜನೆಯನ್ನು ಕೈಗೊಂಡಿತು.ಇದರ ಅಂಗವಾಗಿ ಕರ್ನಾಟಕದಲ್ಲಿ ಬಿಜಾಪುರ, ಧಾರವಾಡ ಮತ್ತು ಮೈಸೂರು ಜಿಲ್ಲೆಗಳಲ್ಲಿ ಈ ಮಹತ್ಕಾರ್ಯವನ್ನು ಆರಂಭಿಸಲಾಯಿತು.ದಕ್ಷಿಣ ಭಾರತದಲ್ಲಿ ಈವರೆಗೂ ಸುಮಾರು 2300ಕ್ಕೂ ಹೆಚ್ಚು ಬೃಹತ್ ಶಿಲಾ ಕಲ್ಗೋರಿಗಳ ಮತ್ತು ಈ ಸಂಸ್ಕೃತಿಯ ಜನ ಸಮುದಾಯದ ವಾಸ್ತವ್ಯ ನೆಲೆಗಳು ಬೆಳಕಿಗೆ ಬಂದಿವೆ.[18] ಕ್ರಿ.ಶ.1957ರಲ್ಲಿ ಬೆಂಗಳೂರು ಜಿಲ್ಲೆಯ ಜಡಿಗನಹಳ್ಳಿಯಲ್ಲಿ ಡಾ.ಎಂ.ಶೇಷಾದ್ರಿಯವರು ಬೃಹತ್‌ಶಿಲಾ ಸಮಾಧಿಯೊಂದರಲ್ಲಿ ಮಣ್ಣಿನ ಶವ ಪೆಟ್ಟಿಗೆಯನ್ನು, ಮತ್ತೊಂದು ಸಮಾಧಿಯಲ್ಲಿ ತ್ರಿಶೂಲ ಮತ್ತು ಹಿತ್ತಾಳೆ ಗಂಟೆಯೊಂದನ್ನು ಸಂಶೋಧಿಸಿದರು. ಕರ್ನಾಟಕದಲ್ಲಿ ನಡೆದ ಒಂದು ಮಹತ್ತರವಾದ ಬೃಹತ್ ಶಿಲಾ ಸಮಾಧಿಗಳ ಉತ್ಖನನಗಳೆಂದರೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ವತಿಯಿಂದ ಡಾ.ಕೆ.ಕೆ.ಸುಬ್ಬಯ್ಯನವರು ನಡೆಸಿದ ಉತ್ಖನನಗಳು. ಈ ಸರಣಿ ಉತ್ಖನನಗಳು 1974-75ರಲ್ಲಿ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲೂಕಿನ ಹೆಗ್ಗಡೆಹಳ್ಳಿಯಲ್ಲಿ 6 ಸಮಾಧಿಗಳನ್ನು, 1976-77 ಮತ್ತು 1984ರಲ್ಲಿ ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲೂಕಿನ ಕಾವೇರಿ ಬಲದಂಡೆ ಮೇಲಿನ ಕೊಪ್ಪದಲ್ಲಿ 29 ಸಮಾಧಿಗಳನ್ನು ಶೋಧನೆ ಮಾಡಿತು. ಹೆಗ್ಗಡಹಳ್ಳಿಯ ಸಮಾಧಿಯಲ್ಲಿ ಸಂಪೂರ್ಣವಾದ ಮಾನವನ ಅಸ್ತಿಪಂಜರ ದೊರೆಯಿತು. [19]

ಬೃಹತ್ ಶಿಲಾಯುಗದ ಸಂಸ್ಕೃತಿಯ ಸಮಾಧಿ ನೆಲೆಗಳು ಕರ್ನಾಟಕದ ಕೆಲವು ಭಾಗಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ಸಾಮಾನ್ಯವಾಗಿ ಕಡು ಗ್ರಾನೈಟ್ ಶಿಲೆ ಮತ್ತು ಅದರ ಉಂಡೆಗಲ್ಲುಗಳು ದೊರೆಯುತ್ತಿದ್ದ ಪ್ರದೇಶಗಳು ಮತ್ತು ನಿತ್ಯ ಜೀವನಕ್ಕೆ ಬೇಕಾಗುವ ನೀರಿನ ಹರಿವು ಇರುವ ಪ್ರದೇಶಗಳಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿವೆ. ರಾಜ್ಯ ಪುರಾತತ್ವ ಇಲಾಖೆಯ ನಿರ್ದೇಶಕರುಗಳು, ಡಾ.ಎಂ.ಶೇಷಾದ್ರಿಯವರು, ಬಿ.ಕೆ.ಗುರುರಾಜ ರಾವ್‌ರವರು, ಡಾ.ಕೆ.ಕೆ.ಸುಬ್ಬಯ್ಯ ಮುಂತಾದ ಸಂಶೋಧಕರು ಸಾಕಷ್ಟು ಕ್ಷೇತ್ರಕಾರ್ಯ ಮತ್ತು ಭೂಉತ್ಖನನ ಮಾಡಿ ಸಂಶೋಧನೆಯನ್ನು ನಡೆಸಿದ್ದಾರೆ. ಅದರಲ್ಲಿ ಡಾ.ಕೆ.ಕೆ.ಸುಬ್ಬಯರವರ Megalithics of Coorg District &ಬಿ.ಕೆ.ಗುರುರಾಜ ರಾವ್‌ರವರ Megalithic Culture in South India ಹಾಗೂ ಕಾಲಕಾಲಕ್ಕೆ ನಡೆದ ಸಂಶೋಧನೆಗಳನ್ನು Mysore Archaeological Reports, Indian Archaeological Reports, ಕೇಂದ್ರ ಪುರಾತತ್ವ ಇಲಾಖೆ ಪ್ರತಿವರ್ಷಕ್ಕೆ ಒಂದರಂತೆ ಪ್ರಕಟಿಸುವ Review of Archaeology ಪುಸ್ತಕಗಳು ಇವುಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ. ನನ್ನ ಸಂಶೋಧನೆಗೆ ಉಪಯುಕ್ತವಾದವುಗಳೆಂದರೆ ಕೋಲಾರ, ಚಿಕ್ಕಬಳ್ಳಾಪುರ,

ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ, ದೇವನಹಳ್ಳಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬೃಹತ್‌ಶಿಲಾಯುಗದ ಸಮಾಧಿಗಳು ಕಂಡುಬಂದಿವೆ. ಇದಕ್ಕೆ ಕಾರಣವೇನೆಂದರೆ ಇಲ್ಲಿ ಹೇರಳವಾಗಿ ದೊರೆಯುವ ಬೃಹತ್‌ಶಿಲಾಯುಗದ ಸಂಸ್ಕೃತಿಯ ಜನರು ಹೆಚ್ಚು ಪ್ರೀತಿಸುವ ಈ ಗ್ರಾನೈಟ್ ಶಿಲೆಯೇ ಕಾರಣ. ಕೋಲಾರ ಜಿಲ್ಲೆಯಲ್ಲಿ ಒಂದು ಕಾಲದಲ್ಲಿ ಸಮೃದ್ಧವಾಗಿ ಹರಿಯುತ್ತಿದ್ದ ಚಿತ್ರಾವತಿ ನದಿಯು ಚಿಕ್ಕಬಳ್ಳಾಪುರ ಮತ್ತಿತರ ಪ್ರದೇಶಗಳಿಗೆ ನೀರಿನ ಹರಿವು ಇದ್ದುದ್ದರಿಂದ ಇಲ್ಲಿ ಹೇರಳ ಪ್ರಮಾಣದಲ್ಲಿ ಬೃಹತ್‌ಶಿಲಾಯುಗದ ಸಮಾಧಿಗಳು ಗುಂಪು ಗುಂಪಾಗಿ ಕಂಡುಬರುತ್ತವೆ. Mysore Archaeological Reports, 1917ರಲ್ಲಿ ನಡೆದಿರುವ ಮನಗೊಂಡನಹಳ್ಳಿಯಲ್ಲಿ ನಡೆದ ಉತ್ಖನನ ದೇವನಹಳ್ಳಿ ತಾಲೂಕಿನ ಮೊದಲ ಬೃಹತ್‌ಶಿಲಾಯುಗದ ಉತ್ಖನನವಾಗಿದ್ದು, ಅದರಲ್ಲಿ ಅತ್ಯುನ್ನತ ಮಟ್ಟದ ಅವಶೇಷಗಳು ದೊರೆಕಿವೆ. ಅದರಲ್ಲಿಯೂ 3 ಕಾಲುಗಳುಳ್ಳ ಕೆಂಪು ಮತ್ತು ಕಪ್ಪುಮಿಶ್ರಿತ ಜಾಡಿಗಳು, ಹೂಜಿಗಳು ಹಾಗೂ ಅನೇಕ ರೀತಿಯ ಮಣ್ಪಾತ್ರೆಗಳು ಕಂಡುಬಂದಿರುವುದು ಅತ್ಯಂತ ಪ್ರಮುಖವಾದ ಸಂಶೋಧನೆಯಾಗಿವೆ. ದಕ್ಷಿಣ ಭಾರತದಲ್ಲಿ ಇಲ್ಲಿ ಪ್ರಪ್ರಥಮ ಬಾರಿಗೆ ಒಂದು ಮುರಿದು ಹೋಗಿರುವ 'ಹೆಡ್‌ರೆಸ್ಟ್' ದೊರಕಿರುವುದು ಅತ್ಯಂತ ಕುತೂಹಲಕಾರಿಯಾದುದು. ಮೈಸೂರು ಜಿಲ್ಲೆಯ ತಿ.ನರಸೀಪುರದಲ್ಲಿ ಡಾ.ಎಂ.ಶೇಷಾದ್ರಿರವರು 1964–65ರಲ್ಲಿ ನಡೆಸಿದ ಉತ್ಖನನ ಸಂದರ್ಭದಲ್ಲಿ ಕುತ್ತಿಗೆ ಭಾಗದಲ್ಲಿ ಇಂತಹ ಒಂದು 'ಹೆಡ್‌ರೆಸ್ಟ್' ಇಟ್ಟು, ಶವಸಂಸ್ಕಾರ ಮಾಡಿರುವ ಅಸ್ಥಿಪಂಜರ ದೊರೆತ ಮೇಲೆಯೇ, ಮನಗೊಂಡನಹಳ್ಳಿಯ ಈ ಅವಶೇಷವನ್ನು 'ಹೆಡ್‌ರೆಸ್ಟ್' ಎಂದು ಗುರುತಿಸಲಾಯಿತು. ಅಲ್ಲಿಯವರೆಗೂ ಅದು ಒಂದು ಪ್ರಮುಖವಾದ ಅವಶೇಷವೆಂದು ತಿಳಿದಿರಲಿಲ್ಲ, ಬಹುಶಃ ದೇವನಹಳ್ಳಿ ತಾಲೂಕಿನಲ್ಲಿ ಬೃಹತ್‌ಶಿಲಾಯುಗದ ಸಮಾಧಿಗಳ ಉತ್ಖನನ ನೆಡೆದಿರುವುದು ಇದು ಒಂದೇ ಇರಬಹುದು.ಆದರೂ, ಇಲ್ಲಿ ಮೆರಗು ಕೊಟ್ಟಿರುವ ಮಡಿಕೆಗಳು ಮತ್ತು ಮತ್ತು ಅನೇಕ ಅಳತೆಯ ಮಣ್ಪಾತ್ರೆಗಳು ದೊರಕಿವೆ.

ಕೋಲಾರ ಮತ್ತು ಚಿಕ್ಕಬಳ್ಳಾಪುರ ರಸ್ತೆಯ ಪ್ರದೇಶಗಳಲ್ಲಿ 1961ರಲ್ಲಿ ನಡೆದಿರುವ ಉತ್ಖನನ ವರದಿಯು Indian Archaeological Reportsನಲ್ಲಿ ಪ್ರಕಟಗೊಂಡಿದ್ದು ಅನಂತರ ಜಡಿಗೇನಹಳ್ಳಿಯಲ್ಲಿ ನಡೆದ ಉತ್ಖನನಗಳು ಬೃಹತ್‌ಶಿಲಾಯುಗ ಸಂಸ್ಕೃತಿಯ ದೊಡ್ಡಮಟ್ಟದ ಉತ್ಖನನಗಳಾಗಿವೆ. ಈ ವರದಿಗಳನ್ನು ಅಧ್ಯಯನ ಮಾಡಿ, ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ, ಸ್ಥಳೀಯರ ಸಹಾಯದಿಂದ ಮತ್ತು ಮಾರ್ಗದರ್ಶಕರ ಜೊತೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಹೆಚ್ಚಿನ ಪ್ರಮಾಣದಲ್ಲಿ ಬೃಹತ್‌ಶಿಲಾಯುಗದ ನೆಲಕೋಣೆ ಸಮಾಧಿಗಳು ಮತ್ತು ನಿಲುಸುಗಲ್ಲು ಸಮಾಧಿಗಳು ಕಂಡುಬಂದಿವೆ. ದುರಾದೃಷ್ಟವಶಾತ್ ಎಲ್ಲಾ ನೆಲಕೋಣೆ

ಸಮಾಧಿಗಳು ಸಂಪೂರ್ಣವಾಗಿ ಹಾನಿಗೊಳಗಾಗಿವೆ, ಪ್ರತಿಯೊಂದು ಸಮಾಧಿಯನ್ನು ನಿಧಿಶೋಧಕರು ನಿಧಿ ಆಸೆಗೋಸ್ಕರ ಮತ್ತು ಚಪ್ಪಡಿ ಕಲ್ಲುಗಳಾಗಿ ದೊಡ್ಡ ಪ್ರಮಾಣದಲ್ಲಿ ನಾಶಪಡಿಸಿರುವುದು ಕಂಡುಬರುತ್ತದೆ.

ಕೆಲವು ನಿಲುಸುಗಲ್ಲುಗಳು ಈಗಿನ ಕೃಷಿಭೂಮಿಯಲ್ಲಿ ಅಂದರೆ ಹೊಲಗದ್ದೆಗಳಲ್ಲಿ ಕಂಡುಬಂದರೂ, ಅವುಗಳನ್ನು ಸಹ ತೆಗೆದು ತಮ್ಮ ಹೊಲ ಗದ್ದೆಗಳಿಗೆ ಬೇಲಿಗಳಾಗಿ ಹಾಕಿಕೊಂಡಿರುವುದು ಶೋಚನೀಯ ಸಂಗತಿಯಾಗಿದೆ.ಆದರೂ ನಮ್ಮ ಕ್ಷೇತ್ರಕಾರ್ಯದ ಸೂಕ್ಷ್ಮ ಸಂಶೋಧನೆಯಿಂದ ಕಲ್ಲು ಗಣಿಗಾರಿಕೆ ನಡೆಯುತ್ತಿರುವ ಪ್ರದೇಶಗಳ ಆಸುಪಾಸಿನಲ್ಲಿ ಈ ಸಮಾಧಿಗಳು ಕಂಡುಬಂದಿವೆ, ಅವುಗಳಲ್ಲಿ ಕೆಲವು ನೆಲಕೋಣೆ ಸಮಾಧಿ ಮತ್ತು ನಿಲುಸುಗಲ್ಲುಗಳನ್ನು ಅಧ್ಯಯನ ಮಾಡಿ ನನ್ನ ಸಂಶೋಧನೆಯಲ್ಲಿ ಸೇರಿಸಲಾಗಿದೆ.

ಈ ನಿಟ್ಟಿನಲ್ಲಿ ಹೇಳುವುದಾದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆದೇವನಹಳ್ಳಿ ತಾಲೂಕಿನಲ್ಲಿ ಬೃಹತ್‌ಶಿಲಾಯಗಕ್ಕೆ ಸೇರಿದ ವಿಭಿನ್ನ ಮಾದರಿಯ ಸಮಾಧಿಗಳ ಜೊತೆಗೆ ನಿಲುಸುಗಲ್ಲುಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿದ್ದು ದೇವನಹಳ್ಳಿ ತಾಲೂಕು ಕುಂದಾಣ ಹೋಬಳಿಗೆ ಸೇರಿದ ಮನಗೊಂಡನಹಳ್ಳಿ, ಅರುವನಹಳ್ಳಿ, ಕೊಯಿರಾ, ಹೊಸೂರು ಮುಂತಾದ ಕಡೆಗಳಲ್ಲಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಬೃಹತ್‌ಶಿಲಾಯುಗಕ್ಕೆ ಸೇರಿದ ಕಲ್ಗೋರಿಗಳು ಮತ್ತು ನಿಲುಸುಗಲ್ಲುಗಳು ಕಂಡುಬಂದಿವೆ. ಮನಗೊಂಡನಹಳ್ಳಿಯಲ್ಲಿ ಸುಮಾರು 50ಕ್ಕಿಂತ ಹೆಚ್ಚು ಬೃಹತ್‌ಶಿಲಾಯುಗದ ಗೋರಿಗಳು(ಚಿ.ಸಂ.1)ಮತ್ತು ೨ ನಿಲುಸುಗಲ್ಲುಗಳು ಕಂಡುಬಂದಿವೆ.ಅರುವನಹಳ್ಳಿಯಲ್ಲಿ ಸುಸ್ಥಿತಿಯಲ್ಲಿರುವ ಒಂದು ನಿಲುಸುಗಲ್ಲು ಕಂಡುಬಂದಿದೆ. ಕೊಯಿರಾ ಗ್ರಾಮದ ವ್ಯಾಪ್ತಿಯಲ್ಲಿ ಸುಮಾರು 150ಕ್ಕಿಂತ ಹೆಚ್ಚು ಸಮಾಧಿಗಳು ಮತ್ತು 20ಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ನಿಲುಸುಗಲ್ಲುಗಳು ಹಾಗೂಹೊಸೂರು ಗ್ರಾಮದಲ್ಲಿ ಸುಮಾರು 50ಕ್ಕಿಂತ ಹೆಚ್ಚು ಕಲ್ಗೋರಿಗಳು ಸುಮಾರು 20ಕ್ಕಿಂತ ಹೆಚ್ಚು ನಿಲುಸುಗಲ್ಲುಗಳು ಕಂಡುಬಂದಿವೆ. ಈ ಕಲ್ಗೋರಿಗಳು ಮತ್ತು ನಿಲುಸುಗಲ್ಲುಗಳಲ್ಲಿ ಕೆಲವು ಉತ್ತಮ ಸ್ಥಿತಿಯಲ್ಲಿದ್ದರೆ ಹೆಚ್ಚಿನವು ನಾಶಸ್ಥಿತಿಯಲ್ಲಿವೆ.

ಈ ಗ್ರಾಮಗಳಲ್ಲಿ ಇರುವ ಕಲ್ಗೋರಿಗಳನ್ನು ಪಾಂಡವರ ಗೋರಿಗಳೆಂದು ಮತ್ತು ನಿಲುಸುಗಲ್ಲುಗಳನ್ನು ಆನೆ ಕಟ್ಟುವ ಕಲ್ಲು ಎಂದು ಸ್ಥಳೀಯ ಜನರು ಕರೆಯುತ್ತಾರೆ. ಈ ಭಾಗಗಳಲ್ಲಿ ಬೃಹತ್‌ಶಿಲಾಯುಗ ಕಾಲದ ಗೋರಿಗಳು ಮತ್ತು ನಿಲುಸುಗಲ್ಲುಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರಲು ಕಾರಣವಾದ ಅಂಶಗಳೆಂದರೆ ಈ ಗ್ರಾಮಗಳಲ್ಲಿ ಪ್ರಾಕೃತಿಕವಾಗಿ ಕಲ್ಲುಬಂಡೆಗಳಲ್ಲಿ ಸಿಗುವ ಗ್ರಾನೈಟ್‌ಕಲ್ಲು ಮತ್ತು ಅವುಗಳ ಬಳಕೆಹಾಗೂ ಮಳೆನೀರಿನ

ಲಭ್ಯತೆಯಿಂದಾಗಿ ಸಣ್ಣ ಸಣ್ಣ ಹೊಂಡಗಳನ್ನು ನಿರ್ಮಾಣ ಮಾಡಿಕೊಂಡು ವ್ಯವಸಾಯ ಚಟುವಟಿಕೆಗಳಿಗೆ ಅನುಕೂಲತೆಯನ್ನು ಮಾಡಿಕೊಂಡಿರುವುದು. ಕಲ್ಗೋರಿಗಳುಇರುವ ಪ್ರದೇಶವು ದಿನ್ನೆ ಮತ್ತು ಸುರಕ್ಷಿತ ಪ್ರದೇಶಗಳಾಗಿರುವುದು.ಈ ಗ್ರಾಮಗಳ ಒಟ್ಟು ಪ್ರದೇಶವು ಬೃಹತ್‌ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದಂತೆ ಹೆಚ್ಚು ವಿಸ್ತಾರವಾದ ಪ್ರದೇಶವಾಗಿದೆ.ಕೆಲವು ಕೃತಿಗಳಲ್ಲಿ ಕೆಲವು ಗ್ರಾಮಗಳ ಬೃಹತ್‌ಶಿಲಾಯುಗದ ಗೋರಿಗಳು ಮತ್ತು ನಿಲುಸುಗಲ್ಲುಗಳ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿ ನೀಡಲಾಗಿದೆ.ಆದರೆ ಈ ಕೆಳಕಂಡ ಗ್ರಾಮಗಳ ಬೃಹತ್‌ಶಿಲಾಯುಗದ ಕಲ್ಗೋರಿಗಳು ಮತ್ತು ನಿಲುಸುಗಲ್ಲುಗಳ ಬಗ್ಗೆ ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ವಿಸ್ತೃತವಾಗಿ ಮಾಹಿತಿ ನೀಡಲಾಗಿದೆ.ಹಿಂದೆ ನಡೆದಿರುವ ಭೂ ಸಂಶೋಧನೆಗಳು ಮತ್ತು ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿಯನ್ನು ಕ್ರೋಢಿಕರಿಸಿ ಒಟ್ಟಾರೆಯಾಗಿ ಮಾಹಿತಿಯನ್ನು ನೀಡಲಾಗಿದೆ.ದೇವನಹಳ್ಳಿ ತಾಲೂಕಿನ ವ್ಯಾಪ್ತಿಯ ಈ ಕೆಳಕಂಡ ಗ್ರಾಮ ಪ್ರದೇಶಗಳಲ್ಲಿ ಕಂಡುಬಂದಿರುವ ಸೂಕ್ಷ್ಮಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳ ಬಗ್ಗೆ ಈ ಮುಂದಿನಂತೆ ವಿವರಿಸಲಾಗಿದೆ.

**ದೇವನಹಳ್ಳಿ**:-ಇಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಉಪಕರಣಗಳು ದೊರೆತಿದ್ದು ಅರ್ಧಚಂದ್ರಾಕೃತಿ, ಮೊನೆ ಹಾಗೂ ಚೆಕ್ಕೆಗಳು ದೊರೆತಿದ್ದು ಕ್ವಾರ್ಟ್ಸ್‌ಶಿಲೆ ಹಾಗೂ ಚಾಲ್ಸಡೋನಿ ಶಿಲೆಯಲ್ಲಿವೆ. ಅದೇ ರೀತಿ ದೇವನಹಳ್ಳಿಯು ಬೃಹತ್‌ಶಿಲಾಯುಗ ಸಂಸ್ಕೃತಿ ಗೋರಿಗಳ ನೆಲೆ ಇಲ್ಲಿ ಶವಕುಣಿಗಳು ಹಾಗೂ ಶಿಲಾವೃತ್ತಗಳು ದೊರೆತಿವೆ. [20]

**ಮನಗೊಂಡನಹಳ್ಳಿ ಭೂ ಉತ್ಖನನ:**

ಈ ಗ್ರಾಮವು ದೇವನಹಳ್ಳಿಯಿಂದ ಸುಮಾರು 8 ಮೈಲಿ ದೂರದಲ್ಲಿದ್ದು 1916-17ನೇ ಸಾಲಿನಲ್ಲಿ ಮೈಸೂರು ಪುರಾತತ್ವ ಇಲಾಖೆಯು ಇಲ್ಲಿ ಭೂ ಉತ್ಖನನ ಕೈಗೊಂಡಿತ್ತು.ಅದರ ವರದಿಯಲ್ಲಿ ಕಂಡುಬಂದಿರುವ ಅಂಶಗಳೆಂದರೆ, ಇಲ್ಲಿ ಒರಟು ಚಪ್ಪಡಿಗಳಂದ ಕೂಡಿದ ಬೃಹತ್‌ಶಿಲಾಗೋರಿಗಳು ಕಂಡುಬಂದಿದ್ದು, ಇವುಗಳಲ್ಲಿ ಎರಡನ್ನು ತೆರೆಯಲಾಯಿತು. ಅದರಲ್ಲಿ ಒಂದು ದೊಡ್ಡ ಗೋರಿಯು ವೃತ್ತವನ್ನೊಳಗೊಂಡಂತೆ 35 ಅಡಿಗಳ ವ್ಯಾಸವನ್ನು ಹೊಂದಿದ್ದು ಅನಿಕೆಯಾಗಿರುವ ಚಪ್ಪಡಿಗಳನ್ನು ಹೊಂದಿರುವುದಿಲ್ಲ. ಮತ್ತೊಂದು ಸಣ್ಣ ಗೋರಿಯು ವೃತ್ತಗಳನ್ನೊಳಗೊಂಡಂತೆ 18.5 ಅಡಿ ವ್ಯಾಸವನ್ನು ಹೊಂದಿದ್ದು ಇದು ಸಹ ಅನಿಕೆಯಾಗಿರುವ ಚಪ್ಪಡಿಗಳನ್ನು ಹೊಂದಿರುವುದಿಲ್ಲ. ಈ ಸಮಾಧಿಯಲ್ಲಿ 3.6 ಅಡಿ ತನಕ ಅಗೆದಾಗ ವಿವಿಧ ಗಾತ್ರಗಳ ಮತ್ತು ನಮೂನೆಗಳ ಜಾಡಿಗಳು, ಮಡಿಕೆಗಳು, ದುಂಡಗಿನ ಪಾತ್ರೆಗಳು ಕಂಡುಬಂದಿರುತ್ತವೆ. ಇವುಗಳ ಸಂಖ್ಯೆ 9 ಆಗಿದ್ದು ಇವುಗಳು ಮಣ್ಣಿನಿಂದ ಮುಚ್ಚಲ್ಪಟ್ಟಿದ್ದು ಒಡೆದು ಹೋಗಿರುತ್ತವೆ. ಮಡಿಕೆಗಳು ಕೆಂಪು ಮತ್ತು ಕಪ್ಪು ಬಣ್ಣ ಹೊಂದಿದ್ದು ಹೊಳಪನ್ನು ಹೊಂದಿರುತ್ತವೆ.ಇವುಗಳ ವಿವರ ಈ ಕೆಳಕಂಡಂತಿದೆ.

1. ಒಂದು ಜಾಡಿ 3 ಹೊಂದಿದ್ದು ಒಂದು ಅಪರೂಪದ ಮಡಿಕೆಯಾಗಿದೆ, ಏಕೆಂದರೆ ಅಡಿ ಉದ್ದ, 1 ಅಡಿ 8 ಇಂಚು ಸುತ್ತಳತೆಯನ್ನು ಹೊಂದಿದ್ದು ಒಂದು ಅಪರೂಪದ ಮಡಿಕೆಯಾಗಿದೆ. ಒಂದು ಅಂಗುಲ ಬಾಯಿ ಹೊಂದಿರುವ ಇಂತಹ ಮಡಿಕೆಗಳನ್ನು ಸಾಮಾನ್ಯವಾಗಿ ಔಷಧಿಗಳನ್ನು ಅಥವಾ ಶ್ರೇಷ್ಠ ಪಾನೀಯಗಳನ್ನು ಸಂಗ್ರಹಿಸಿಡಲು ಬಳಸಿರಬಹುದು.
2. 3 ಕಾಲುಗಳುಳ್ಳ ಜಾಡಿ ಮಧ್ಯಭಾಗದಲ್ಲಿ ಬಿರುಕು ಬಿಟ್ಟಿದ್ದು ಅದರ ಬಾಯಿ 1.4 ಅಡಿ ಎತ್ತರ 10 ಇಂಚು ಸುತ್ತಳತೆ ಹೊಂದಿದೆ.
3. ಒಂದು ಜಾಡಿ, ಬಿರುಕು ಬಿಟ್ಟಿದ್ದು ಒಂದು ಕಾಲನ್ನು ಹೊಂದಿದ್ದು, 1 ಅಡಿ 8 ಇಂಚು ಎತ್ತರ, 1 ಅಡಿ ಸುತ್ತಳತೆ ಬಾಯಿ 6 ಇಂಚು ಸುತ್ತಳತೆಯನ್ನು ಹೊಂದಿರುತ್ತದೆ.
4. ಒಂದು ಜಾಡಿ 1 ಅಡಿ 6 ಇಂಚು ಎತ್ತರ 11 ಇಂಚು ಸುತ್ತಳತೆ ಬಾಯಿ 4.5 ಇಂಚು ಸುತ್ತಳತೆಯನ್ನು ಹೊಂದಿದೆ.
5. ಒಂದು ಮಡಿಕೆ 9 ಇಂಚು ಎತ್ತರ 11 ಇಂಚು ಸುತ್ತಳತೆ ಬಾಯಿ 6 ಇಂಚು ಸುತ್ತಳತೆ.
6. ಒಂದು ಮಡಿಕೆ 6.5 ಇಂಚು ಎತ್ತರ 8.5 ಇಂಚು ಸುತ್ತಳತೆ ಬಾಯಿ 7 ಇಂಚು ಸುತ್ತಳತೆ.
7. ಒಂದು ಮಡಿಕೆ 5 ಇಂಚು ಎತ್ತರ 7.5 ಇಂಚು ಸುತ್ತಳತೆ ಬಾಯಿ 7.5 ಇಂಚು ಸುತ್ತಳತೆ.
8. ಒಂದು ಮಡಿಕೆ 4 ಇಂಚು ಎತ್ತರ 5.5 ಇಂಚು ಸುತ್ತಳತೆ ಬಾಯಿ 4.5 ಇಂಚು ಸುತ್ತಳತೆ.
9. ಒಂದು ಮಡಿಕೆ 8 ಇಂಚು ಎತ್ತರ 6 ಇಂಚು ಸುತ್ತಳತೆ ಬಾಯಿ 4 ಇಂಚು ಸುತ್ತಳತೆ.

10. ಒಂದು ಡಮರುಕದ ಮೇಲ್ಭಾಗ ಭಾಗಶಃ ಮುರಿದಿದ್ದು 3 ಇಂಚು ಎತ್ತರವನ್ನು ಹೊಂದಿದೆ. [21](ಚಿ.ಸಂ.2)

ಮನಗೊಂಡನಹಳ್ಳಿ ಗ್ರಾಮವು ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ನೆಲೆ. ಇಲ್ಲಿ ಹರೆಚೆಕ್ಕೆ, ನೀಳಚೆಕ್ಕೆಗಳು ಕಂಡುಬಂದಿದ್ದು ಚೆಕ್ಕೆಗಳನ್ನು ಕ್ವಾರ್ಟ್ಸ್ ಮತ್ತು ಹರಳುಗಲ್ಲಿನಲ್ಲಿ ರೂಪಿಸಲಾಗಿದೆ.ಮನಗೊಂಡನಹಳ್ಳಿಯು ಬೃಹತ್‌ಶಿಲಾಯುಗ ಸಂಸ್ಕೃತಿಯ ಗೋರಿಗಳ ನೆಲೆ. ಇಲ್ಲಿ ಶವಕುಣಿ ಮತ್ತು ನಿಲುಸುಗಲ್ಲುಗಳು ದೊರೆತಿವೆ[22] ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸ್ಥಳೀಯರ ಜನರ ಸಹಕಾರ ಮತ್ತು ಮಾರ್ಗದಶಕರೊಂದಿಗೆ ಪರಿಶೀಲಿಸಲಾಗಿ ದೇವನಹಳ್ಳಿ ತಾಲೂಕು ಕುಂದಾಣ ಹೋಬಳಿ ಮನಗೊಂಡನಹಳ್ಳಿ ಸರ್ವೆನಂಬರ್ 36ರಲ್ಲಿ ನೀಲಗಿರಿ ತೋಪು ಮತ್ತು ಇತರೆ ಜಾಗಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕಲ್ಗೋರಿಗಳು ಮತ್ತು ನಿಲುಸುಗಲ್ಲುಗಳು ಕಂಡುಬಂದವು.ಈ ಪ್ರದೇಶದಲ್ಲಿ ಸುಮಾರು 50ಕ್ಕೂ ಹೆಚ್ಚು ಗೋರಿಗಳು ಕಂಡುಬಂದಿದ್ದು ಇವುಗಳಲ್ಲಿ ಕೆಲವು ಭೂಮಿಯಲ್ಲಿ ಹೂತು ಹೋಗಿದ್ದರೆ ಮತ್ತೆ ಕೆಲವು ತೆರೆದುಕೊಂಡಿದ್ದು ಭಗ್ನಗೊಂಡಿವೆ. ಹೆಚ್ಚಿನ ಗೋರಿಗಳು ನಾಶವಾಗಿವೆ. ಚಪ್ಪಡಿ ಕಲ್ಲುಗಳು ಮತ್ತು ಕಿಂಡಿಕೋಣೆಗಳು ಕಣ್ಮರೆಯಾಗಿವೆ. ಅತ್ಯಂತ ಪ್ರಮುಖ ವಿಚಾರವೆಂದರೆ ದಿನ್ನೆಯ ಜಾಗದಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಹರಚೆಕ್ಕೆ, ನೀಳಚೆಕ್ಕೆಗಳು ಕಂಡುಬಂದಿದ್ದು ಇವು ಈ ಪ್ರದೇಶದಲ್ಲಿ ಎಲ್ಲಾ ಕಡೆ ಹರಡಿಕೊಂಡಿವೆ.ನೀಲಗಿರಿ ತೋಪುಗಳ ಜಾಗದಲ್ಲಿ ಅಲ್ಲಲ್ಲಿ ಕಿಂಡಿಕೋಣೆ ಗೋರಿಗಳು ಮತ್ತು ನಿಲುಸುಗಲ್ಲುಗಳು ಕಂಡುಬಂದಿದ್ದು ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ನೆಲ ಕಿಂಡಿಕೋಣೆ ಗೋರಿಸಂಖ್ಯೆ–1 (Cist Burial Site No.1):**

ಇದೊಂದು ಬೃಹದಾಕಾರದ ನೆಲೆಕಿಂಡಿಕೋಣೆ ಗೋರಿಯಾಗಿದ್ದು ನೆಲದಡಿಯಲ್ಲಿ ಪೂರ್ವ–ಪಶ್ಚಿಮವಾಗಿ ಆಯತಾಕಾರದಲ್ಲಿ ನಾಲ್ಕು ಚಪ್ಪಡಿಗಳನ್ನು ಒಂದಕ್ಕೊಂದು ಅನಿಕೆಯಾಗಿರುವಂತೆ ನಿಲ್ಲಿಸಲಾಗಿದೆ.ಪೂರ್ವಭಾಗದ ಚಪ್ಪಡಿಕಲ್ಲಿನಮಧ್ಯಭಾಗದಲ್ಲಿ ವೃತ್ತಾಕಾರದ ರಂಧ್ರವಿದೆ.(ಚಿ.ಸಂ.3)ಈ ಚಪ್ಪಡಿ ಕಲ್ಲುಗಳ ಗಾತ್ರವು ಮೈಸೂರು, ಮಂಡ್ಯ ಜಿಲ್ಲೆಗಳ ಸಮಾಧಿಗಳ ಚಪ್ಪಡಿ ಕಲ್ಲುಗಳಿಗಿಂತ ದೊಡ್ಡದಾಗಿದ್ದು ಕೋಲಾರ ಜಿಲ್ಲೆಯ ಬೃಹತ್‌ಶಿಲಾಯುಗದ ಕಲ್ಗೋರಿಗಳನ್ನು ಹೋಲುತ್ತವೆ. ಈ ರೀತಿಯ ನೆಲೆಕೋಣೆ ಸಮಾಧಿಗಳನ್ನು ಪಿರಿಯಾಪಟ್ಟಣ, ಕೊಪ್ಪ ಮುಂತಾದ ಪ್ರದೇಶಗಳಲ್ಲಿ ಕಾಣಬಹುದಾಗಿದೆ.ಚಪ್ಪಡಿ ಕಲ್ಲುಗಳ ವಿಸ್ತೀರ್ಣವು ಪೂರ್ವ ಪಶ್ಚಿಮ 8.6 ಅಡಿಗಳು ಮತ್ತು ಉತ್ತರ ದಕ್ಷಿಣ 5 ಅಡಿಗಳಾಗಿದ್ದು ಸಮಾಧಿಯ ಆಳವು 5 ಅಡಿಗಳಾಗಿರುತ್ತದೆ.ಚಪ್ಪಡಿಯಲ್ಲಿನ ವೃತ್ತಕಾರದ ರಂಧ್ರವು ದೊಡ್ಡದಾಗಿದ್ದು ಸುಮಾರು 2 ಅಡಿ

ಸುತ್ತಳತೆಯನ್ನು ಹೊಂದಿದ್ದುನೆಲಹಾಸುಗಲ್ಲು ಮುರಿದಿದೆ, ಮೇಲ್ಭಾಗದ ಮೇಲ್ ಹಾಸುಗಲ್ಲು ಕಂಡುಬಂದಿರುವುದಿಲ್ಲ. ಈ ನೆಲಕೋಣೆ ಸಮಾಧಿಯಲ್ಲಿ ಯಾವುದೇ ಅವಶೇಷಗಳು ಕಂಡುಬಂದಿರುವುದಿಲ್ಲ. ನಿಧಿ ಆಸೆಗೋಸ್ಕರ ಈ ಸಮಾಧಿಯನ್ನು ಅಗೆಯಲಾಗಿದೆ ಎಂದು ಸ್ಥಳೀಯರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿಸಿರುತ್ತಾರೆ. ಸ್ಥಳೀಯರು ನೀಡಿದ ಮಾಹಿತಿಯಂತೆ ಸುಮಾರು 20 ವರ್ಷಗಳ ಹಿಂದೆ ಈ ಭಾಗದಲ್ಲಿ ಹಲವಾರು ಉತ್ತಮ ಸ್ಥಿತಿಯ ಗೋರಿಗಳಿದ್ದವು, ಆದರೆ ಈಗ ಕೆಲವು ಮಾತ್ರ ಗೋಚರಿಸುತ್ತವೆ. ಬಹುಶಃ ಈ ಭಾಗದಲ್ಲಿ ದೊರೆಯುವ ಗ್ರಾನೈಟ್ ಕಲ್ಲುಗಳಿಂದಾಗಿ ದೊಡ್ಡ ಗಾತ್ರದ ಚಪ್ಪಡಿ ಕಲ್ಲುಗಳನ್ನು ಬಳಸುವ ಮೂಲಕ ಗೋರಿಗಳನ್ನು ನಿರ್ಮಿಸಲಾಗಿದೆ ಎಂಬ ಅಂಶವು ತಿಳಿದುಬರುತ್ತದೆ. [23]

**ನೆಲಕಿಂಡಿ ಕೋಣೆ ಗೋರಿ ಸಂಖ್ಯೆ-2 (Cist Burial Site No-2)**

ಇದು ತೆರೆದ ಕಲ್ಗೋರಿಯಾಗಿದ್ದುಆಯತಾಕಾರದಲ್ಲಿದ್ದು 4 ಚಪ್ಪಡಿಗಳನ್ನು ಅನಿಕೆಯಾಗಿರುವಂತೆ ಜೋಡಿಸಲಾಗಿದೆ. ಇದರ ವಿಸ್ತೀರ್ಣವು ಉತ್ತರ-ದಕ್ಷಿಣ 4 ಅಡಿಗಳು ಮತ್ತು ಪೂರ್ವ-ಪಶ್ಚಿಮ 7 ಅಡಿಗಳಾಗಿದ್ದು ಆಳ ಸುಮಾರು 5 ಅಡಿಗಳಾಗಿರುತ್ತವೆ.(ಚಿ.ಸಂ.4)ನೆಲಹಾಸುಗಲ್ಲು ಕಣ್ಮರೆಯಾಗಿವೆ, ಪೂರ್ವಭಾಗದ ಚಪ್ಪಡಿ ಕಲ್ಲಿನಲ್ಲಿ ವೃತ್ತಕಾರದ ರಂಧ್ರವು ಮಧ್ಯಭಾಗದಲ್ಲಿ ಕಂಡುಬಂದಿದ್ದು ಸುಮಾರು 2 ಅಡಿ ಸುತ್ತಳತೆ ಹೊಂದಿದೆ ನೆಲಹಾಸುಗಲ್ಲು ಮತ್ತು ಮೇಲು ಹಾಸುಗಲ್ಲುಗಳು ಕಣ್ಮರೆಯಾಗಿವೆ. ಬೃಹತ್ ಶಿಲಾಯುಗದ ಸಂಸ್ಕೃತಿಯ ಮಹತ್ವವನ್ನು ತಿಳಿಯದೆ ನೀಲಗಿರಿ ತೋಪುಗಳನ್ನು ಬೆಳೆಸಲಾಗಿದೆ.[24]

**ನೆಲಕಿಂಡಿಕೋಣೆ ಗೋರಿ ಸಂಖ್ಯೆ-3 (Cist burial Site No-3):**

ಇದು ಆಯತಾಕಾರದಲ್ಲಿದ್ದು ಹಾನಿಗೊಳಗಾಗಿದೆ, ಈ ಗೋರಿಯು 4 ಚಪ್ಪಡಿಗಳನ್ನು ಹೊಂದಿದ್ದು ಗೋರಿಯ ವಿಸ್ತೀರ್ಣವು ಪೂರ್ವ-ಪಶ್ಚಿಮ 7 ಅಡಿಗಳು ಮತ್ತು ಉತ್ತರ-ದಕ್ಷಿಣ 4 ಅಡಿಗಳಾಗಿದ್ದು ಆಳ ಸುಮಾರು 5 ಅಡಿಗಳಾಗಿರುತ್ತದೆ.(ಚಿ.ಸಂ.5)ನೆಲಹಾಸುಗಲ್ಲು ಮತ್ತುಪೂರ್ವ ಹಾಗೂ ಪಶ್ಚಿಮಭಾಗದ ಚಪ್ಪಡಿ ಕಲ್ಲುಗಳು ಕಣ್ಮರೆಯಾಗಿದ್ದು ಕೇವಲ ಉತ್ತರ ಮತ್ತು ದಕ್ಷಿಣಭಾಗದ ಕೋಣೆ ಕಲ್ಲುಗಳು ಮಾತ್ರ ಕಂಡುಬರುತ್ತವೆ.[25]

**ನೆಲಕಿಂಡಿಕೋಣೆ ಗೋರಿ ಸಂಖ್ಯೆ-4 (Cist Burial Site No-4):**

ಇದು ಆಯತಾಕಾರದಲ್ಲಿದ್ದು ಹಾನಿಗೊಳಗಾಗಿದೆ 4 ಚಪ್ಪಡಿಗಳು ಕಂಡುಬಂದಿದ್ದು ಈ ಗೋರಿಯ ವಿಸ್ತೀರ್ಣವು ಪೂರ್ವ-ಪಶ್ಚಿಮ 7 ಅಡಿಗಳು ಮತ್ತು ಉತ್ತರ-ದಕ್ಷಿಣ 4 ಅಡಿಗಳಾಗಿದ್ದು ಆಳ ಸುಮಾರು 5 ಅಡಿಗಳಾಗಿರುತ್ತದೆ.(ಚಿ.ಸಂ.6)ಪೂರ್ವಭಾಗದ ಚಪ್ಪಡಿ ಕಲ್ಲು ಮುರಿದಿದ್ದು ಪೂರ್ವಭಾಗದ ಚಪ್ಪಡಿ ಕಲ್ಲಿನಲ್ಲಿ ವೃತ್ತಕಾರದ ರಂಧ್ರವು ಕಂಡುಬಂದಿದ್ದು, ಅದು ಸುಮಾರು 1.6 ಅಡಿ ಸುತ್ತಳತೆ ಹೊಂದಿದೆ.[26]

ಈ ಮೇಲ್ಕಂಡ 4 ನೆಲಕಿಂಡಿಕೋಣೆ ಗೋರಿಗಳು ಮೂಲ ಗೋರಿಗಳಾಗಿವೆ. ಇವು ಉತ್ತರ-ದಕ್ಷಿಣವಾಗಿ ರಚನೆಯಾಗಿದ್ದು ಈ ಗೋರಿಗಳಲ್ಲಿ ಯಾವುದೇ ರೀತಿಯ ಮೂಳೆಗಳು, ಆಭರಣಗಳು, ಅವಶೇಷಗಳು ಕಂಡುಬಂದಿರುವುದಿಲ್ಲ.ಕೆಂಪು ಮತ್ತು ಕಪ್ಪುಬಣ್ಣದ ಮಡಿಕೆ ಚೂರುಗಳು ಕಂಡುಬಂದಿವೆ, ಈ ಗೋರಿಗಳ ಮಹತ್ವವನ್ನು ತಿಳಿಯದ ಜನರು ನಿಧಿ ಆಸೆಗೋಸ್ಕರ ಮತ್ತು ಚಪ್ಪಡಿ ಕಲ್ಲುಗಳಗೋಸ್ಕರ ಗೋರಿಗಳನ್ನು ನಾಶಪಡಿಸಿದ್ದಾರೆ.

**ನೆಲಕಿಂಡಿ ಕೋಣೆ ಗೋರಿ ಸಂಖ್ಯೆ-೫ (Cist Burial Site No-5):**

ಇದು ಆಯತಾಕಾರದಲ್ಲಿದ್ದು ಸಮಾಧಿಯ 4 ಚಪ್ಪಡಿಗಳು ನಾಶವಾಗಿದ್ದು ಮೇಲ್ ಹಾಸುಗಲ್ಲು ಕಂಡುಬರುವುದಿಲ್ಲ, (ಚಿ.ಸಂ.7)ನೆಲಹಾಸುಗಲ್ಲು ಸಹ ನಾಶವಾಗಿದೆ ಈ ಸಮಾಧಿಯನ್ನು ಅಗೆದೆ ಹಾಳಮಾಡಲಾಗಿದೆ.[27]

**ನೆಲಕಿಂಡಿಕೋಣೆ ಗೋರಿ ಸಂಖ್ಯೆ-೬ (Cist Burial Site No-6):**

ಇದು ಆಯತಾಕಾರದಲ್ಲಿದ್ದು ನಾಶವಾಗಿದ್ದುಈಶಾನ್ಯ ಮೂಲೆಯಲ್ಲಿ ಕಂಡುಬರುತ್ತದೆ.ಈ ಗೋರಿಯ ನಾಲ್ಕುಅನಿಕೆಯಾಗಿರುವ ಚಪ್ಪಡಿಗಳು ಕಣ್ಮರೆಯಾಗಿದ್ದು ಮೇಲ್ ಹಾಸುಗಲ್ಲು ಮತ್ತು ಕೆಳಹಾಸುಗಲ್ಲು ಕೂಡ ಕಣ್ಮರೆಯಾಗಿವೆ.[28]

**ನೆಲಕಿಂಡಿಕೋಣೆ ಗೋರಿ ಸಂಖ್ಯೆ-7-(Cist Burial Site No-7):**

ಈ ಗೋರಿಯು ನೀಲಗಿರಿ ತೋಪುಗಳ ಜಾಗದಲ್ಲಿ ಮಣ್ಣು ರಸ್ತೆ ಪಕ್ಕದಲ್ಲಿ ಕಂಡುಬರುತ್ತದೆ. ಈ ಗೋರಿಯು ಆಯತಾಕಾರದಲ್ಲಿದ್ದು 4 ಚಪ್ಪಡಿ ಕಲ್ಲುಗಳು ನಾಶವಾಗಿದ್ದು ಮೇಲುಹಾಸುಗಲ್ಲು ಮತ್ತು ನೆಲಹಾಸುಗಲ್ಲು ಕೂಡ ಕಣ್ಮರೆಯಾಗಿವೆ.[29]

**ನೆಲಕಿಂಡಿಕೋಣೆ ಗೋರಿ ಸಂಖ್ಯೆ-೮ (Cist Burial Site No-8)**

ಈ ಗೋರಿಯು ಚೌಕಾಕಾರದಲ್ಲಿದ್ದು ಇದು ಪೂರ್ವ ಪಶ್ಚಿಮ 4 ಅಡಿಗಳುಮತ್ತು ಉತ್ತರ ದಕ್ಷಿಣ 4 ಅಡಿಗಳ ವಿಸ್ತೀರ್ಣವನ್ನು ಹೊಂದಿದೆ. ನಾಲ್ಕು ಚಪ್ಪಡಿಗಳು ಕಲ್ಲುಗಳು ಮೇಲುಹಾಸುಗಲ್ಲು ಮತ್ತು ನೆಲಹಾಸುಗಲ್ಲುಗಳುಸಹ ಕಣ್ಮರೆಯಾಗಿವೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಕೆಂಪು ಮತ್ತು ಕಪ್ಪು ಬಣ್ಣದ ಮಡಕೆ ಚೂರುಗಳು ಮತ್ತು ಒಡೆದು ಹೋಗಿರುವ ಬಟ್ಟಲುಗಳು ದೊರೆತಿವೆ. [30]

**ನಿಲುಸುಗಲ್ಲು-ಮನಗೊಂಡನಹಳ್ಳ**:ನೀಲಗಿರಿ ತೋಪಿನ ಜಾಗದಿಂದ ದೇವನಹಳ್ಳಿಕಡೆಗೆ ಬರುವ ಮಣ್ಣು ರಸ್ತೆಯಲ್ಲಿ ನೀಲಗಿರಿ ತೋಪಿನಲ್ಲಿ ನಿಲುಸುಗಲ್ಲು ಕಂಡುಬಂದಿದ್ದು ಅದು ಮುರಿದಿರುತ್ತದೆ [31] (ಚಿ.ಸಂ.8)

**ನಿಲುಸುಗಲ್ಲು-ಮನಗೊಂಡನಹಳ್ಳ**: ಈ ಗ್ರಾಮದ ಆಂಜನಪ್ಪ ಎಂಬುವರು ನೀಡಿದ ಮಾಹಿತಿಯಂತೆಮನಗೊಂಡನಹಳ್ಳಿ ಸರ್ವೆನಂಬರ್ 36ರಲ್ಲಿ ನೀಲಗಿರಿ ತೋಪುಗಳ ಜಾಗದಲ್ಲಿ ಖಾಸಗಿ ವ್ಯಕ್ತಿಯೊಬ್ಬರಿಗೆ ಸೇರಿದ ಜಮೀನಿನಲ್ಲಿ ನೀರಿನ ತೊಟ್ಟಿಯಲ್ಲಿ ನಿಂತಸ್ಥಿತಿಯಲ್ಲಿರುವ ಒಂದು ನಿಲುಸುಗಲ್ಲು ಕಂಡುಬಂದಿದ್ದು ಅದರ ಎತ್ತರ 12 ಅಡಿಗಳು ಮತ್ತು ಅಗಲ 3 ಅಡಿಗಳಾಗಿದ್ದು ತನ್ನ ಅಲೈನ್‌ಮೆಂಟ್‌ನ್ನು ಕಳೆದುಕೊಂಡಿದೆ [32]

**ಅರುವನಹಳ್ಳಿ ಗ್ರಾಮದ ನಿಲುಸುಗಲ್ಲು**:ಅರುವನಹಳ್ಳಿ ಗ್ರಾಮವು ದೇವನಹಳ್ಳಿಯಿಂದ ಸುಮಾರು 10 ಕಿ.ಮೀ ದೂರದಲ್ಲಿದ್ದುಬೃಹತ್‌ಶಿಲಾಯುಗ ಸಂಸ್ಕೃತಿಯ ನೆಲೆ ಇಲ್ಲಿ ಶಿಲಾಸಮಾದಿ ದೊರೆತಿದೆ [33] ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ಗ್ರಾಮದ ಸರ್ಕಾರಿ ಶಾಲೆಯ ಹಿಂಭಾಗದಲ್ಲಿ ಟಿ.ಆಂಜಿನಪ್ಪ ಎಂಬುವವರಿಗೆ ಸೇರಿದ ಸರ್ವೆನಂಬರ್ 9ರ ಜಮೀನಿನಲ್ಲಿ ಒಂದು ನಿಲುಸುಗಲ್ಲು ಕಂಡುಬಂದಿದ್ದು ಇದು ಪಕ್ಕಕ್ಕೆ ವಾಲಿದೆ.ಇದರ ಎತ್ತರಸುಮಾರು 12 ಅಡಿಗಳು ಸುತ್ತಳತೆ 9 ಅಡಿಗಳು ಮತ್ತು ಅಗಲ 4 ಅಡಿಗಳು ಆಗಿದ್ದು ಅಲೈನ್‌ಮೆಂಟ್‌ನ್ನು ಕಳೆದುಕೊಂಡಿದೆ.[34] (ಚಿ.ಸಂ.9)

**ಕೊಯಿರಾ ಮತ್ತು ಹೊಸೂರು ಗ್ರಾಮಗಳ ಬೃಹತ್‌ಶಿಲಾಯುಗದ ಗೋರಿಗಳು ಮತ್ತು ನಿಲುಸುಗಲ್ಲುಗಳು**: ಕೊಯಿರಾ ಗ್ರಾಮವು ಕುಂದಾಣ ಹೋಬಳಿಗೆ ಸೇರಿದ್ದು ದೇವನಹಳ್ಳಿಯಿಂದ ಸುಮಾರು 10 ಕಿ.ಮೀ ದೂರದಲ್ಲಿದ್ದು ಈ ಗ್ರಾಮದ ವ್ಯಾಪ್ತಿಯಲ್ಲಿ ಗ್ರಾನೈಟ್ ಬಂಡೆಗಳು ಮತ್ತು ಅಲ್ಲಲ್ಲಿ ಸಣ್ಣ ಸಣ್ಣ ನೀರಿನ ಝರಿಗಳು ಕಂಡುಬರುತ್ತವೆ. ಕೊಯಿರಾ ಮತ್ತು ಹೊಸೂರು ಎಂದು ಕರೆಯಲ್ಪಡುತ್ತಿರುವ ಗ್ರಾಮದಲ್ಲಿ ಹೊಸೂರು ರಸ್ತೆ, ಕಾರಹಳ್ಳಿ ರಸ್ತೆ, ವಾಸದ ಪ್ರದೇಶಗಳು ಮುಂತಾದ ಕಡೆ ಬೃಹತ್ ಶಿಲಾಯುಗಕ್ಕೆ ಸೇರಿದಸುಮಾರು 200ಕ್ಕಿಂತ ಹೆಚ್ಚು ಗೋರಿಗಳು ಮತ್ತು ಸುಮಾರು 40ಕ್ಕಿಂತ ಹೆಚ್ಚು ನಿಲುಸುಗಲ್ಲುಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ

ಕಂಡುಬಂದಿದ್ದು ಇವುಗಳಲ್ಲಿ ಕೆಲವು ಗೋರಿಗಳು ಭೂಮಿಯಲ್ಲಿ ಹೂತು ಹೋಗಿದ್ದರೆ ಮತ್ತೆ ಕೆಲವು ಭಗ್ನಗೊಂಡಿವೆ. ಅವುಗಳ ಬಗ್ಗೆ ಈ ಮುಂದಿನಂತೆ ವಿವರಿಸಲಾಗಿದೆ.

**ಕೊಯಿರಾ ಗ್ರಾಮದ ಸರ್ಕಾರಿ ಪ್ರಾಥಮಿಕ ಪಾಠಶಾಲೆ:**ಶಾಲೆಯ ಹೊರ ಭಾಗದ ರಸ್ತೆ ಪಕ್ಕದಲ್ಲಿ ಒಂದು ನಿಲುಸುಗಲ್ಲು ಕಂಡು ಬಂದಿದ್ದುತನ್ನ ಅಲೈನ್‌ಮೆಂಟ್‌ನ್ನು ಕಳೆದುಕೊಂಡಿದೆ.ಇದರ ಎತ್ತರ 17.3 ಅಡಿ ಅಗಲ 3.8 ಅಡಿ ಮತ್ತು ಸುತ್ತಳತೆ 9 ಅಡಿಗಳಾಗಿದ್ದು ಇದನ್ನು ರಸ್ತೆಯ ಪಕ್ಕದಲ್ಲಿ ಮಲಗಿಸಲಾಗಿದೆ ಸ್ಥಳೀಯರಾದ ಕೆ.ಎಸ್.ಕೃಷ್ಣಪ್ಪ ಮತ್ತು ರಾಜಣ್ಣ ಎಂಬುವರು ನೀಡಿದ ಮಾಹಿತಿಯಂತೆ ಇದನ್ನು ಶಾಲೆಯ ಪಕ್ಕದ ಮೂಲ ಜಾಗದಿಂದ ಪ್ರಸ್ತುತ ಸ್ಥಳಕ್ಕೆ ಸ್ಥಳಾಂತರಿಸಲಾಗಿದೆ ಜೊತೆಗೆ ಈ ಜಾಗದಲ್ಲಿ ಈ ಹಿಂದೆ 6ಕ್ಕೂ ಹೆಚ್ಚು ನಿಲುಸುಗಲ್ಲುಗಳು ಇದ್ದವು ಎಂದು ತಿಳಿಸಿರುತ್ತಾರೆ. ಶಾಲೆಯ ಮುಂಭಾಗದಲ್ಲಿ ಒಂದು ಶಿಲಾಗೋರಿ ಕಂಡುಬಂದಿದ್ದು ರಸ್ತೆ ನಿರ್ಮಾಣ ಸಂದರ್ಭದಲ್ಲಿ ಇದು ಹಾಳಾಗಿದ್ದುಗೋರಿಯಮೇಲ್ ಹಾಸುಗಲ್ಲು ಕಂಡುಬಂದಿರುವುದಿಲ್ಲ. ಶಾಲೆಯ ಒಳಗಡೆ ಬಲಭಾಗದಲ್ಲಿ ಹೊಸದಾಗಿ ಕಟ್ಟಡ ನಿರ್ಮಾಣವಾಗುತ್ತಿದ್ದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಭೂಮಿಯಲ್ಲಿ ಹೂತು ಹೋಗಿರುವ ನಾಲ್ಕು ಸಮಾಧಿಗಳು ಕಂಡುಬಂದಿವೆ. ಕೋಲಾರ ಮತ್ತು ಮೈಸೂರು ಜಿಲ್ಲೆಯ ಕೊಪ್ಪಗಳಲ್ಲಿ ಕಂಡುಬಂದಿರುವಂತೆ ಇಲ್ಲಿಯೂ ಸಹ ಸಮಾಧಿಗಳು ಕಂಡುಬಂದಿವೆ. ಸ್ಥಳಿಯರಾದ ಕೆ.ಎಸ್. ಕೃಷ್ಣಪ್ಪ ಎಂಬುವರು ನೀಡಿದ ಮಾಹಿತಿ ಪ್ರಕಾರ ಈ ಶಾಲೆಯ ಆವರಣದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗೋರಿಗಳು ಮತ್ತು ನಿಲುಸುಗಲ್ಲುಗಳು ಈ ಹಿಂದೆ ಕಂಡುಬಂದಿದ್ದು ಶಾಲಾ ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಇವುಗಳು ನಾಶವಾಗಿವೆ ಎಂದು ತಿಳಿಸಿರುತ್ತಾರೆ. ಹೊಸದಾಗಿ ನಿರ್ಮಾಣವಾಗುತ್ತಿರುವ ಕಟ್ಟಡಕ್ಕೆ ಹೊಂದಿಕೊಂಡಂತೆ ನಾಲ್ಕು ಗೋರಿಗಳು ಕಂಡುಬಂದಿದ್ದು ಒಂದನೇ ಗೋರಿಯ ಉದ್ದ 9.8 ಅಡಿ, ಅಗಲ 5.10 ಅಡಿ, ಎರಡನೇಗೋರಿಯ ಉದ್ದ 6.0 ಅಡಿ ಅಗಲ, 3.9 ಅಡಿಗಳು, ಮೂರನೇಗೋರಿಯ ಉದ್ದ 6.4 ಅಡಿಗಳು ಮತ್ತು ಅಗಲ 3.5 ಅಡಿಗಳು, ನಾಲ್ಕನೇಗೋರಿಯ ಉದ್ದ 7.11 ಅಡಿಗಳು ಮತ್ತು ಅಗಲ 4.9 ಅಡಿಗಳಾಗಿರುತ್ತವೆ. ಮೇಲ್ ಹಾಸುಗಲ್ಲುಗಳು ಕಂಡುಬಂದಿರುವುದಿಲ್ಲ.ಈ ಶಾಲೆಯ ಆವರಣದಲ್ಲಿ ಸುಮಾರು 25ಕ್ಕಿಂತ ಹೆಚ್ಚು ಗೋರಿಗಳು ಈ ಹಿಂದೆ ಇದ್ದು,ಗೋರಿಗಳ ಜಾಗದಲ್ಲಿಯೇ ಶಾಲೆಗೋಸ್ಕರ ಒಂದು ವೇದಿಕೆಯನ್ನು ನಿರ್ಮಿಸಿರುವುದರಿಂದಗೋರಿಗಳು ನಾಶವಾಗಿವೆ.[35] (ಚಿ.ಸಂ.10)

**ಕೊಯಿರಾ ಗ್ರಾಮದ ಶಾಲೆ ಮುಂಭಾಗದ ಕಲ್ಲುಗಣಿ/ಕ್ವಾರಿ:** ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮಣ್ಣು ಗೋಡೆಗೆ ಹೊಂದಿಕೊಂಡಂತೆ ಎರಡು ಗೋರಿಗಳುಕಂಡುಬಂದಿದ್ದು ಒಂದನೇ ಗೋರಿಯ ಅಗಲ 4.11ಅಡಿಗಳು ಮತ್ತು ಎತ್ತರ 3.4 ಅಡಿಗಳು ಮತ್ತು ಎರಡನೇ ಗೋರಿಯ ಅಗಲ 5.7

ಅಡಿಗಳುಮತ್ತು ಎತ್ತರ 3.4 ಅಡಿಗಳು ಆಗಿರುತ್ತದೆ.ಈ ಗೋರಿಗಳ ಮೇಲ್‌ಹಾಸುಗಲ್ಲುಕಣ್ಮರೆಯಾಗಿದ್ದು ಪೋರ್ಟ್‌ಹೋಲ್/ವೃತ್ತಾಕಾರದ ರಂಧ್ರಗಳು ಕಂಡುಬಂದಿರುವುದಿಲ್ಲ. ಈ ಗೋರಿಗಳಅನಿಕೆಯಾಗಿರುವ 4 ಚಪ್ಪಡಿಕಲ್ಲುಗಳು ಸುಸ್ಥಿತಿಯಲ್ಲಿದೆ.[36] (ಚಿ.ಸಂ.11)

ಕೊಯಿರಾ ಹೊಸೂರು ಗ್ರಾಮದ ರಸ್ತೆಯ ಮಾರ್ಗದಲ್ಲಿ ಎಡಭಾಗದ ಜಮೀನಿನಲ್ಲಿ ಹೊಸದಾಗಿ ಕಟ್ಟಿರುವ ಮನೆಯ ಮುಂಭಾಗದಲ್ಲಿ ಒಂದು ನೆಲಸಮಾಧಿ ಗೋರಿಯು ಕಂಡುಬಂದಿದ್ದು ಅದನ್ನು ಹಾಳುಗೆಡವಲಾಗಿದ್ದುಗೋರಿಯ ಸುತ್ತಲಿನ ಚಪ್ಪಡಿ ಕಲ್ಲುಗಳು ಮತ್ತು ವೃತ್ತಾಕಾರದ ರಂಧ್ರಗಳು ನಾಶವಾಗಿವೆ. (ಚಿ.ಸಂ.12)ಇದೇ ಗ್ರಾಮದ ಹೊಸೂರು ಕಡೆಗೆ ಹೋಗುವ ರಸ್ತೆಯ ಬಲಭಾಗದಲ್ಲಿ ಮಲಗಿರುವ ಸ್ಥಿತಿಯಲ್ಲಿ ನಿಲುಸುಗಲ್ಲು ಕಂಡುಬಂದಿದ್ದು ಇದರ ಎತ್ತರ ಸುಮಾರು 25 ಅಡಿಗಳು ಮತ್ತು 8 ಅಡಿಸುತ್ತಳತೆಯನ್ನು ಹೊಂದಿದ್ದು ಅಲೈನ್‌ಮೆಂಟ್‌ನ್ನು ಕಳೆದುಕೊಂಡಿದೆ.[37] (ಚಿ.ಸಂ.13)ಕೊಯಿರಾ ಹೊಸೂರು ಗ್ರಾಮದ ಎಂ.ಎಚ್.ಆಂಜಿನಪ್ಪ ಮತ್ತು ಮುನಿಕೃಷ್ಣಪ್ಪ ಎಂಬುವರಿಗೆ ಸೇರಿದ ಜಮೀನಿನಲ್ಲಿ ಒಂದು ನಿಲುಸುಗಲ್ಲು ಕಂಡು ಬಂದಿದ್ದು ಅದರ ಎತ್ತರ 11.9 ಅಡಿಗಳು ಮತ್ತು ಅಗಲ 9 ಅಡಿಗಳಾಗಿರುತ್ತದೆ.[38](ಚಿ.ಸಂ.14)ಕೊಯಿರಾದಿಂದ ಕಾರಹಳ್ಳಿ ರಸ್ತೆಗೆ ಹೋಗುವ ದಾರಿಯ ಎಡಭಾಗದಲ್ಲಿ ಮುನಿಪಿಳ್ಳಪ್ಪ ಎಂಬುವರಿಗೆ ಸೇರಿದ ಜಮೀನಿನಲ್ಲಿ ಒಂದು ಬಾಗಿರುವ ನಿಲುಸುಗಲ್ಲು ಕಂಡುಬಂದಿದ್ದು ಅದರ ಉದ್ದ 7.9 ಅಡಿ ಅಗಲ 3 ಅಡಿಗಳಾಗಿರುತ್ತದೆ ಅದರ ಪಕ್ಕದಲ್ಲಿಯೇ ಗೋರಿಯೊಂದು ಕಂಡುಬಂದಿದ್ದು ಅದು ಭೂಮಿಯಲ್ಲಿ ಹೂತು ಹೋಗಿದೆ.[39] (ಚಿ.ಸಂ.15)

ಕೊಯಿರಾದಿಂದ ಕಾರಹಳ್ಳಿಗೆ ಹೋಗುವ ರಸ್ತೆಯ ಬಲಭಾಗದಲ್ಲಿ ಎನ್.ಪ್ರಕಾಶ್ ಮತ್ತು ತಿಮ್ಮಯ್ಯರವರಿಗೆ ಸಂಬಂಧಿಸಿದ ಜಮೀನುಗಳಲ್ಲಿ ಪ್ರಸ್ತುತ ರಾಗಿಬೆಳೆ ಬಿತ್ತಿರುವ ಜಾಗದಲ್ಲಿ ಭೂಮಿಯಲ್ಲಿ ಹೂತು ಹೋಗಿರುವ 2 ಗೋರಿಗಳು ಕಂಡುಬಂದಿದ್ದು(ಚಿ.ಸಂ.16)ಜಮೀನುಗಳ ಒಂದು ಬದು ಪಕ್ಕದಲ್ಲಿ 5 ಗೋರಿಗಳು ಮತ್ತು 1 ನಿಲುಸುಗಲ್ಲು ಕಂಡುಬಂದಿದ್ದು 5 ಗೋರಿಗಳು ಒಂದೇ ಕಡೆ ಕಂಡುಬಂದಿದ್ದು ಅವುಗಳ ಚಪ್ಪಡಿಗಳು ವೃತ್ತಾಕಾರದ ರಂಧ್ರ ಮತ್ತು ಮೇಲು ಹಾಸುಗಲ್ಲು ಗೋರಿಗಳ ಪಕ್ಕದಲ್ಲಿಯೇ ಚೆಲ್ಲಾಪಿಲ್ಲಿಯಾಗಿವೆ (ಚಿ.ಸಂ.17)ಇವುಗಳ ಸುತ್ತಲೂ ಗಿಡಗಂಟೆಗಳು ಬೆಳೆದಿವೆ. [40] ಕೊಯಿರಾ ಗ್ರಾಮದ ದಿನ್ನೆ ಪ್ರದೇಶದಲ್ಲಿ ಸರ್ವೆನಂಬರ್ 84ರಲ್ಲಿ ದ್ಯಾವಣ್ಣ ಎಂಬುವರಿಗೆ ಸೇರಿದ ನೀಲಗಿರಿ ತೋಪಿನಲ್ಲಿ ಒಂದು ನಿಲುಸುಗಲ್ಲು ಕಂಡುಬಂದಿದ್ದು

ಇದರ ಎತ್ತರ 8 ಅಡಿಗಳು ಮತ್ತು ಅಗಲ 3 ಅಡಿ ಮತ್ತು ಸುತ್ತಳತೆ 7 ಅಡಿಗಳಾಗಿರುತ್ತದೆ.[41](ಚಿ.ಸಂ.18)

ಕೊಯಿರಾ ಗ್ರಾಮದ ಊರಿನ ಒಳಗೆ ಓಣಿಗೆ ಹೋಗುವ ವಾಸದ ಮನೆಯ ಪಕ್ಕದಲ್ಲಿ ರಸ್ತೆಗೆ ಹೊಂದಿಕೊಂಡಂತೆ ಮಲಗಿರುವ ಸ್ಥಿತಿಯಲ್ಲಿ ಒಂದು ಬೃಹತ್ತಾದ ನಿಲುಸುಗಲ್ಲು ಕಂಡುಬಂದಿದ್ದು ಇದರ ಎತ್ತರ 17 ಅಡಿ ಅಗಲ 4.3 ಅಡಿಗಳಾಗಿದ್ದುತನ್ನ ಅಲೈನ್‌ಮೆಂಟ್‌ನ್ನು ಕಳೆದುಕೊಂಡಿದೆ ಈ ಪ್ರದೇಶದಲ್ಲಿ ಕಲ್ಲುಗಣಿಗಾರಿಕೆಯಿಂದ ಮತ್ತು ನಗರೀಕರಣದಿಂದಾಗಿ ಹಾಗೂ ರಸ್ತೆಗಳ ವಿಸ್ತರಣೆಯಿಂದಾಗಿ ಶಿಲಾಗೋರಿಗಳು ಮತ್ತು ನಿಲುಸುಗಲ್ಲುಗಳು ಹಾಳಾಗಿವೆ.[42] (ಚಿ.ಸಂ.19)

ಹೊಸೂರು ಗ್ರಾಮ ಪ್ರದೇಶವು ಬೃಹತ್‌ಶಿಲಾಯುಗ ಸಂಸ್ಕೃತಿಯ ಗೋರಿಗಳ ನೆಲೆಯಾಗಿದೆ. ಇಲ್ಲಿ 12 ನಿಲುಸುಗಲ್ಲುಗಳಿದ್ದು ಇವುಗಳಲ್ಲಿ ಎರಡರ ಎತ್ತರ 22 ಅಡಿ ಉಳಿದವು 8ರಿಂದ 10 ಅಡಿ ಎತ್ತರ ಇವೆ[43]

**ಸಾಂಸ್ಕೃತಿಕ ಅವಶೇಷಗಳು**: ಕ್ಷೇತ್ರಕಾರ್ಯ ಅನ್ವೇಷಣೆಯಲ್ಲಿ ಮಣ್ಪಾತ್ರೆ ಚೂರುಗಳು ಕಂಡುಬಂದಿವೆ. ಅವುಗಳ ಲಕ್ಷಣಗಳೆಂದರೆ

- ಕೆಂಪು ಮತ್ತು ಕಪ್ಪುಬಣ್ಣದ ಸುಟ್ಟ ಮಡಿಕೆಯ ಭಾಗಗಳು ಮತ್ತು ಕಂಠದ ಭಾಗಗಳು
- ಮಣ್ಪಾತ್ರೆಯ ಕತ್ತಿನ ಅಂಚಿನಲ್ಲಿ ತೆಳುವಾದ ಗೀರು ವಿನ್ಯಾಸಗಳ ಅಲಂಕಾರಗಳು.
- ಕುತ್ತಿಗೆಯ ಭಾಗ ಮತ್ತು ಬಾಯಿಯ ಭಾಗದ ಚೂರುಗಳು.
- ಹೊರ ಮೇಲ್ಮೈಯಲ್ಲಿ ಕೆಂಪು ಮತ್ತು ಕಪ್ಪು ಬಣ್ಣದ ಹೊಳಪು[44]

ಈ ಭಾಗದ ಗೋರಿಗಳನ್ನು ಒಡೆದು ಮನೆಗಳನ್ನು ನಿರ್ಮಿಸಲಾಗಿದ್ದು ಕೃಷಿ ಚಟುವಟಿಕೆಯನ್ನು ಮಾಡಲಾಗುತ್ತಿದೆ, ಹೆಚ್ಚು ಗೋರಿಗಳು ಅವನತಿಯಅಂಚಿನಲ್ಲಿದ್ದು ಅವುಗಳನ್ನು ಉಳಿಸಿ ಮತ್ತು ಸಂರಕ್ಷಿಸುವ ಅಗತ್ಯತೆ ಇದೆ.

**ಅರದೇಶಹಳ್ಳಿ-ಪ್ರಾಗೈತಿಹಾಸಿಕ ನೆಲೆ**:- ಅರದೇಶಹಳ್ಳಿ ಗ್ರಾಮವು ದೇವನಹಳ್ಳಿ ತಾಲೂಕು, ಕುಂದಾಣ ಹೋಬಳಿಗೆ ಸೇರಿದ್ದು ದೇವನಹಳ್ಳಿ-ದೊಡ್ಡಬಳ್ಳಾಪುರ ರಸ್ತೆಗೆ ಸಂಪರ್ಕ ಕಲ್ಪಿಸುವ ಐವಿಸಿ ರಸ್ತೆಯಲ್ಲಿ ದೇವನಹಳ್ಳಿಯಿಂದ ಸುಮಾರು 12 ಕಿ.ಮೀ ದೂರದಲ್ಲಿದೆ. ಅರದೇಶಹಳ್ಳಿ ಗ್ರಾಮದ ಈಶ್ವರ ದೇವಾಲಯದ ಮುಂಭಾಗದ ಜಮೀನಿನಲ್ಲಿ ಬೃಹತ್ ಪ್ರಮಾಣದಬೂದಿದಿಬ್ಬ(Ash Mound)ವು ಕಂಡುಬಂದಿದ್ದು ಇದು ಪೂರ್ವಐತಿಹಾಸಿಕ ನೆಲೆಯಾಗಿತ್ತೆಂದು

ತಿಳಿದುಬರುತ್ತದೆ.[45] ಬೂದಿಗುಡ್ಡಗಳು ಎಂದರೆ ಬೂದಿ ಮಿಶ್ರಿತ ಹಗುರವಾದ ಕೆಲವೆಡೆ ಕಲ್ಲಿನಂತಾದ ಬೂದುಮಣ್ಣಿನ ರಾಶಿ, ಕೆಲವೆಡೆ ಎಕರೆಗಟ್ಟಲೆ ವಿಸ್ತರಿಸಿರುವ ಎತ್ತರವಾದ ರಾಶಿಗಳಲ್ಲಿ ನವಶಿಲಾಯುಗ, ಬೃಹತ್‌ಶಿಲಾಯುಗ ಸಂಸ್ಕೃತಿಯ ಮಡಿಕೆಗಳು ಹೊಳಪು ಶಿಲಾಯುಧಗಳು, ಮೂಳೆಗಳು ಮುಂತಾದವುಗಳು ಹೇರಳವಾಗಿ ದೊರೆಯುತ್ತವೆ.[46]

ಈಶ್ವರ ದೇವಾಲಯದ ಅರ್ಚಕರು ಮತ್ತು ಸ್ಥಳೀಯರು ನೀಡಿದ ಮಾಹಿತಿಯಂತೆ ಈ ಹಿಂದೆ ಶಿವನ ದೇವಾಲಯದ ಸುತ್ತಲಿನ ಜಾಗ ಬೂದಿ ದಿಬ್ಬಗಳಿಂದ ಕೂಡಿದ್ದು ಮಡಿಕೆ, ಮೂಳೆಗಳು ಮುಂತಾದ ಅವಶೇಷಗಳು ಕಂಡುಬಂದಿದ್ದವು ಎಂದು ತಿಳಿಸಿರುತ್ತಾರೆ.ಆದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಯಾವುದೇ ಅವಶೇಷಗಳು ಕಂಡುಬಂದಿರುವುದಿಲ್ಲ.ಈ ನೆಲೆಯನ್ನು ಉತ್ಖನನ ಮಾಡಿದರೆ ಸ್ಪಷ್ಟ ಮಾಹಿತಿ ತಿಳಿಯಬಹುದಾಗಿದೆ.

ಅರದೇಶಹಳ್ಳಿಯಲ್ಲಿ ಬೃಹತ್‌ಶಿಲಾಯುಗದ ನೆಲೆಗಳು ಕಂಡುಬಂದಿವೆ. ಈ ಗ್ರಾಮದ ಕೆರೆಗೆ ಹೋಗುವ ರಸ್ತೆಯಲ್ಲಿ ಈ ಗ್ರಾಮದ ಸುತ್ತಲಿನ ಜನರು ಈ ಭೂಮಿಯ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸಲು ತೆಗೆಯುತ್ತಿದ್ದಾಗ ಕೆಲವು ನಾಣ್ಯಗಳು, ಮಡಿಕೆಗಳು, ಮೂಳೆಗಳು, ಲೋಹದ ತುಕ್ಕು ಹಿಡಿದ ವಸ್ತುಗಳು ಕಂಡುಬಂದಿವೆ. ಈ ಪ್ರದೇಶದಲ್ಲಿ ಕಂಡುಬಂದ ಶಿಲಾಯುಗದ ಸಮಾಧಿಗಳನ್ನು ಜನರು ನಿಧಿ ಇದೆ ಆಸೆಗೋಸ್ಕರ ಹಾಳುಗೆಡವಿದ್ದಾರೆ. ಚಪ್ಪಡಿಯಾಕಾರದಲ್ಲಿದ್ದ ಕಲ್ಲುಗಳನ್ನು ಒಡೆದು ತಮ್ಮ ಉಪಯೋಗಕ್ಕೆ ಬಳಸಿಕೊಂಡಿರುವುದರಿಂದ ಹೆಚ್ಚಿನ ಸಮಾಧಿಗಳು ನಾಶವಾಗಿವೆ. ಹಾಳುಗೆಡವಿರುವ ಒಂದು ಸಮಾಧಿಯು ಸುಮಾರು 1.37 ಮೀ ಅಗಲ, 1.83 ಮೀ ಉದ್ದ, 1.52 ಮೀ.ಗಳಷ್ಟು ಎತ್ತರ ಉಳ್ಳದ್ದಾಗಿದೆ. ನಾಲ್ಕು ಕಡೆಗಳಲ್ಲಿ ನಿಲ್ಲಿಸಿರುವ ಕಲ್ಲುಗಳು ಸುಮಾರು 22-23 ಸೆಂ.ಮೀ.ದಪ್ಪವಾಗಿದೆ.ಮೇಲ್ಭಾಗದಲ್ಲಿ ಹಾಕಿದ್ದ ಚಪ್ಪಡಿಯು ಹನ್ನೆರಡುವರೆ ಅಡಿಗಳಷ್ಟು ಉದ್ದ ಮತ್ತು 8 ಅಡಿ ಅಗಲವಾಗಿದೆ.ಈ ಸಮಾಧಿಯಲ್ಲಿ ಮೂರು ಮಡಿಕೆಗಳು ದೊರೆತಿದ್ದು ಅದರಲ್ಲಿ ಬೂದಿ ತುಂಬಿದೆ.ಸಮಾಧಿಯಲ್ಲಿ ಕಲ್ಲಿನ ಹಾಸುಗಲ್ಲು ಮತ್ತು ಅರೆಯುವ ಕಲ್ಲುಗಳು ದೊರೆತಿವೆ. ಈ ಮಡಿಕೆಗಳಲ್ಲಿ ಒಂದು ಮಡಿಕೆಯ ಮೇಲೆ ಬಣ್ಣದ ಸಾಲುಗಳನ್ನು ಚಿತ್ರಿಸಲಾಗಿದೆ.ಕೆರೆಯ ಕೋಡಿ ಬಯಲಿನಲ್ಲಿ ವೃತ್ತಾಕಾರದಲ್ಲಿರುವ ಶಿಲಾಯುಗದ ಸಮಾಧಿಗಳು ಕಂಡು ಬರುತ್ತವೆ. ಒಂದು, ಎರಡು ವೃತ್ತಗಳಿರುವ ಐದು ಸಮಾಧಿಗಳಿವೆ. ಎರಡು ಸಮಾಧಿಗಳನ್ನು ಕದಲಿಸಲಾಗಿದೆ.ಇದರಿಂದ ಹೊರ ತೆಗೆದ ಮಣ್ಣಿನಲ್ಲಿ ಮಡಿಕೆ, ಕಪ್ಪು ಮತ್ತು ಕಂದು ಮಿಶ್ರಿತ ಮಡಿಕೆ ಚೂರುಗಳು ಮತ್ತು ಮೂಳೆಯ ಅವಶೇಷಗಳು ಕಂಡುಬರುತ್ತವೆ. ಈ ಸ್ಥಳದ ಸುತ್ತಲೂ ಬೂದಿ ಮಿಶ್ರಿತ ಮಣ್ಣು ಕಂಡುಬರುತ್ತದೆ.[47]

**ಬ್ಯಾಡರಹಳ್ಳಿ ಬೃಹತ್ ಶಿಲಾಯುಗ**: ಈ ಸಂಸ್ಕೃತಿಯ ಗೋರಿ ನೆಲೆ, ಇಲ್ಲಿ ಶಿಲಾಗೋರಿಗಳಿವೆ. [48]

**ಚಿಕ್ಕಜಾಲ–ಪ್ರಾಗೈತಿಹಾಸಿಕ ನೆಲೆ**:– ಚಿಕ್ಕಜಾಲ ಗ್ರಾಮವುಬೆಂಗಳೂರಿನಿಂದ ಉತ್ತರಕ್ಕೆ ಸುಮಾರು 24 ಕಿ.ಮೀ. ದೂರದಲ್ಲಿದ್ದು. ಬೆಂಗಳೂರು–ಹೈದರಾಬಾದ್ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ–7ರಲ್ಲಿದೆ.ಈ ಗ್ರಾಮವು ಈ ಮುಂಚೆ ದೇವನಹಳ್ಳಿ ತಾಲೂಕಿಗೆ ಸೇರಿದ್ದು ಪ್ರಸ್ತುತ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ ತಾಲೂಕಿಗೆ ಸೇರಿರುತ್ತದೆ.ಈ ಗ್ರಾಮದ ಸುತ್ತಮುತ್ತಲೂ ವಿಸ್ತಾರವಾದ ಪ್ರದೇಶದಲ್ಲಿ ಕೆಲವು ಬೃಹತ್ಶಿಲಾಯುಗದ ಗೋರಿಗಳಿವೆ. ಇವುಗಳನ್ನು ಕ್ರಿ.ಶ.1881ರಲ್ಲಿ ಆಂಗ್ಲ ಕ್ಯಾಪ್ಟನ್ ಬ್ರಾನ್‌ಫಿಲ್ ಎಂಬುವನು ಪತ್ತೆ ಹಚ್ಚಿದನು.ಪದ್ಧತಿಯಂತೆ ಕಲ್ಲಿನ ಸಂಪುಟವು ಒಂದೇ ಪ್ರಮಾಣದಲ್ಲಿಲ್ಲದ ದೊಡ್ಡ ಚಪ್ಪಡಿಗಳಿಂದ ಆವೃತ್ತ ಗೊಂಡಿದೆ. ಅವುಗಳಲ್ಲಿ ಕೆಲವು ಹಾಳಾಗಿದೆ.ಪೂರ್ವದ ಚಪ್ಪಡಿಯಲ್ಲಿ ತೆರವು ಗುಂಡಿಯಿರುವ ಸಂಪುಟದ (ಪೆಟ್ಟಿಗೆಯ) ಚಪ್ಪಡಿಗಳ ಮೇಲೆ ಬೃಹದಾಕಾರದ ಪೂರ್ವ ಪಶ್ಚಿಮ 4 ಮತ್ತು ಉತ್ತರ ದಕ್ಷಿಣ 4ಮೀ.ಅಳತೆಯ ಬೃಹತ್ ಕಲ್ಲಿನ ಮುಚ್ಚಳವನ್ನು ಹಾಕಲಾಗಿದೆ.ನಾಶಪಡಿಸಿರುವ ಕೆಲವು ಸಮಾದಿಗಳಲ್ಲಿ ಕಪ್ಪು ಮತ್ತು ಕೆಂಪುಬಣ್ಣದ ಮಡಿಕೆಗಳು ಮಾನವ ಮೂಳೆಗಳು ಮತ್ತು ಕೆಲವು ಕಬ್ಬಿಣದ ಆಯುಧಗಳು, ಸಲಕರಣೆಗಳು ದೊರಕಿವೆ.[49]

**ದೊಡ್ಡಜಾಲ**

ದೊಡ್ಡಜಾಲ ಗ್ರಾಮವು ಈ ಮುಂಚೆ ದೇವನಹಳ್ಳಿ ತಾಲೂಕಿಗೆ ಸೇರಿದ್ದು ಪ್ರಸ್ತುತ ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಉತ್ತರ ತಾಲೂಕಿನ ಜಾಲ ಹೋಬಳಿಗೆ ಸೇರಿರುತ್ತದೆ. ಈ ಗ್ರಾಮವು ಬೆಂಗಳೂರು–ಬಳ್ಳಾರಿ ರಸ್ತೆಯಲ್ಲಿ ದೇವನಹಳ್ಳಿಯಿಂದ ಸುಮಾರು 8 ಕಿ.ಮೀ ದೂರದಲ್ಲಿದೆ.ಕೆಲವು ಪ್ರಾಗೈತಿಹಾಸಿಕ ಕಲ್ಲಿನ ಸಂಪುಟವನ್ನು ಸುತ್ತುವರೆದಿರುವ ಹಲವು ಚಪ್ಪಡಿಯ ಕಲ್ಲು ಗೋರಿಗಳು ಈ ಪ್ರದೇಶದಲ್ಲಿ ಬೆಳಕಿಗೆ ಬಂದಿವೆ. ಬೃಹದಾಕಾರದ ಮುಚ್ಚಿದ ಕಲ್ಲನ್ನು ಸಂಪುಟಗಳ ಮೇಲೆ ಇಟ್ಟಿರುವರು.ನಾಶವಾಗಿರುವ ಕೆಲವು ಸಮಾಧಿಗಳಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು ಮತ್ತು ಕೆಲವು ಕಬ್ಬಿಣದ ಆಯುಧಗಳು ಮತ್ತು ಸಲಕರಣೆಗಳು ದೊರಕಿವೆ.[50]

## ಅಡಿ ಟಿಪ್ಪಣಿಗಳು

1. ಇತಿಹಾಸ ದರ್ಪಣ, ಜನವರಿ–ಜೂನ್ , ಪುಸ್ತಕ 12/13, ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, ಪು.ಸಂ.19, 2002,
2. Jain, V.K. Prehistory and protohistory of India, An Appraisal, New Delhi, Page No.119, 2014.
3. Ibid, Page No.120, 2014.
4. Ibid, Page No.124, 2014.
5. Ibid, Page No.125, 2014.
6. ಇತಿಹಾಸ ದರ್ಪಣ, ಜನವರಿ–ಜೂನ್ 2002, ಪುಸ್ತಕ 12/13, ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, ಪು.ಸಂ.29.
7. ಕರ್ನಾಟಕ ಚರಿತ್ರೆ, ಸಂಪುಟ–1, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.173.
8. ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಪು.ಸಂ.17, 2003.
9. Ibid, Page No.120-121, 2014.
10. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.670, 2009,
11. ಅದೇ, ಪು.ಸಂ.670.
12. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.672, 2009.
13. ಇತಿಹಾಸ ದರ್ಪಣ, ಜನವರಿ–ಜೂನ್ 2002, ಪುಸ್ತಕ 12/13, ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, ಪು.ಸಂ.18.
14. ಅದೇ, ಪು.ಸಂ.19.
15. ಅದೇ, ಪು.ಸಂ.22–23.
16. ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಪು.ಸ.16, 2003.
17. ಇತಿಹಾಸ ದರ್ಪಣ, ಜನವರಿ–ಜೂನ್ ಪುಸ್ತಕ 12/13, ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಪು.ಸಂ.30, 2012.

18. ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಪು.ಸಂ.17-18, 2003.

19. ಇತಿಹಾಸ ದರ್ಪಣ, ಜನವರಿ-ಜೂನ್ 2012, ಪುಸ್ತಕ 12/13, ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಪು.ಸಂ.30-31.

20. ಶಿವತಾರಕ್,ಕೆ.ಬಿ. ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.537, 2001.

21. Mysore Annual Reports 1917, Page No.62, Plate XV.

22. ಶಿವತಾರಕ್, ಕೆ.ಬಿ. ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.538, 2001.

23. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

24. ಅದೇ,

25. ಅದೇ,

26. ಅದೇ,

27. ಅದೇ,

28. ಅದೇ,

29. ಅದೇ,

30. ಅದೇ,

31. ಅದೇ,

32. ಅದೇ,

33. ಶಿವತಾರಕ್, ಕೆ.ಬಿ. ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.538, 2001.

34. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

35. ಅದೇ,

36. ಅದೇ,

37. ಅದೇ,

38. ಅದೇ,

39. ಅದೇ,

40. ಅದೇ,

41. ಅದೇ,

42. ಅದೇ,

43. ಶಿವತಾರಕ್, ಕೆ.ಬಿ. ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.539, 2001.

44. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

45. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.794, 1989.

46. ಇತಿಹಾಸ ದರ್ಪಣ, ಜನವರಿ–ಜೂನ್, ಪುಸ್ತಕ 12–13, ಪು.ಸಂ.27, 2012.

47. ಇತಿಹಾಸ ದರ್ಶನ, ಸಂಪುಟ–11, ಪು.ಸಂ.28–29, 199

48. ಕೆ.ಬಿ. ಶಿವತಾರಕ್, ಕರ್ನಾಟಕದಲ್ಲಿ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.537, 2001.

49. ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವೃತ್ತ, ಬೆಂಗಳೂರು

50. ಅದೇ,

## ಅಧ್ಯಾಯ-4

## ರಾಜಕೀಯ ಇತಿಹಾಸ ಮತ್ತು ಪ್ರಾದೇಶಿಕ ಆಡಳಿತ ವಿಭಾಗಗಳು

**ಪೀಠಿಕೆ**

ದೇವನಹಳ್ಳಿ ತಾಲೂಕಿನ ಪ್ರದೇಶಗಳು ಗಂಗರು, ನೊಳಂಬರು, ಚೋಳರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಆವತಿ ನಾಡಪ್ರಭುಗಳು, ಯಲಹಂಕ ನಾಡಪ್ರಭುಗಳು, ನಲ್ಲೂರು ನಾಯಕರು, ಮೈಸೂರಿನ ಒಡೆಯರು ತದನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಅಂತಿಮವಾಗಿ ಮೈಸೂರಿನ ಒಡೆಯರವರ ಆಳ್ವಿಕೆಗೆ ಒಳಪಟ್ಟಿದ್ದವು.ಈ ಭಾಗದಲ್ಲಿ ಕಿರು ರಾಜಮನೆತನಗಳು ಮತ್ತು ಪ್ರಾದೇಶಿಕ ಆಡಳಿತ ವಿಭಾಗಗಳು ಅಸ್ತಿತ್ವದಲ್ಲಿದ್ದವು. ರಾಜಕೀಯ ಇತಿಹಾಸವನ್ನು ಅಧ್ಯಯನ ಮಾಡಲು ಶಾಸನಗಳೇ ಮೂಲಾಧಾರಗಳಾಗಿವೆ, ಕೆಲವು ಕೃತಿಗಳಲ್ಲಿ ರಾಜವಂಶಗಳು ಮತ್ತಿತರ ಉಲ್ಲೇಖಗಳು ಕಂಡುಬಂದಿವೆ.ದೇವನಹಳ್ಳಿ ತಾಲೂಕಿನ ಪ್ರದೇಶಗಳು ಬಿಜಾಪುರ ಸುಲ್ತಾನರು, ಮರಾಠರು ಮತ್ತು ಮೊಘಲರ ಆಕ್ರಮಣಕ್ಕೆ ಒಳಗಾಗಿದ್ದವು. ದೇವನಹಳ್ಳಿ ತಾಲೂಕಿನ ರಾಜಕೀಯ ಇತಿಹಾಸವನ್ನು ಅವಲೋಕಿಸಿದಾಗ ಹಲವಾರು ಘಟ್ಟಗಳನ್ನು ಕಾಣಬಹುದಾಗಿದೆ.

**ಗಂಗರು:**

ಗಂಗರು ಕರ್ನಾಟಕವನ್ನು ಆಳಿದ ಪ್ರಾಚೀನ ಮನೆತನ. ಇವರ ಕಾಲದಲ್ಲಿ ಬೆಂಗಳೂರು ಜಿಲ್ಲೆಯು ಗಂಗವಾಡಿ 96000ದ ಭಾಗವಾಗಿತ್ತು. ಇವರು ಕ್ರಿ.ಶ.4ನೇ ಶತಮಾನದಿಂದ 10ನೇ ಶತಮಾನದವರೆಗೆ ಈ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದರು. ಗಂಗರ ಮೊದಲ ರಾಜಧಾನಿ ಕುವಲಾಲ (ಕೋಲಾರ) ನಂತರ ತಲಕಾಡು ರಾಜಧಾನಿಯಾಯಿತು. ಅವರು ಕೆಲಕಾಲ ಚನ್ನಪಟ್ಟಣ ಬಳಿಯ ಮಾನಕೊಂಡ ಮತ್ತು ನೆಲಮಂಗಲ ತಾಲೂಕಿನ ಮನ್ನೆಯಿಂದ ಆಳ್ವಿಕೆ ನಡೆಸಿದರು. ಗಂಗರು ಕ್ರಿ.ಶ.4ನೇ ಶತಮಾನದಲ್ಲಿ ಕುವಲಾಲವನ್ನು ತಮ್ಮ ರಾಜಧಾನಿಯನ್ನಾಗಿ ಮತ್ತು ನಂದಿಗಿರಿ ಕೋಟೆ (ನಂದಿಬೆಟ್ಟ)ಯನ್ನು ಒಂದು ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡು ಈ ಭಾಗದ ಮೇಲೆ ಹತೋಟಿ ಹೊಂದಿದ್ದರು. ಈ ಭಾಗದಲ್ಲಿ ಕ್ರಮಬದ್ಧವಾದ ಆಡಳಿತವನ್ನು ನೀಡಿದ ಮೊದಲ ರಾಜವಂಶವೆಂದರೆ ಗಂಗರು.[1]

ಗಂಗರು ಗಂಗವಾಡಿ ಸಾಸಿರದಿಂದ ಆಳ್ವಿಕೆಯನ್ನು ಆರಂಭಿಸಿ, ಗಂಗ ಆರುಸಾವಿರ, ಗಂಗವಾಡಿ ಪನ್ನೀರ ಸಾವಿರ (12,000) ಗಂಗವಾಡಿ 32,000 ಅಂತಿಮವಾಗಿ ಗಂಗವಾಡಿ 96,000ರವರೆಗೆ ವಿಸ್ತರಿಸಲ್ಪಟ್ಟಿತು. ಗಂಗವಾಡಿಯಲ್ಲಿ ಈ ಭಾಗದಲ್ಲಿ ಕುಣುಂಗಿ-500,

ಕೆರಿಕುನ್ದಾ-300, ಸಣ್ಣೆನಾಡು-300, ಪುನ್ನಾಡು ಮುಂತಾದ ಆಡಳಿತ ವಿಭಾಗಗಳು ಮತ್ತು ನಾಡುಗಳು ಶಾಸನೋಕ್ತಗೊಂಡಿವೆ.

ಇವರ ಕಾಲದಲ್ಲಿ ಹೊಸ ಅಗ್ರಹಾರ, ದೇವಾಲಯ ಮತ್ತು ಬಸದಿಗಳನ್ನು ಸ್ಥಾಪಿಸಲಾಯಿತು ಈ ಭಾಗದಲ್ಲಿ ಮನ್ನೆಯ ಕಲ್ಲೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ಮತ್ತು ಬಸದಿಗಳು ಗಂಗವಾರದ ಸೋಮೇಶ್ವರ ದೇವಾಲಯ ಮುಖ್ಯವಾದವು. ಗಂಗರ ಸಾಮಾಜಿಕ ಕೊಡುಗೆಗಳಲ್ಲಿ ಕೆರೆಗಳ ನಿರ್ಮಾಣ ಮುಖ್ಯವಾದುದು. ಗಂಗರ ಕಾಲದಲ್ಲಿ ನಿರ್ಮಾಣವಾದ ಕೆರೆಗಳಲ್ಲಿ ಬಹುಪಾಲು ಕೆರೆಗಳು ಇಂದಿಗೂ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ.[2]

ಗಂಗರ ಮೂಲಪುರುಷ ಕೊಂಗುಣಿವರ್ಮ (ಕ್ರಿ.ಶ.350-370) ಎಂದು ಇತಿಹಾಸಕಾರರು ಗುರುತಿಸಿದ್ದಾರೆ. ತಾಮ್ರಪಟ ಶಾಸನಗಳು ಕೊಂಗುಣಿವರ್ಮ ಮತ್ತು ಆತನ ಮಗನಾದ 1ನೇ ಮಾಧವನ ಬಗ್ಗೆ (ಕ್ರಿ.ಶ.370-390) ತಿಳಿಸುತ್ತವೆ. 1ನೇ ಮಾದವನ ನಂತರ ಹರಿವರ್ಮ (ಕ್ರಿ.ಶ.420-460) ಈ ಭಾಗದಲ್ಲಿ ಆಳ್ವಿಕೆ ನಡೆಸಿದನು.[3]

ಹರಿವರ್ಮನ ನಂತರ ಎರಡನೇ ಮಾಧವ ಸಿಂಹವರ್ಮ ಎಂಬುವನು ಆಳ್ವಿಕೆ ನಡೆಸಿದನು,ಈತನಿಗೆ ವಿಷ್ಣುಗೋಪ ಮತ್ತು ವೀರವರ್ಮ ಎಂಬ ಸಹೋದರರು ಇದ್ದು, ವಿಷ್ಣುಗೋಪ ಎಂಬುವನು ಆಳ್ವಿಕೆ ನಡೆಸಿದನು (ಕ್ರಿ.ಶ.420-440) ಈತನ ನಂತರ 3ನೇ ಮಾಧವನು ಅಧಿಕಾರಕ್ಕೆ ಬಂದು ತಡಂಗಳ ಮಾಧವನೆಂದು ಹೆಸರಾಗಿದ್ದು, ಬನವಾಸಿ ಕದಂಬರ ರಾಜಕುಮಾರಿಯನ್ನು ವಿವಾಹವಾಗಿದ್ದನು,ನಂತರ ಈತನ ಮಗನಾದ ಅವನೀತ (ಕ್ರಿ.ಶ.510-560) ಎಂಬುವನು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು.[4]

ಅವನೀತನ ನಂತರ ದುರ್ವಿನೀತ ಎಂಬುವನು (ಕ್ರಿ.ಶ.560-600) ಈ ಭಾಗದಲ್ಲಿ ಆಳ್ವಿಕೆ ನಡೆಸಿದನು ಕ್ರಿ.ಶ.ಸುಮಾರು 500ರ ಹೊತ್ತಿಗೆ ಈತನು ತಲಕಾಡನ್ನು ಗಂಗರ ಖಾಯಂ ರಾಜಧಾನಿಯನ್ನಾಗಿ ಮಾಡಿದನು. ಈತನ ಕಾಲಾವಧಿಯಲ್ಲಿ ಗಂಗ ಸಾಮ್ರಾಜ್ಯವು ವಿಸ್ತರಿಸಲ್ಪಟ್ಟಿತು, ಈತನು ಪಲ್ಲವರ ವಿರುದ್ಧ ಹೋರಾಟವನ್ನು ನಡೆಸಿದನು, ಈತನು ಭಾರವೀಯ ಸಂಸ್ಕೃತ ಭಾಷೆಯ ಕಿರಾತುರ್ಜುನೀಯ ಕೃತಿಯಲ್ಲಿ 15ನೇ ಸ್ವರ್ಗಕ್ಕೆ ಭಾಷ್ಯೆ ಬರೆದನು. ಸಿರಗುಂದ ದಾಖಲೆಯ ಪ್ರಕಾರ ದುರ್ವಿನೀತನಿಗೆ 3 ಮಕ್ಕಳಿದ್ದು ಅವರಲ್ಲಿ ಮುಷ್ಕರ ಮತ್ತು ಪೊಲವೀರರ ಹೆಸರು ಮಾತ್ರ ತಿಳಿದುಬರುತ್ತದೆ. ಇವರಿಬ್ಬರು ಗಂಗರ ಪ್ರದೇಶವನ್ನು ಒಬ್ಬರನಂತರ

ಮತ್ತೊಬ್ಬರು ಆಳ್ವಿಕೆ ನಡೆಸಿದರು. ಪುಲವೀರನ ನಂತರ ಮುಷ್ಕರನ ಮಗನಾದ ಶ್ರೀವಿಕ್ರಮ ಎಂಬುವನು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು.[5]

ಶ್ರೀವಿಕ್ರಮನ ನಂತರ ಮಗನಾದ ಭೂವಿಕ್ರಮ (ಕ್ರಿ.ಶ.619-669) ಮತ್ತು ಭೂವಿಕ್ರಮನ ಸಹೋದರ 1ನೇ ಶಿವಮಾರ (ಕ್ರಿ.ಶ.679-725) ಎಂಬುವರು ಚನ್ನಪಟ್ಟಣ ಸಮೀಪದ ಮಾಕುಂದವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು.1ನೇ ಶಿವಮಾರನ ನಂತರ ಈತನ ಮೊಮ್ಮಗನಾದ ಶ್ರೀಪುರುಷ ಎಂಬುವನು (ಕ್ರಿ.ಶ.726-789) ಆಳ್ವಿಕೆ ನಡೆಸಿದನು. ಈತನು ಆಳ್ವಿಕೆಗೆ ಬರುವುದಕ್ಕಿಂತ ಮುಂಚೆ ಕೆರೆಕುಂದ-300 (ಹೊಸಕೋಟೆ ತಾಲೂಕಿನ ಪ್ರದೇಶ) ಎಂಬ ಪ್ರದೇಶದಲ್ಲಿ ಆಳ್ವಿಕೆ ನಡೆಸಿದನು[6]ತನ್ನ ರಾಜಧಾನಿಯನ್ನು ಮಣ್ಣೆ (ನೆಲಮಂಗಲ ತಾಲೂಕು) ಗೆ ಬದಲಾಯಿಸಿದನು.

ಗಂಗ ಅರಸ ಶ್ರೀಪುರುಷನ ಹಿರಿಯ ಮಗನಾದ ದುಗ್ಗಮಾರನ ಆಳ್ವಿಕೆಗೆ (789-802) ಈ ಪ್ರದೇಶವು ಒಳಪಟ್ಟಿತ್ತು. ಕ್ರಿ.ಶ.780ರಲ್ಲಿ ಶ್ರೀಪುರುಷನ ಮಗ ದುಗ್ಗಮಾರನ ಸೈನ್ಯದವಿರುದ್ಧ ಗಂಗಪುರದ ಕೀರ್ತಣ್ಣ [7]ಮತ್ತು ಕೊಣಮಿರು ಗಂಗ[7a]ಎಂಬ ವೀರರು ಹೋರಾಡಿದರು.

ದುಗ್ಗಮಾರನ ನಂತರ ಈ ಪ್ರದೇಶವು ಅವನ ಸಹೋದರನಾದ 2ನೇ ಶಿವಮಾರನ ಆಳ್ವಿಕೆಗೆ ಒಳಪಟ್ಟಿತು (ಕ್ರಿ.ಶ.789-802) ರಾಷ್ಟ್ರಕೂಟರ ಧ್ರುವನು 2ನೇ ಶಿವಮಾರನನ್ನು ಸೋಲಿಸಿ ಸೆರೆಹಿಡಿದನು, ಧ್ರುವನು ತನ್ನ ಮಗನಾದ ಕಂಬನನ್ನು ಗಂಗವಾಡಿಯ ರಾಜ್ಯಪಾಲನಾಗಿ ನೇಮಿಸಿದನು ಧ್ರುವನ ಮರಣನಂತರ ಉತ್ತರಾಧಿಕಾರತ್ವಕ್ಕಾಗಿ ಆತನ ಮಕ್ಕಳಾದ 3ನೇ ಗೋವಿಂದ ಮತ್ತು ಕಂಬರ ನಡುವೆ ಹೋರಾಟ ನಡೆದಾಗ, 3ನೇ ಗೋವಿಂದನು, ತನ್ನ ಸಹೋದರ ಕಂಬನನ್ನು ಹತ್ತಿಕ್ಕಲು 2ನೇ ಶಿವಮಾರನ್ನು ಬಿಡುಗಡೆಗೊಳಿಸಿದನು, ಆದರೆ 2ನೇ ಶಿವಮಾರನು 3ನೇ ಗೋವಿಂದನಿಗೆ ಸಹಾಯ ಮಾಡಲಿಲ್ಲ, ಇದರಿಂದಾಗಿ 3ನೇ ಗೋವಿಂದನು ಮತ್ತೆ 2ನೇ ಶಿವಮಾರನನ್ನು ಸೆರೆಮನೆಗೆ ಹಾಕಿದನು. 2ನೇ ಶಿವಮಾರನು ಕೇವಲ ರಾಷ್ಟ್ರಕೂಟರನ್ನು ಅಲ್ಲದೆ ಪೂರ್ವಭಾಗದಲ್ಲಿ ಪಲ್ಲವರನ್ನು ಎದುರಿಸಬೇಕಾಯಿತು, ಉತ್ತರದ ಭಾಗಗಳು ರಾಷ್ಟ್ರಕೂಟರ ವಶದಲ್ಲಿದ್ದವು ಕೋಲಾರದ ಪೂರ್ವಭಾಗ ಪಲ್ಲವರ ವಶದಲ್ಲಿತ್ತು,[8]

2ನೇ ಶಿವಮಾರನ ಮಗನಾದ ಮಾರಸಿಂಹನು ಈ ಭಾಗದಲ್ಲಿ ಕೆಲಕಾಲ ಆಳ್ವಿಕೆ ನಡೆಸಿದನು (ಕ್ರಿ.ಶ.796-801) 3ನೇ ಗೋವಿಂದನು 2ನೇ ಶಿವಮಾರನನ್ನು ಬಿಡುಗಡೆಗೊಳಿಸಿದನು, 2ನೇ ಶಿವಮಾರನು ಅಧಿಕಾರವನ್ನು ಕಿರಿಯ ತಮ್ಮನಾದ ವಿಜಯಾದಿತ್ಯನಿಗೆ ನೀಡಲು ಬಯಸಿದಾಗ, ವಿಜಯಾದಿತ್ಯನು ನಿರಾಕರಿಸಿ ತನ್ನ ಮಗನಾದ

1ನೇರಾಚಮಲ್ಲನಿಗೆ ಅಧಿಕಾರ ವಹಿಸಿದನು ಆದರೆ 2ನೇ ಶಿವಮಾರನು ರಾಷ್ಟ್ರಕೂಟರೊಂದಿಗೆ ಹೋರಾಟವನ್ನು ಮುಂದುವರೆಸಿದನು.[9]

1ನೇ ರಾಚಮಲ್ಲನು (ಕ್ರಿ.ಶ.818-853) ರಾಷ್ಟ್ರಕೂಟರೊಂದಿಗೆ ಹೋರಾಟವನ್ನು ಮುಂದುವರೆಸಿದನು, ಈತನು ಹೆಂಜೇರುವಿನ ನೊಳಂಬರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದನು, ಈತನ ಕಾಲದಲ್ಲಿ ನೊಳಂಬ ರಾಜಕುಮಾರನಾದ ಶಿವಮಾರನು ಈತನ ಅಧೀನದಲ್ಲಿ ಮೊರಸುನಾಡಿನಲ್ಲಿ ಆಳ್ವಿಕೆ ನಡೆಸಿದನು. ರಾಚಮಲ್ಲನ ನಂತರ ಆತನ ಮಗನಾದ ನೀತಿಮಾರ್ಗ ಎರೆಗಂಗ ಎಂಬುವನು ಕ್ರಿ.ಶ.843ರಲ್ಲಿ ಅಧಿಕಾರಕ್ಕೆ ಬಂದನು ಮತ್ತು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು (ಕ್ರಿ.ಶ.853-70). ಈತನಿಗೆ 2ನೇ ರಾಚಮಲ್ಲ ಮತ್ತು 1ನೇ ಬೂತುಗ ಎಂಬ ಇಬ್ಬರು ಮಕ್ಕಳಿದ್ದರು. ರಾಷ್ಟ್ರಕೂಟ ಅಮೋಘವರ್ಷನು ತನ್ನ ಮಗಳಾದ ಚಂದ್ರಭಲಬ್ಬೆ ಎಂಬುವಳನ್ನು ಎರೆಗಂಗನ ಕಿರಿಯ ಮಗನಾದ ಬೂತುಗನಿಗೆ ನೀಡಿ ವಿವಾಹ ಮಾಡಿದನು.[10]ಈ ವೈವಾಹಿಕ ಸಂಬಂಧವು ಸುಮಾರು ವರ್ಷಗಳ ಗಂಗರು ಮತ್ತು ರಾಷ್ಟ್ರಕೂಟರ ನಡುವಣ ವೈರತ್ವಕ್ಕೆ ತೆರೆ ಎಳೆಯಿತು,

ಎರೆಗಂಗನ ಹಿರಿಯ ಮಗನಾದ 2ನೇ ರಾಚಮಲ್ಲನು (ಕ್ರಿ.ಶ.870-919) ಈ ಭಾಗದಲ್ಲಿ ಆಳ್ವಿಕೆ ನಡೆಸಿದನು, ಈತನು ನೊಳಂಬ ಅರಸ ಮಹೇಂದ್ರನ ವಿರೋದವನ್ನು ಎದುರಿಸಬೇಕಾಯಿತು, ಆದರೆ ಬೂತುಗನ ಮಗನಾದ 2ನೇ ನೀತಿಮಾರ್ಗ ಎರೆಗಂಗನು ಕ್ರಿ.ಶ.897ರಲ್ಲಿ ಮಹೇಂದ್ರನನ್ನು ಕೊಂದನು, ಹೆಂಜೇರು ಸೇರಿದಂತೆ ನೊಳಂಬರು ಆಕ್ರಮಿಸಿದ್ದ ಗಂಗರ ಪ್ರದೇಶಗಳನ್ನು ವಶಪಡಿಸಿಕೊಂಡನು.[11]

2ನೇ ರಾಚಮಲ್ಲನ ನಂತರ 1ನೇ ಬೂತುಗನ ಮಗನಾದ 2ನೇ ನೀತಿಮಾರ್ಗ ಎರೆಗಂಗ ಎಂಬುವನು ಆಳ್ವಿಕೆ ನಡೆಸಿದನು (ಕ್ರಿ.ಶ.880-919) ಈತನು ತನ್ನ ದೊಡ್ಡಪ್ಪನ ಜೊತೆಗೂಡಿ (2ನೇ ರಾಚಮಲ್ಲ) ಸುಮಾರು 30 ವರ್ಷ ಆಳ್ವಿಕೆ ನಡೆಸಿದನು ಮತ್ತು ಸುಮಾರು 16ವರ್ಷ ಸ್ವತಂತ್ರವಾಗಿ ಆಳ್ವಿಕೆ ನಡೆಸಿದನು.[12]

2ನೇ ನೀತಿಮಾರ್ಗ ಎರೆಗಂಗನ ನಂತರ ಮೂವರು ಮಕ್ಕಳಾದ ನರಸಿಂಹ (ಕ್ರಿ.ಶ.920-933) 3ನೇ ರಾಚಮಲ್ಲ (ಕ್ರಿ.ಶ.933-936) ಮತ್ತು 2ನೇ ಬೂತುಗ (ಕ್ರಿ.ಶ.936-963) ಎಂಬುವರು ಒಬ್ಬರ ನಂತರ ಮತ್ತೊಬ್ಬರು ಆಳ್ವಿಕೆ ನಡೆಸಿದರು.ನಂತರ 2ನೇ ಬೂತುಗನ ಮಗನಾದ ಮರುಳ (ಕ್ರಿ.ಶ.961-963) ನಂತರ 2ನೇ ಮಾರಸಿಂಹ ಎಂಬುವರು ಆಳ್ವಿಕೆ ನಡೆಸಿದರು 2ನೇ ಮಾರಸಿಂಹನ ನಂತರ ಈತನ ಮಗನಾದ 4ನೇ ರಾಚಮಲ್ಲ ಎಂಬುವನು

ಆಳ್ವಕೆ ನಡೆಸಿದನು (977-999)ಈತನು ಗಂಗರ ಕಡೆಯ ಅರಸನಾಗಿದ್ದು ಈತನ ಕಾಲದಲ್ಲಿ ಕ್ರಿ.ಶ.999ರಲ್ಲಿ ಚೋಳರು ಗಂಗವಾಡಿಯ ಪ್ರದೇಶಗಳನ್ನು ವಶಪಡಿಸಿಕೊಂಡರು.[13]

**ನೊಳಂಬರು/ನೊಳಂಬ ಪಲ್ಲವರು:**

ಆಗ್ನೇಯ ಕರ್ನಾಟಕ ಭಾಗದಲ್ಲಿ ಸುಮಾರು ಕ್ರಿ.ಶ.750ರಿಂದ 1054ರವರೆಗೆ ಆಳಿದ ಒಂದು ಸಾಮಂತ ರಾಜಮನೆತನ ಆಂಧ್ರಪ್ರದೇಶದ ಅನಂತರಪುರ ಜಿಲ್ಲೆಯ ಮಡಕಶಿರಾ ತಾಲೂಕಿನ ಈಗಿನ ಹೇಮಾವತಿ ಅಥವಾ ಪ್ರಾಚೀನ ಹೆಂಜೇರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದ ಪಲ್ಲವ ಶಾಖೆಯ ನೊಳಂಬರನ್ನು ನೊಳಂಬ ಪಲ್ಲವ ವಂಶವೆಂದು ಶಾಸನಗಳಲ್ಲಿ ಕರೆಯಲಾಗಿದೆ. ಇವರು ತಮ್ಮನ್ನು ಕಂಚಿಯ ಮೂಲದ ಪಲ್ಲವರೆಂದು ಗುರುತಿಸಿಕೊಂಡಿದ್ದಾರೆ. ಇವರು ತಮ್ಮನ್ನು ಪಲ್ಲವಾನ್ವಯ, ಪಲ್ಲವ ಕುಲ, ಪಲ್ಲವ ಕುಲತಿಲಕರೆಂದು ಕರೆದುಕೊಂಡಿದ್ದಾರೆ.[14]

ಇವರು ನೊಳಂಬಳಗೆ-1000ದಿಂದ ಆಳ್ವಕೆಯನ್ನು ಪ್ರಾರಂಭಿಸಿ ಇವರ ಪ್ರಾಂತ್ಯವು ಕೋಲಾರ, ತುಮಕೂರು, ಚಿತ್ರದುರ್ಗ, ಬೆಂಗಳೂರು, ಬಳ್ಳಾರಿ, ಅನಂತಪುರ ಮುಂತಾದ ಜಿಲ್ಲೆಗಳ ಭಾಗಗಳನ್ನು ಒಳಗೊಂಡಿತ್ತು. ಈ ವಂಶದ ಸುಮಾರು 18 ಜನರು ಸಾರ್ವಭೌಮರಾಗಿ ಆಳ್ವಕೆ ಮಾಡದೆ ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಕೆ ನಡೆಸಿದರು. ಇವರ ಸಾಮ್ರಾಜ್ಯವು ಬಳ್ಳಾರಿಯ ತನಕ ವಿಸ್ತರಿಸಿದ್ದು, ಕಂಪಿಲಿ ಇವರ ರಾಜಧಾನಿಯಾಗಿತ್ತು. ಬೆಂಗಳೂರು ಜಿಲ್ಲೆಯು ಇವರ ಆಳ್ವಕೆಗೆ ಒಳಪಟ್ಟಿದ್ದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ. ಈ ವಂಶದ ಮಂಗಳ ನೊಳಂಬರಾಜ (ಕ್ರಿ.ಶ.730-755) ಈತನ ಮಗ ಸಿಂಹಪೋತ (ಕ್ರಿ.ಶ.775-805) ಚಾರುಪನ್ನೇರ (ಸಿಂಹಪೋತನ ಮಗ (ಕ್ರಿ.ಶ.805-830 ಮತ್ತು ಒಂದನೇ ಪೊಳಲ್ಚೋರ (ಚಾರುಪೊನ್ನೇರನ ಮಗ ಕ್ರಿ.ಶ.830-875) ಈ ವಂಶದ ಪೂರ್ವಅರಸರು. ಸಿಂಹಪೋತನು ದುಗಮಾರನ ವಿರುದ್ಧದ ಹೋರಾಟದಲ್ಲಿ 2ನೇ ಶಿವಮಾರನ ಪರವಹಿಸಿದ್ದನು. ಗಂಗರ 2ನೇ ಶಿವಮಾರನು ರಾಷ್ಟ್ರಕೂಟರ 3ನೇ ಗೋವಿಂದನಿಂದ ಸೋತಾಗ ನೊಳಂಬ ಚಾರುಪೊನ್ನೇನನು ಸ್ವಾಮಿನಿಷ್ಠೆಯನ್ನು ಬದಲಿಸಿ ರಾಷ್ಟ್ರಕೂಟರ ಸಾರ್ವಬೌಮತ್ವವನ್ನು ಒಪ್ಪಿಕೊಂಡನು.[15]

ಪೊಳಲ್ಚೋರನ ಮಗನಾದ 1ನೇ ಮಹೇಂದ್ರ (ಕ್ರಿ.ಶ.875-897) ಎಂಬುವನು ಗಂಗರ ಅರಸ 2ನೇ ರಾಚಮಲ್ಲನ ಕಾಲದಲ್ಲಿ, ಗಂಗ-1000 (ಗಂಗ ಸಾಸಿರ) ಪ್ರಾಂತ್ಯವನ್ನು ನೋಡಿಕೊಳ್ಳುತ್ತಿದ್ದನು ನಂತರ ಈತನು ನೀತಿಮಾರ್ಗ ಎರೆಗಂಗನ

ಸಾಮಂತನಾಗಿದ್ದನುಮಹೇಂದ್ರನು ಬಾಣರನ್ನು ಕ್ರಿ.ಶ.885ರಲ್ಲಿ ಜರುಗಿದ ಸೋರೆಮಡಿ ಯುದ್ಧದಲ್ಲಿ ಸೋಲಿಸಿ 'ಮಹಾಬಲಿ ವಿಧ್ವಂಸಕ' ಎಂಬ ಬಿರುದನ್ನು ಗಳಿಸಿದನು.[16]ಬಾಣರ ಮೇಲಿನ ಈ ದಿಗ್ವಿಜಯದಿಂದ ಉನ್ಮತ್ತನಾದ ಮಹೇಂದ್ರನು ತನ್ನ ರಾಜಕೀಯ ಮೈತ್ರಿ ಮತ್ತು ಸಂಬಂಧವನ್ನು ಮರೆತು ಗಂಗರಸ 2ನೇ ರಾಚಮಲ್ಲನ ಮೇಲೆ ಯುದ್ಧವನ್ನು ಮಾಡಲಾಗಿ ಸ್ವಲ್ಪಮಟ್ಟಿಗೆ ಯಶಸ್ಸನ್ನುಗಳಿಸಿ ನೀತಿಮಾರ್ಗ ಎರೆಗಂಗನಿಂದ ಕೊಲ್ಲಲ್ಪಟ್ಟನು.

1ನೇ ಮಹೇಂದ್ರನ ನಂತರ ಈತನ ಉತ್ತರಾಧಿಕಾರಿಯಾಗಿ ಅಯ್ಯಪ್ಪ ದೇವ ಎಂಬುವನು ಕ್ರಿ.ಶ.897-934ರವರೆಗೆ ಆಳ್ವಿಕೆ ನಡೆಸಿದನು. ಈತನು ಪ್ರಾರಂಭದಲ್ಲಿ ಗಂಗರಸ 2ನೇ ರಾಜಮಲ್ಲನ ವಿರುದ್ಧ ಹೋರಾಟ ನಡೆಸಿದನು, ನಂತರ ಗಂಗರೊಂದಿಗೆ ಮೈತ್ರಿಯನ್ನು ಮಾಡಿಕೊಂಡು ನೊಳಂಬವಾಡಿ 32000 ಎಂಬ ಪ್ರಾಂತ್ಯದ ಅಧಿಪತಿಯಾಗಿದ್ದು ರಾಷ್ಟ್ರಕೂಟರಿಗೆ ಸ್ವಾಮಿನಿಷ್ಠೆಯನ್ನು ಹೊಂದಿದ್ದನು. ತುಂಬೇಪಾಡಿ ಕದನದಲ್ಲಿ ಗಂಗರು ವೆಂಗಿ ಚಾಳುಕ್ಯರ ಮೇಲೆ ಯುದ್ಧ ಮಾಡಿದಾಗ ಅಯ್ಯಪ್ಪ ದೇವ ನಿಧನ ಹೊಂದಿದನು. ಈ ಯುದ್ಧದಲ್ಲಿ 3ನೇ ರಾಚಮಲ್ಲನ ಪರ ಹೋರಾಡಿದನು.[17]ಈತನು ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ಮತ್ತು ಕೋಲಾರ ಗಡಿಪ್ರದೇಶಗಳ ಮೇಲೆ ಹತೋಟಿ ಹೊಂದಿದ್ದನು.

ಅಯ್ಯಪ್ಪ ದೇವನ ಮರಣಾನಂತರ ಈತನ ಉತ್ತರಾಧಿಕಾರಿಯಾಗಿ ಮೊದಲ ಮಗನಾದ ಅಣಿಗ ಬೀರನೊಳಂಬ (ಕ್ರಿ.ಶ.934-940) ಎಂಬುವನು ಆಳ್ವಿಕೆ ನಡೆಸಿದನು. ಕೊತ್ತಮಂಗಲ ಯುದ್ಧದಲ್ಲಿ ಗಂಗರಿಂದ ಸೋಲನ್ನು ಅನುಭವಿಸಿದನು, ರಾಷ್ಟ್ರಕೂಟರ 3ನೇ ಕೃಷ್ಣ ಕ್ರಿ.ಶ.938ರಲ್ಲಿ ಈತನನ್ನು ಸೋಲಿಸಿದನು. ಈತನ ಉತ್ತರಾಧಿಕಾರಿಯಾಗಿ ಕಿರಿಯ ತಮ್ಮನಾದ ದಿಲೀಪ ಇರಿವ ನೊಳಂಬ (ಕ್ರಿ.ಶ.940-968) ರಾಷ್ಟ್ರಕೂಟರು ಮತ್ತು ಗಂಗರೊಂದಿಗೆ ಮೈತ್ರಿಯನ್ನು ಹೊಂದಿದ್ದು ರಾಷ್ಟ್ರಕೂಟರ ಅರಸ 3ನೇ ಕೃಷ್ಣನು ಚೋಳರ ವಿರುದ್ಧ ಮಾಡಿದ ಹೋರಾಟದಲ್ಲಿ ಭಾಗವಹಿಸಿದ್ದನು. ಇವನ ಕಾಲದಲ್ಲಿ ಸಂಭವಿಸಿದ ಕದನವೊಂದರಲ್ಲಿ ಬೀರೈಯ್ಯ ಎಂಬ ವೀರನು ಹೋರಾಡಿ ಸತ್ತನು. ಸತ್ತ ವೀರನ ಕುಟುಂಬಕ್ಕೆ ನೀಡಿದ ದತ್ತಿ ಬಗ್ಗೆ ಕೊಯಿರಾ ಗ್ರಾಮದ ಸತೇನಹಳ್ಳಿ ದಾಖಲೆಯು ತಿಳಿಸುತ್ತದೆ.[18]ಈತನ ನಂತರ ಈತನ ಮಗನಾದ ನನ್ನಿನೊಳಂಬ ಎಂಬುವನು ಸ್ವಲ್ಪಕಾಲ ಆಳ್ವಿಕೆ ನಡೆಸಿದನು. (ಕ್ರಿ.ಶ.968-970) ಈತನ ನಂತರ ಮಗನಾದ 2ನೇ ಪೊಳಲ್ಚೋರ (ರಾಜಮನೋಜ) ಎಂಬುವನು ಅಧಿಕಾರಕ್ಕೆ ಬಂದನು. ಈತನ ನಂತರ 5ಜನ ನೊಳಂಬ ಅರಸರಾದ 2ನೇ ಮಹೇಂದ್ರ (ಕ್ರಿ.ಶ.977-81) 2ನೇ ಇರಿವ ನೊಳಂಬ (ಕ್ರಿ.ಶ.1010-1024) ಜಗದೇಕಮಲ್ಲ (ಕ್ರಿ.ಶ.1024-1037) 2ನೇ ಜಗದೇಕ ಮಲ್ಲ(ಕ್ರಿ.ಶ.1037-1044) ಮತ್ತು ತ್ರೈಲೋಕ ನೊಳಂಬ (ಕ್ರಿ.ಶ.1044-1054) ಎಂಬುವರು ಆಳ್ವಿಕೆ ನಡೆಸಿದರು

ನಂತರ ಅಂತಿಮ ದಿನಗಳಲ್ಲಿ ನೊಳಂಬವಾಡಿ ಪ್ರದೇಶಗಳು ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯಕ್ಕೆ ವಿಲೀನವಾದವು, ಕ್ರಿ.ಶ.991ರಲ್ಲಿ ಅವರ ಪ್ರದೇಶಗಳನ್ನು ಚೋಳ ರಾಜರಾಜನು ವಶಪಡಿಸಿಕೊಂಡನು ಆಡಳಿತಾತ್ಮಕ ವಿಷಯಗಳಲ್ಲಿ ನೊಳಂಬರು ಹೆಚ್ಚುಕಡಿಮೆ ಗಂಗರ ಸಂಪ್ರದಾಯಗಳನ್ನು ಅನುಸರಿಸಿದರು.[19]

**ಚೋಳರು:**

ದಕ್ಷಿಣ ಭಾರತದ ಪ್ರಾಚೀನ ರಾಜಮನೆತನಗಳಲ್ಲಿ ಚೋಳ ವಂಶವು ಕೂಡ ಒಂದು. ಇವರು ತಂಜಾವೂರಿನಿಂದ ಆಳ್ವಿಕೆ ನಡೆಸಿದರು. ವಿಜಯಾಲಯ ಚೋಳ (ಕ್ರಿ.ಶ.850–870) ಈ ವಂಶದ ಸ್ಥಾಪಕ.1ನೇರಾಜರಾಜ ಚೋಳನ ಕಾಲದಿಂದ 1ನೇ ಕುಲೋತ್ತುಂಗ ಚೋಳನ ಕಾಲದವರೆಗೆ ಸುಮಾರು ಒಂದು ಶತಮಾನಕ್ಕಿಂತ ಹೆಚ್ಚು ಕಾಲ ಬೆಂಗಳೂರು ಜಿಲ್ಲೆಯುಇವರ ಆಳ್ವಿಕೆಗೆ ಒಳಪಟ್ಟಿತ್ತು. ಚೋಳರ ಕಾಲದ ಸುಮಾರು 50 ಶಾಸನಗಳು ಅವಿಭಜಿತ ಬೆಂಗಳೂರು ಜಿಲ್ಲೆಯಲ್ಲಿ ದೊರೆಕಿವೆ. ಇವುಗಳಲ್ಲಿ ಕೆಲವು ಅಗ್ರಹಾರಗಳನ್ನು ಸ್ಥಾಪಸಿದ ಮತ್ತು ದೇವಾಲಯಗಳನ್ನು ನಿರ್ಮಿಸಿದ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಬೆಂಗಳೂರು ಜಿಲ್ಲೆಯಲ್ಲಿ ಚೋಳರಿಗೆ ಸಂಬಂಧಿಸಿದ ಬಹುತೇಕ ಪ್ರದೇಶಗಳು ವಿಕ್ರಮಚೋಳ ಮಂಡಲದ ಭಾಗವಾದ ರಾಜೇಂದ್ರ ಚೋಳ (ಗಂಗೈಕೊಂಡ ಚೋಳ)ವಳನಾಡ್‌ಗೆ ಸೇರಿದರೆ ಮತ್ತೆ ಕೆಲವು ಪ್ರದೇಶಗಳುನಿಗರೇಲಿ ಚೋಳ ಮಂಡಲ ಅಥವಾ ಜಯಗೊಂಡ ಚೋಳಮಂಡಲಂಗೆ ಸೇರಿದ್ದವು.[20]

ರಾಜರಾಜಚೋಳನು ಗಂಗವಾಡಿಯನ್ನು ಆಕ್ರಮಿಸಿಕೊಳ್ಳುವುದರ ಮೂಲಕ, ಚೋಳರ ಅಧಿಕಾರವು ಈ ಭಾಗದಲ್ಲಿ ಪ್ರಾರಂಭವಾಯಿತು. ಈ ಜಿಲ್ಲೆಯಲ್ಲಿ ಚೋಳರ ಕಾಲದ ಪ್ರಾರಂಭಿಕ ದಾಖಲೆಯು 1ನೇ ರಾಜ ರಾಜಚೋಳನಿಗೆ (ಕ್ರಿ.ಶ.985–1016) ಗೆ ಸಂಬಂಧಿಸಿದೆ. ಹೊಸಕೋಟೆ ತಾಲೂಕಿನ ಕ್ರಿ.ಶ.997ರ ಕಮ್ಮಸಂದ್ರ ಶಾಸನದಲ್ಲಿ 1ನೇ ರಾಜ ರಾಜ ಚೋಳನನ್ನು ನೊಳಂಬ ನನ್ನರಸ ರಾಜನೆಂದು, ನೊಳಂಬ ನನ್ನರಸನು ದಲಿಗವಾಡಿಯ ಮೇಲೆ ಅಧಿಕಾರ ಹೊಂದಿದ ವಿಷಯವನ್ನು ಉಲ್ಲೇಖಿಸುತ್ತದೆ.[21]ಈತನ ಕಾಲದಲ್ಲಿ ಈ ಭಾಗದಲ್ಲಿ ಹಲವಾರು ದೇವಾಲಯಗಳು ನಿರ್ಮಾಣವಾದವು. ಚೋಳರ ಕಾಲದಲ್ಲಿ ಮಳೂರು ಅಥವಾ ಮಳೂರು ಪಟ್ಟಣ ಪ್ರಾಮುಖ್ಯತೆಯನ್ನು ಹೊಂದಿತ್ತು ಎಂದು ಕಂಡುಬರುತ್ತದೆ. 1ನೇ ರಾಜರಾಜ ಚೋಳನ ನಂತರ ಈತನ ಮಗನಾದ 1ನೇ ರಾಜೇಂದ್ರ ಚೋಳನು (ಕ್ರಿ.ಶ.1012–1044) ಈ ಭಾಗದ ಪ್ರದೇಶಗಳ ಮೇಲೆ ಅಧಿಪತ್ಯ ಸ್ಥಾಪಿಸಿದನು.

1ನೇ ರಾಜೇಂದ್ರ ಚೋಳನ ನಂತರ ಈ ಪ್ರದೇಶವು ಈತನ ಮಗನಾದ 1ನೇ ರಾಜಾಧಿರಾಜ ಚೋಳನ (ಕ್ರಿ.ಶ.1018-54) ಆಳ್ವಿಕೆಗೆ ಒಳಪಟ್ಟಿತ್ತು. ಈತನ ಹೆಸರು ಈ ಭಾಗದ ದತ್ತಿಗಳಲ್ಲಿ ಉಲ್ಲೇಖವಾಗಿದೆ. ಈತನು ದೇವನಹಳ್ಳಿ ತಾಲೂಕಿನ ಗಂಗವಾರದ ಸೋಮೇಶ್ವರ ದೇವಾಲಯಕ್ಕೆ ದತ್ತಿ ನೀಡಿದನು. ಈತನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1046ರಲ್ಲಿ ಜಯಗೊಂಡ ಸೋಳವೇಲನ್ ಎಂಬುವನು ವಿಕ್ರಮ ಸೋಳಮಂಡಲಂನಲ್ಲಿ ಸಣ್ಣೆನಾಡಿನ ಗಾಮುಂಡನಾಗಿ ಆಳ್ವಿಕೆ ನಡೆಸಿದನು. ವಿಕ್ರಮ ಸೋಳ ಮಂಡಲಂನಲ್ಲಿ ಸಣ್ಣೆನಾಡಿನ ಗಾಮುಂಡನಾದ ಕುರಡಿ ವಾಸವಯನ್ ವಿಮನ್ ಅಥವಾ ಜಯಗೊಂಡ ಸೋಳ ವೇಲನ್, ವಾಸವಯನ ಮಚ್ಚಿ (ನಾಡುಮಣೂರು) ಕುಳಯನ್ ಅಲಿಯಾಸ್ ತಾಯಿಕುಲ ಕಲಾ ವೇಳನ್ (ಗಂಗಪುರಂ) ಮುಂತಾದವರು ದತ್ತಿ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.[22] ಈತನ ನಂತರ 2ನೇ ರಾಜೇಂದ್ರನ (ಕ್ರಿ.ಶ.1054-1064)ನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತು.

2ನೇ ರಾಜೇಂದ್ರ ಚೋಳನ ನಂತರ ಈತನ ಸಹೋದರನಾದ ವೀರರಾಜೇಂದ್ರನು (ಕ್ರಿ.ಶ.1064-1068) ಈ ಭಾಗದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದನು. ಈತನ ಸಾಮಂತನಾಗಿ ತಿಪ್ಪೂರಿನ ಪ್ರಭು ಪಸುಪೌನಮೆಂಟಿ ರಾಜಾಧಿರಾಜ ಮಾವೆಂಟವೇಲರ್‌ನು ಆಳ್ವಿಕೆ ನಡೆಸಿದನು. ವಿಕ್ರಮ ಸೋಳಮಂಡಲಂನಲ್ಲಿ ಸಣ್ಣೆನಾಡುವಿನಲ್ಲಿ ತಿಪ್ಪೂರಿನ ಜಮೀನ್ದಾರನಾದ ವಾಸವಯ್ಯ ಅಲಿಯಾಸ್ ರಾಯರಾಯ ವೇಲನ ಪ್ರಮಾದಿಯ ಪತ್ನಿಯಾದ ಸೋಮಕ್ಕ ಎಂಬುವರು ಚಿತೆಗೆ ಪ್ರವೇಶ ಮಾಡಿದ ಬಗ್ಗೆ ಶಾಸನವು ಉಲ್ಲೇಖಿಸುತ್ತದೆ. ಈ ದಾಖಲೆಯು ಸತಿಕಲ್ಲಾಗಿದ್ದು ಇದನ್ನು ಪಸುಪೊನ್ನಮೆಂಟಿ ರಾಜಾಧಿರಾಜ ಮಾವೆಂಟವೇಲರ್ ಎಂಬುವನು ಹಾಕಿಸಿದನು.[23] ಈ ಶಾಸನ ಆಧಾರದಿಂದ ದೇವನಹಳ್ಳಿ ತಾಲೂಕಿನಲ್ಲಿ ಸತಿಪದ್ಧತಿ ಅಂದು ಅಸ್ಥಿತ್ವದಲ್ಲಿತ್ತು ಎಂದು ಗುರುತಿಸಬಹುದಾಗಿದೆ.

ವೀರರಾಜೇಂದ್ರನ ನಂತರ ಅಧಿರಾಜೇಂದ್ರನು(ಕ್ರಿ.ಶ.1067-1070) ಆಳ್ವಿಕೆ ನಡೆಸಿದನು. ಅಧಿರಾಜೇಂದ್ರನಿಗೆ ಮಕ್ಕಳಿಲ್ಲದ ಕಾರಣ ಆತನ ನಂತರ 1ನೇ ಕುಲೋತ್ತುಂಗ ಚೋಳ ಎಂಬುವನು ಕ್ರಿ.ಶ.1070ರಲ್ಲಿ ಅಧಿಕಾರಕ್ಕೆ ಬಂದು, ಈ ಭಾಗದ ಪ್ರದೇಶಗಳ ಮೇಲೆ ಆಳ್ವಿಕೆ ನಡೆಸಿದನು. (ಕ್ರಿ.ಶ.1070-1118) ಈತನು ಅನೇಕ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದನು. ಕ್ರಿ.ಶ.1080ರಲ್ಲಿ ಈತನ ಸಾಮಂತನಾಗಿ ಕಾಡಯನಾಯಕ ಎಂಬುವನು ಸಣ್ಣೆನಾಡಿನಲ್ಲಿ ಆಳ್ವಿಕೆ ನಡೆಸಿದನು.[24] 1ನೇ ಕುಲೋತ್ತುಂಗ ಚೋಳನ ನಂತರ ವಿಕ್ರಮಚೋಳ (ಕ್ರಿ.ಶ.1118-36) 2ನೇ ಕುಲೋತ್ತುಂಗ ಚೋಳ (ಕ್ರಿ.ಶ.1133-50) 2ನೇ ರಾಜರಾಜಚೋಳ (ಕ್ರಿ.ಶ.1146-63) 2ನೇ ರಾಜಾಧಿರಾಜ (ಕ್ರಿ.ಶ.1163-78) 3ನೇ ಕುಲೋತ್ತುಂಗ (ಕ್ರಿ.ಶ.1178-

1216) 3ನೇ ರಾಜರಾಜ (ಕ್ರಿ.ಶ.1216–56) ಮತ್ತು 3ನೇ ರಾಜೇಂದ್ರ (ಕ್ರಿ.ಶ.1264) ಎಂಬುವರು ಆಳ್ವಿಕೆ ನಡೆಸಿದರು.[25]

**ರಾಷ್ಟ್ರಕೂಟರು:**

ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರನ್ನು ಹತ್ತಿಕ್ಕಿ ಅಧಿಕಾರಕ್ಕೆ ಬಂದರು. ದಂತಿದುರ್ಗನಿಂದ ಪ್ರಾರಂಭವಾದ ಇವರ ಆಳ್ವಿಕೆಯು 2ನೇ ಕರ್ಕನವರೆಗೆ ಮುಂದುವರೆಯಿತು. ರಾಷ್ಟ್ರಕೂಟರ ಆರಂಭಿಕ ಅರಸರ ಕಾಲದಲ್ಲಿ ಲತ್ತಲೂರು ಇವರ ರಾಜಧಾನಿ, ದಂತಿದುರ್ಗನ ಕಾಲದಲ್ಲಿ ಎಲ್ಲೋರ ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಸಾಮ್ರಾಜ್ಯ ವಿಸ್ತಾರವಾದಂತೆ ಅಗತ್ಯಕ್ಕೆ ಅನುಗುಣವಾಗಿ ರಾಜ್ಯದ ಮಧ್ಯಭಾಗದಲ್ಲಿದ್ದ ಮಾನ್ಯಖೇಟ (ಮಳಖೇಡ) ವನ್ನು ಅಮೋಘವರ್ಷ ನೃಪತುಂಗನು ನಿರ್ಮಿಸಿ ಅಲಂಕರಿಸಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಚಾಳುಕ್ಯ ವಂಶದ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ಅಧಿಕಾರಕ್ಕೆ ಬಂದ ಮೊದಲ ರಾಷ್ಟ್ರಕೂಟ ಅರಸನೆಂದರೆ ದಂತಿದುರ್ಗ (ಕ್ರಿ.ಶ.735–56).[26]

ಗಂಗರ ಮೇಲೆ ಹತೋಟಿ ಪಡೆದ ರಾಷ್ಟ್ರಕೂಟ ಅರಸ ಧ್ರುವ (ಧಾರವರ್ಷ) (ಕ್ರಿ.ಶ.780–93) ಎಂಬುವನು ಈ ಭಾಗದ ಪ್ರದೇಶಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಧ್ರುವನು ಕ್ರಿ.ಶ.788ರಲ್ಲಿ ಗಂಗಅರಸ 2ನೇ ಶಿವಮಾರನನ್ನು ಸೋಲಿಸಿ ಬಂಧಿಯನ್ನಾಗಿರಿಸಿ ತನ್ನ ಮಗನಾದ ಕಂಬರಸನನ್ನು ಗಂಗವಾಡಿಯ ರಾಜ್ಯಪಾಲನಾಗಿ ನೇಮಿಸಿದನು. 3ನೇ ಗೋವಿಂದನ ನಂತರ ಅಧಿಕಾರಕ್ಕೆ ಬಂದ ಅಮೋಘವರ್ಷ ನೃಪತುಂಗನು (ಕ್ರಿ.ಶ.814–78) ಗಂಗವಾಡಿಯಲ್ಲಿ ಗಂಗಅರಸರ ವಿರೋಧವನ್ನು ಎದುರಿಸಬೇಕಾಯಿತು. ಈತನು ವೈವಾಹಿಕ ಸಂಬಂಧಗಳ ಮೂಲಕ ಗಂಗರೊಂದಿಗೆ ಸಂಬಂಧವನ್ನು ಬೆಳೆಸಿದನು ಮತ್ತು ತನ್ನ ಮಗಳಾದ ಚಂದ್ರಲಬ್ಬೆಯನ್ನು ಎರೆಗಂಗನ ಕಿರಿಯಮಗನಾದ 1ನೇ ಭೂತುಗನಿಗೆ ನೀಡಿ ವಿವಾಹ ಮಾಡಿದನು. ಈ ವಿವಾಹಸಂಬಂಧವು ರಾಷ್ಟ್ರಕೂಟ ಮತ್ತು ಗಂಗರ ನಡುವಣ ಹಲವಾರು ವರ್ಷಗಳ ವೈರತ್ವಕ್ಕೆ ತೆರೆ ಎಳೆಯಿತು.[27]

ಅಮೋಘವರ್ಷನ ನಂತರ 2ನೇ ಕೃಷ್ಣ (ಅಕಾಲವರ್ಷ ಶುಭತ್ತುಂಗ) (ಕ್ರಿ.ಶ.878–914) ನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತು.ದೇವನಹಳ್ಳಿ ತಾಲೂಕಿನ ಅರದೇಶಹಳ್ಳಿ ಗ್ರಾಮಕ್ಕೆ ಸೇರಿದ ಎರಡು ದಾಖಲೆಗಳು (ಕ್ರಿ.ಶ.900) ಅಕಾಲವರ್ಷನ ಆಳ್ವಿಕೆ ಮತ್ತು ಯುದ್ಧದ ಬಗ್ಗೆ ಉಲ್ಲೇಖಿಸುತ್ತವೆ. ಅರದೇಶಹಳ್ಳಿಯಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸೇರಿದ ಎರಡು ಶಾಸನೋಕ್ತ ವೀರಗಲ್ಲುಗಳು ದೊರೆತಿದ್ದು ಅದರಲ್ಲಿ ಒಂದು ತುರುಗೋಳ್ ವೀರಗಲ್ಲು ಶಾಸನವಾಗಿದ್ದು ಅದರ

ಸಾರಾಂಶವೇನೆಂದರೆ, ಅಕಾಲವರ್ಷ ಶ್ರೀಪೃಥ್ವಿವಲ್ಲಭನು ಆಳುತ್ತಿರುವಾಗ ಆತನ ಆಪ್ತನಾದ ಗಂಗವಾಸನ ಮಗ ಗೋವಿಂದ ಎಂಬುವನು, ಸಣ್ಣೆ (ಸಳ್ನೆ) – 300 ಮತ್ತು ಕುಣುಂಗಿ-500 ನಾಡುಗಳನ್ನು ನಂದಿಗುಂದದ ಪಸುವಣ್ಣ ಮೋಳ ಗಾಣಿಗಾವುಂಡ ಎಂಬುವನು ದಾಟಿಬಂದಾಗ ತಡೆದನು. ಈ ಹೋರಾಟದಲ್ಲಿ ನಂದಿ ದೇವಾಲಯದ ಮುಮೆ ನಾಯಕನು, ಈತನನ್ನು ಎದುರಿಸಿ, ಗೋವುಗಳನ್ನು ರಕ್ಷಿಸಿ ನಿಧನ ಹೊಂದಿದನು.[28] ಕ್ರಿ.ಶ.900ರ ಕಾಲಘಟ್ಟಕ್ಕಾಗಲೇ ಈ ಭಾಗದಲ್ಲಿ ತುರುಗೋಳ್ ಹೋರಾಟ ಅಸ್ಥಿತ್ವದಲ್ಲಿತ್ತೆಂದು ಮತ್ತು ತುರುಗೋಳ್ ರಕ್ಷಣೆಗಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಸ್ಮಾರಕ ಶಿಲೆಯನ್ನು ಹಾಕಿಸಲಾಗಿತ್ತೆಂದು ಈ ತುರುಗೋಳ್ ವೀರಗಲ್ಲು ಶಾಸನದಿಂದ ತಿಳಿದುಬರುತ್ತದೆ ಹಾಗೂ ಅಕಾಲವರ್ಷನ ಸಾಮಂತನಾಗಿ ತೆರಿಗೆ ಸಂಗ್ರಹಾಕಾರನು (ತೆರಿದರ) ಪುನ್ನಾಡಿನಲ್ಲಿ ಆಳ್ವಿಕೆ ನಡೆಸಿದನು.[29]

2ನೇ ಕೃಷ್ಣನ ನಂತರ 1ನೇ ಇಂದ್ರ (ಕ್ರಿ.ಶ.914-29) 2ನೇ ಅಮೋಘವರ್ಷ (ಕ್ರಿ.ಶ.929-30) 4ನೇ ಗೋವಿಂದ (ಕ್ರಿ.ಶ.930-35) ಮತ್ತು 3ನೇ ಬದ್ದೆಗ (ಭದ್ರದೇವ) ಅಮೋಘವರ್ಷ (ಕ್ರಿ.ಶ.935-39) ಎಂಬುವರು ಆಳ್ವಿಕೆ ನಡೆಸಿದರು. ಕ್ರಿ.ಶ.973ರಲ್ಲಿ ಕಲ್ಯಾಣ ಚಾಲುಕ್ಯರು ರಾಷ್ಟ್ರಕೂಟರನ್ನು ಬದಿಗೊತ್ತಿ ಅಧಿಕಾರಕ್ಕೆ ಬಂದರು.

**ಕಲ್ಯಾಣ ಚಾಲುಕ್ಯರು:**

ಕಲ್ಯಾಣ ಚಾಲುಕ್ಯರು ಕ್ರಿ.ಶ.973ರಲ್ಲಿ ರಾಷ್ಟ್ರಕೂಟರನ್ನು ಅಧಿಕಾರದಿಂದ ಕಿತ್ತುಹಾಕಿ ಈ ಭಾಗದ ಮೇಲೆ ಅಧಿಕಾರವನ್ನು ಸ್ಥಾಪಿಸಿದರು ಹಾಗೂ ಗಂಗರನ್ನು ಹತ್ತಿಕ್ಕಿದರು.ಗಂಗರ ಅಧಿಕಾರಿಯಾದ ಪಾಂಚಳದೇವವೆಂಬುವನು 2ನೇಮಾರಸಿಂಹನ ನಿಧನದ ನಂತರ ಸ್ವತಂತ್ರವಾಗಲು ಬಂಡೆದ್ದಾಗ ಈತನನ್ನು ಚಾಲುಕ್ಯರ ಎರಡನೇ ತೈಲಪನು ಸೋಲಿಸಿ ಪಾಂಚಾಳಮರ್ಧನ ಪಂಚಾನನ ಎಂಬ ಬಿರುದನ್ನು ಧರಿಸಿದನು.ಬೆಂಗಳೂರು ಭಾಗದ ಪ್ರದೇಶದಲ್ಲಿ ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ ದಾಖಲೆಗಳು ಕಂಡುಬಂದಿಲ್ಲ, ಏಕೆಂದರೆ ಈ ಪ್ರದೇಶಗಳು ಚೋಳರ ಅಧೀನದಲ್ಲಿದ್ದವು.

ಹೊಯ್ಸಳರು 11ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ನೊಳಂಬರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು.ನೊಳಂಬರು ಈ ಭಾಗದಲ್ಲಿ ಚೋಳರ ಪ್ರದೇಶ ಮತ್ತು ಬೆಂಗಳೂರು ಪ್ರದೇಶಗಳ ನಡುವೆ ತಡೆರಾಜ್ಯವಾಗಿ ಕಾರ್ಯ ನಿರ್ವಹಿಸಿದರು.[30]

**ಹೊಯ್ಸಳರು:**

ಹೊಯ್ಸಳರು ಮಲೆನಾಡು ಪ್ರದೇಶದಸೊಸೆವೂರಿಗೆ (ಮೂಡಿಗೆರೆ ತಾಲೂಕಿನ ಅಂಗಡಿಗೆ ಗ್ರಾಮ) ಸೇರಿದವರು. ಅವರು ತಮ್ಮ ರಾಜಧಾನಿಯನ್ನು ಬೇಲೂರಿಗೆ ನಂತರ ಹಳೆಬೀಡಿಗೆ ಬದಲಾಯಿಸಿದರು.ಸಳನು ಹೊಯ್ಸಳ ವಂಶದ ಮೂಲಪುರುಷನಾಗಿದ್ದು ನಂತರ 2ನೇ ನೃಪಕಾಮ (ಕ್ರಿ.ಶ.1000-45), 2ನೇ ವಿನಯಾದಿತ್ಯ (ಕ್ರಿ.ಶ.1045-98) ಎರೆಯಂಗ (ಕ್ರಿ.ಶ.1098-1100) 1ನೇ ಬಲ್ಲಾಳ (ಕ್ರಿ.ಶ.1100-1108) ವಿಷ್ಣುವರ್ದನ (ಕ್ರಿ.ಶ.1108-42) 3ನೇ ವೀರಬಲ್ಲಾಳ (ಕ್ರಿ.ಶ.1292-1343) ಮುಂತಾದವರು ಆಳ್ವಕೆ ನಡೆಸಿದರು.ಹೊಯ್ಸಳರು ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದು ತಮ್ಮ ಅಸ್ಥಿತ್ವವನ್ನು ಉಳಸಿಕೊಳ್ಳಲು ಕಲ್ಯಾಣ ಚಾಲುಕ್ಯರು ಮತ್ತು ಚೋಳರೊಂದಿಗೆ ಹೋರಾಟಗಳನ್ನು ನಡೆಸಬೇಕಾಯಿತು. ಅವಿಭಜಿತ ಬೆಂಗಳೂರು ಜಿಲ್ಲೆಯಲ್ಲಿ ಹೊಯ್ಸಳ ರಾಜವಂಶಕ್ಕೆ ಸೇರಿದ ಸುಮಾರು 200 ಶಾಸನಗಳು ದೊರೆತಿದ್ದು ಅವುಗಳುಕನ್ನಡ ಮತ್ತು ತಮಿಳು ಭಾಷೆಯಲ್ಲಿವೆ.[31]

ಹೊಯ್ಸಳ ವಂಶದ ಹೆಸರಾಂತ ಅರಸನೆಂದರೆ,ವಿಷ್ಣುವರ್ಧನ (ಕ್ರಿ.ಶ.1108-42)ಈತನು ಕ್ರಿ.ಶ.1116-17ರಲ್ಲಿ ಚೋಳರ ಪ್ರಾಂತ್ಯಾಧಿಕಾರಿಯಾದ ಆದಿಯಮ ಮತ್ತು ಚೋಳರ ಸೈನ್ಯಾದಿಕಾರಿಯಾದ ದಾಮೋದರರ ಮೇಲೆ ಗೆಲುವನ್ನು ಸಾಧಿಸಿ ತಲಕಾಡನ್ನು ವಶಪಡಿಸಿಕೊಂಡು ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದನು. ಈ ದಿಗ್ವಿಜಯದ ಜ್ಞಾಪಕಾರ್ಥವಾಗಿ ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ನಿರ್ಮಿಸಿದನು. ಕ್ರಿ.ಶ.1118ರಲ್ಲಿ ಕನ್ನೇಗಾಲ ಕದನದಲ್ಲಿ ಕಲ್ಯಾಣ ಚಾಲುಕ್ಯರ 6ನೇ ವಿಕ್ರಮಾದಿತ್ಯನ ಸೈನ್ಯವನ್ನು ಹಿಮ್ಮೆಟ್ಟಿಸಿದನು ಎಂದು ತಿಳದುಬರುತ್ತದೆ.ಈತನ ಕಾಲದಲ್ಲಿ ರಾಣಿಯಾದ ಶಾಂತಲಾದೇವಿ ಎಂಬುವಳು ಕ್ರಿ.ಶ.1131ರಲ್ಲಿ ಶಿವಗಂಗೆಯಲ್ಲಿ ದುರಂತ ಮರಣವನ್ನು ಹೊಂದಿದಳು.[32]

ಈತನ ಕಾಲದಲ್ಲಿ ಕ್ರಿ.ಶ.1133ರಲ್ಲಿ ಕಾವಗಾಮುಂಡನು ಸಣ್ಣೆನಾಡಿನಲ್ಲಿ ಆಳ್ವಕೆ ನಡೆಸಿದನು. ಈತನ ಕಾಲದ ಕ್ರಿ.ಶ.1133ರ ಶಾಸನವು ಸಣ್ಣೆನಾಡಿನ ಆವತಿಯೂರು ಗ್ರಾಮದ ಜಮೀನ್ದಾರನಾದ ಕಾವಗಾಮುಂಡನ ಮಗನಾದ ಗಂಗರ ಪೆರ್ಗಡೆಯಾದ ಮಚ್ಚಗಾಮುಂಡ ಮತ್ತು ಈತನ ಪೂರ್ವಿಕರು ಗಂಗಕುಟುಂಬಕ್ಕೆ ಸೇರಿದ ಗಾಮುಂಡರ ಬಗ್ಗೆ ಉಲ್ಲೇಖಿಸುತ್ತದೆ.[33]ಈತನ ಕಾಲದಲ್ಲಿ ಸಾಮಂತರು ಮತ್ತು ಗಾವುಂಡರು ತಮ್ಮ ವ್ಯಾಪ್ತಿಯ ಪ್ರದೇಶದಲ್ಲಿ ತಮ್ಮ ಕರ್ತವ್ಯಗಳನ್ನು ಚಲಾಯಿಸುತ್ತಿದ್ದರು ಎಂದು ಇದರಿಂದ ತಿಳದುಬರುತ್ತದೆ.ವಿಷ್ಣುವರ್ಧನನ ನಂತರ ಮಗನಾದ 1ನೇ ನರಸಿಂಹ (ಕ್ರಿ.ಶ.1142-1173) ಎಂಬುವನು ಈ ಪ್ರದೇಶದಲ್ಲಿ ಆಳ್ವಕೆ ನಡೆಸಿದನು.ಈತನಿಗೆ

ಸಂಬಂಧಿಸಿದ ಹಲವಾರು ಶಾಸನಗಳು ಈ ಭಾಗದಲ್ಲಿ ದೊರೆಕಿವೆ, ಈತನ ಕಾಲದಲ್ಲಿ ಹಲವಾರು ದೇವಾಲಯಗಳಿಗೆ ದತ್ತಿಗಳನ್ನು ನೀಡಲಾಯಿತು. 1ನೇ ನರಸಿಂಹನ ನಂತರ ಇವನ ಮಗನಾದ 2ನೇ ಬಲ್ಲಾಳನ (ಕ್ರಿ.ಶ.1173–1220) ಕಾಲದಲ್ಲಿ ಸಾಮ್ರಾಜ್ಯವು ವಿಸ್ತರಿಸಲ್ಪಟ್ಟಿತು. 2ನೇ ಬಲ್ಲಾಳನ ನಂತರ ಈತನ ಮಗನಾದ 2ನೇ ನರಸಿಂಹನು (ಕ್ರಿ.ಶ.1220–1235) ಆಳ್ವಿಕೆ ನಡೆಸಿದನು. ತಮಿಳುನಾಡಿನಲ್ಲಿ ಪಾಂಡ್ಯರು ಮತ್ತು ಚೋಳ ಶಕ್ತಿಗಳು ಕುಸಿಯುತ್ತಿದ್ದ ಸಂದರ್ಭದಲ್ಲಿ ಇವರಿಗೆ ಹೊಯ್ಸಳರ ಬೆಂಬಲವನ್ನು ಅನುಕೂಲಕ್ಕೆ ತಕ್ಕಂತೆ ನೀಡಿದನು. 2ನೇ ನರಸಿಂಹನ ಮಗಳನ್ನು ಚೋಳರಸ 3ನೇ ರಾಜರಾಜನಿಗೆ ಮದುವೆ ಮಾಡಿಕೊಟ್ಟಿರುವುದು ಕಂಡುಬರುತ್ತದೆ. 2ನೇ ನರಸಿಂಹನು ತಮಿಳುನಾಡಿನಲ್ಲಿ ಹೆಚ್ಚಿನ ಅನುಕೂಲತೆಗಳನ್ನು ಪಡೆದುಕೊಂಡನು. ಈತನಿಗೆ ಸಂಬಂಧಿಸಿದ ಶಾಸನಗಳು ಈ ಜಿಲ್ಲೆಯಲ್ಲಿ ದೊರೆಕಿವೆ.[34]

2ನೇ ನರಸಿಂಂಹನ ನಂತರ ಆತನ ಮಗನಾದ ಸೋಮೇಶ್ವರನು (ಕ್ರಿ.ಶ.1235–1253) ರಲ್ಲಿ ಆಳ್ವಿಕೆ ನಡೆಸಿದನು. ಆತನು ಹೆಚ್ಚಿನ ಸಮಯವನ್ನು ತಮಿಳುನಾಡಿನಲ್ಲಿ ಕಳೆದನು ಮತ್ತು ತನ್ನ ರಾಜಧಾನಿಯನ್ನು ಕಣ್ಣಾನೂರು ಕುಪ್ಪಂಗೆ ವರ್ಗಾಯಿಸಿದನು. ಕ್ರಿ.ಶ.1254ರಲ್ಲಿ ಈತನು ಸಾಮ್ರಾಜ್ಯವನ್ನು ವಿಭಜಿಸಿ ತನ್ನ ಹಿರಿಯ ಮಗನಾದ 3ನೇ ನರಸಿಂಹ ಎಂಬುವವನನ್ನು ದ್ವಾರಸಮುದ್ರದಲ್ಲೂ ಆಡಳಿತಗಾರನಾಗಿಯೂ ಮತ್ತು 2ನೇ ಮಗನಾದ ರಾಮನಾಥ ಎಂಬುವನನ್ನು ಕಣ್ಣಾನೂರು ಕುಪ್ಪಂನಲ್ಲಿ ಆಡಳಿತಗಾರನನ್ನಾಗಿ ನೇಮಿಸಿದನು.[35]ನಂತರ ಇದು ದಾಯಾದಿ ಕಲಹಕ್ಕೆ ನಾಂದಿಯಾಯಿತು, ಸೋಮೇಶ್ವರನು ಸ್ವತಃ ರಾಮನಾಥನ ಪ್ರದೇಶದಲ್ಲಿ ಮುಂದುವರೆದನು.

3ನೇ ನರಸಿಂಹ (ಕ್ರಿ.ಶ.1253–92) ಸೋಮೇಶ್ವರನಿಗೆ 3ನೇ ನರಸಿಂಹ ಮತ್ತು ರಾಮನಾಥನೆಂಬ ಮಕ್ಕಳಿದ್ದರು. 3ನೇ ನರಸಿಂಹ ದ್ವಾರಸಮುದ್ರವನ್ನು ಮತ್ತು ರಾಮನಾಥನು ಕಣ್ಣಾನೂರು ಹಾಗೂ ಕುಂದಣಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. 3ನೇ ನರಸಿಂಹನು ತನ್ನ ಆಳ್ವಿಕೆಯ ಕಾಲದಲ್ಲಿ ಉತ್ತರದ ಸೆವುಣರ ಮತ್ತು ಮಲಸಹೋದರ ರಾಮನಾಥ (ಕ್ರಿ.ಶ.1253–1295) ವಿರೋಧವನ್ನು ಎದುರಿಸಬೇಕಾಯಿತು.ಈತನ ಮಲ ಸಹೋದರನನ್ನು ಕಣ್ಣಾನೂರು ಮತ್ತು ತಮಿಳುನಾಡಿನಿಂದ ಹೊರಗಟ್ಟಿದ್ದರಿಂದ ಆತನು ಕೋಲಾರ ಜಿಲ್ಲೆಯ ಕುಂದಣಿಯಲ್ಲಿ ನೆಲೆಸಿದನು. ಬಿ.ಎಲ್.ರೈಸ್‌ರವರು ಅಭಿಪ್ರಾಯಪಡುವಂತೆ ಕುಂದಣಿಯು ರಾಮನಾಥನ ರಾಜಧಾನಿಯಾಗಿದ್ದು ದೇವನಹಳ್ಳಿಯ ಪಶ್ಚಿಮಕ್ಕಿದೆ. ಅದನ್ನು ಪ್ರಸ್ತುತ ಕುಂದಾಣ ಎಂದು ಕರೆಯಲಾಗುತ್ತಿದೆ. ಆದರೆ ಕೆಲವರು ಕುಂದಾಣಿಯನ್ನು ಧರ್ಮಪುರಿ ಜಿಲ್ಲೆ ಹೊಸೂರು ತಾಲೂಕಿನ ಕುಂದಣಿಯೆಂದು ಗುರುತಿಸಿದ್ದಾರೆ.[36]

ಹೊಯ್ಸಳ ರಾಜ್ಯದ ಕರ್ನಾಟಕದ ಭಾಗವನ್ನು ಆಳುತ್ತಿದ್ದ 3ನೇ ನರಸಿಂಹನ ಕಾಲದಲ್ಲಿ ಇವನಿಗೂ ಮತ್ತು ಇವನ ಮಲಸಹೋದರನಾದ ವೀರರಾಮನಾಥನಿಗೂ ಜರುಗಿದ ದಾಯಾದಿ ಕಲಹಗಳಷ್ಟೆ ಪ್ರಮುಖವಾಗಿ ಕಂಡುಬರುತ್ತವೆ.ರಾಮನಾಥನ ಆಳ್ವಿಕೆಯ ಕಾಲದ ಹಲವಾರು ಶಾಸನಗಳು ನೆಲಮಂಗಲ, ಹೊಸಕೋಟೆ, ದೇವನಹಳ್ಳಿ ತಾಲೂಕುಗಳಲ್ಲಿ ಕಂಡುಬಂದಿದ್ದು ಈ ಭಾಗದಲ್ಲಿ ಈತನ ಆಳ್ವಿಕೆಯನ್ನು ದೃಢೀಕರಿಸುತ್ತವೆ. ಇಳೈಪಕ್ಕನಾಡುಗಳು ಇವನ ಆಳ್ವಿಕೆಗೆ ಒಳಪಟ್ಟಿದ್ದವು.[37]

3ನೇ ನರಸಿಂಹನ ನಂತರ ಅವನ ಮಗನಾದ 3ನೇ ವೀರಬಲ್ಲಾಳ (ಕ್ರಿ.ಶ.1292-1343) ಎಂಬುವನು ಆಳ್ವಿಕೆ ನಡೆಸಿದನು. ಇವನು ಅಣ್ಣಾಮಲೈ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದನು.[38]3ನೇ ಬಲ್ಲಾಳನಿಗೆ ಸಂಬಂಧಿಸಿದ ಸುಮಾರು 100ಕ್ಕಿಂತ ಹೆಚ್ಚು ಶಾಸನಗಳು ಈ ಭಾಗದಲ್ಲಿ ದೊರೆತಿದ್ದು ಅವುಗಳು ಆಡಳಿತ ವಿಭಾಗಗಳು ಮತ್ತು ದಾನದತ್ತಿಯ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಇವನ ಕಾಲದಲ್ಲಿ ಬೆಟ್ಟರಸ ದಣ್ಣಾಯಕ ಎಂಬುವನು ಸಾಮಂತ ಅಧಿಕಾರಿಯಾಗಿ ಈ ಭಾಗದಲ್ಲಿ ಆಳ್ವಿಕೆ ನಡೆಸಿದನು.[39]ಈತನು ಚಿಕ್ಕಪ್ಪ ರಾಮನಾಥ ಮತ್ತು ಆತನ ಮಗನಾದ ವಿಶ್ವನಾಥ ಎಂಬುವರ ಪ್ರತಿರೋಧವನ್ನು ಎದುರಿಸಬೇಕಾಯಿತು.

3ನೇ ವೀರಬಲ್ಲಾಳನು ತನ್ನ ಚಿಕ್ಕಪ್ಪ ರಾಮನಾಥನ ಸಾವು (ಕ್ರಿ.ಶ.1295) ಮತ್ತು ಆತನ ಮಗನಾದ ವಿಶ್ವನಾಥನ ಸಾವು (ಕ್ರಿ.ಶ.1300)ಗಳ ನಂತರ ರಾಮನಾಥನ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳನ್ನು ವಶಪಡಿಸಿಕೊಂಡು ಹೋಳಾಗಿದ್ದ ರಾಜ್ಯವನ್ನು ಒಂದೂಗೂಡಿಸಿದನು. ಬಲ್ಲಾಳನು ಮಧುರೈ ಪಾಂಡ್ಯರ ಉತ್ತರಾಧಿಕಾರತ್ವದ ವಿಷಯದಲ್ಲಿ ಹಸ್ತಕ್ಷೇಪ ಮಾಡಲು ತಮಿಳುನಾಡಿಗೆ ಹೋಗಿದ್ದರಿಂದ ರಾಜಧಾನಿಯಲ್ಲಿ ಈತನ ಅನುಪಸ್ಥಿತಿಯು ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕ್ ಕಾಫೂರ್‌ನ ದಾಳಿಗೆ ಅನುವು ಮಾಡಿಕೊಟ್ಟಿತು. ಕ್ರಿ.ಶ.1311ರಲ್ಲಿದ್ವಾರಸಮುದ್ರದ ಮೇಲೆ ದಾಳಿ ಮಾಡಿ ಲೂಟಿ ಹೊಡೆದನು, ಕ್ರಿ.ಶ.1327ರಲ್ಲಿ ಮಹಮದ್-ಬಿನ್-ತುಘಲಕ್‌ನ ಸೇನೆಯು ದ್ವಾರಸಮುದ್ರವನ್ನು ಲೂಟಿ ಮಾಡಿತು 3ನೇ ವೀರಬಲ್ಲಾಳನು ತಮಿಳುನಾಡಿನ ಆರ್ಕಾಟ್ ಜಿಲ್ಲೆಯ ತಿರುವಣಮಲೈಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಕಂಪಿಲ ರಾಜ್ಯದ ಪತನಾನಂತರ ತುಂಗಾಭದ್ರ ನದಿದಂಡೆ ಮೇಲೆ ಹಂಪೆ ಹೊಸಪಟ್ಟಣವನ್ನು ಸ್ಥಾಪಿಸಿದನು, ಈತನು ಮಧುರೈ ಸುಲ್ತಾನನ್ನು ಪದಚ್ಯುತಗೊಳಿಸಲು ಯತ್ನಿಸುತ್ತಿದ್ದಾಗ ಕ್ರಿ.ಶ.1343ರಲ್ಲಿ ಕೊಲ್ಲಲ್ಪಟ್ಟನು ಈತನ ಮಗನಾದ

ವಿರೂಪಾಕ್ಷ ಬಲ್ಲಾಳನು ಅಧಿಕಾರಕ್ಕೆ ಬಂದು ಸ್ವಲ್ಪಕಾಲ ಆಳ್ವಿಕೆ ನಡೆಸಿ ಕ್ರಿ.ಶ.1348ರಲ್ಲಿ ನಿಧನ ಹೊಂದಿದನು ಇದರಿಂದಾಗಿ ಹೊಯ್ಸಳರ ಆಳ್ವಿಕೆಯು ಅಂತ್ಯಗೊಂಡಿತು.[40]

**ವಿಜಯನಗರ ಸಾಮ್ರಾಜ್ಯದ ಅರಸರು**

ಹೊಯ್ಸಳರ ಪತನನಂತರ ಕ್ರಿ.ಶ.1336ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ಹರಿಹರ ಮತ್ತು ಬುಕ್ಕರಾಯರು (ಹಕ್ಕ-ಬುಕ್ಕ) ಎಂಬುವರು ಈ ಸಾಮ್ರಾಜ್ಯದ ಸ್ಥಾಪಕರು. ವಿಜಯನಗರ (ಹಂಪಿ) ಈ ಸಾಮ್ರಾಜ್ಯದ ರಾಜಧಾನಿ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳು ಈ ಸಾಮ್ರಾಜ್ಯವನ್ನು ಆಳಿವೆ. ಈ ಸಾಮ್ರಾಜ್ಯವು ಕ್ರಿ.ಶ.1565ರಲ್ಲಿ ತಾಳಿಕೋಟೆ ಕದನದಲ್ಲಿ ಪತನವಾಯಿತು ಅನಂತರ ಪೆನುಗೊಂಡೆಗೆ ಅವರ ರಾಜಧಾನಿ ಸ್ಥಳಾಂತರವಾಯಿತು.ಈ ಸಾಮ್ರಾಜ್ಯವು ಕಲೆ ಮತ್ತು ವಾಸ್ತುಶಿಲ್ಪ, ಸಾಹಿತ್ಯ, ಸಂಗೀತ ಮುಂತಾದ ಕ್ಷೇತ್ರಗಳನ್ನು ಪ್ರೋತ್ಸಾಹಿಸಿತು. ವಿಜಯನಗರ ಕಾಲದಲ್ಲಿ ಹಲವಾರು ಸೀಮೆ/ನಾಡುಗಳು ಅಸ್ಥಿತ್ವದಲ್ಲಿದ್ದವು. ಸಾಮಂತರು ಹಾಗೂ ಅಮರನಾಯಕರು ಸರ್ಕಾರದ ಪರವಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ವಿಜಯನಗರ ಕಾಲಕ್ಕೆ ಸೇರಿದ ಸುಮಾರು 200 ಶಾಸನಗಳು ಬೆಂಗಳೂರು ಜಿಲ್ಲೆಯಲ್ಲಿ ದೊರೆತಿವೆ.[41]ಈ ಭಾಗದಲ್ಲಿ ವಿಜಯನಗರ ಅರಸರ ಆಳ್ವಿಕೆಯನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಸಂಗಮವಂಶ:-** ಸಂಗಮವಂಶದ 1ನೇ ಹರಿಹರನು (ಕ್ರಿ.ಶ.1336-56) ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. ಈತನಿಗೆ ಸಂಬಂಧಿಸಿದ ದಾಖಲೆಗಳು ಈ ಭಾಗದಲ್ಲಿ ದೊರೆಯುತ್ತವೆ. ಹರಿಹರ ಮತ್ತು ಬುಕ್ಕರಾಯರು ಜೊತೆಗೂಡಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ[42]ಹರಿಹರನ ಸಹೋದರರಾದ ಕಂಪಣ್ಣನು ನಲ್ಲೂರಿನ ಗೌರ್ವನರಾಗಿಯೂ ಮಾರಪ್ಪನು ಚಂದ್ರಗುತ್ತಿ (ಶಿವಮೊಗ್ಗ ಜಿಲ್ಲೆ) ಮತ್ತು ಮುದ್ದಪ್ಪನು ಮುಳುಬಾಗಿಲನಲ್ಲಿ ಅಧಿಕಾರಕ್ಕೆ ಬಂದರು ಹರಿಹರನಿಗೆ 'ಚತುಸ್ತಮುದ್ರಾದಪತಿ' ಎಂಬು ಬಿರುದಿತ್ತು. ಹರಿಹರನ ಸಾಮಂತರಾಗಿ ಹಲವರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು. ಕ್ರಿ.ಶ.1346ರ ದಾಖಲೆಯು ಮಹಾಮಾಂಡಲೇಶ್ವರ ಹರಿಯಪ್ಪ ಒಡೆಯ ಮತ್ತು ಆತನ ಸಾಮಂತನಾದ ವಲ್ಲಪ್ಪರ ಬಗ್ಗೆ ತಿಳಸುತ್ತದೆ.[43]ವಲ್ಲಪ್ಪನು ಹರಿಹರನ ಅಳಿಯನಾಗಿದ್ದು ಹೊಯ್ಸಳರ ಮಾಜಿ ಅಧಿಕಾರಿಯಾಗಿದ್ದನು.

ಹರಿಹರನ ಸಾಮಂತರಾಗಿಕ್ರಿ.ಶ.1348ರಲ್ಲಿ ಮಹಾಎಲಕ್ಕನಾಡು ಪ್ರಭು ಬೈರೀದೇವ ಎಂಬುವರು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. ಯಲಹಂಕ ನಾಡಪ್ರಭು ಬೈರೀದೇವನಿಗೆ

ಸಾಮಂತಾಧಿಪತಿ ಮತ್ತು ಮೈಲೇಯನಾಯಕ ಎಂಬ ಬಿರುದುಗಳಿದ್ದವು. ಇವು ಸಾಮಂತತನವನ್ನು ಸೂಚಿಸುತ್ತವೆ. ಈತನು ಕೊಡಿಗೆಹಳ್ಳಿ ಗ್ರಾಮವನ್ನು ಸರ್ವಮಾನ್ಯ ಕೊಡುಗೆಯನ್ನಾಗಿ ಚಿಕ್ಕಶೆಟ್ಟಿಯ ಮಗ ಕರಿಯನಾಯಕನಿಗೆ ದಾನ ನೀಡಿದನು. ಇದು ಉಪಸಾಮಂತತನವನ್ನು ಸೂಚಿಸುತ್ತದೆ.[44] 1ನೇ ಹರಿಹರನ ಕಾಲದಲ್ಲಿ ಕ್ರಿ.ಶ.1352ರಲ್ಲಿ ಅಂಜದುನಾಡುವಿನ ವಡಿಗೇನಹಳ್ಳಿಯಲ್ಲಿ ಮಂತ್ರಿ ನಾಗಣ್ಣ ಡಣ್ಣಾಯಕ ಒಡೆಯರ್‌ನು ಆಳುತ್ತಿರುವಾಗ, ಬಾಲವಂಕಿ ದರಣಿಕಿಯ ನಾಯಕನ ಮಗನಾದ ತಮ್ಮೆಯನಾಯಕ ಎಂಬುವನು ಗವರೇಶ್ವರ ದೇವರಿಗೆ ದತ್ತಿ ನೀಡಿದನು.[45] ಈ ಶಾಸನದಲ್ಲಿ ನಮೂದಿಸಲ್ಪಟ್ಟಿರುವ ಡಣ್ಣಾಯಕ ಮತ್ತು ಒಡೆಯ ಎಂಬ ಬಿರುದುಗಳು ಮುಖ್ಯ ಸಾಮಂತತನವನ್ನು ಸೂಚಿಸುತ್ತವೆ.

1ನೇ ಬುಕ್ಕರಾಯ (ಕ್ರಿ.ಶ.1356-77) 1ನೇ ಹರಿಹರನಿಗೆ ಮಕ್ಕಳಿಲ್ಲದಿದ್ದರಿಂದ, ಈತನ ತಮ್ಮನಾದ 1ನೇ ಬುಕ್ಕನು ಕ್ರಿ.ಶ.1356-57ರಲ್ಲಿ ಅಧಿಕಾರಕ್ಕೆ ಬಂದನು ಈತನು 1ನೇ ಹರಿಹರನ ಜೊತೆಗೂಡಿ ಕ್ರಿ.ಶ.1345ರಿಂದ ಆಳ್ವಿಕೆ ನಡೆಸಿದನು ಈ ಭಾಗದಲ್ಲಿ ಈತನಿಗೆ ಸಂಬಂಧಿಸಿದ ದಾಖಲೆಗಳು ದೊರೆಯುತ್ತವೆ. ಇವನ ಸಾಮಂತನಾಗಿ ಯಲಹಂಕ ನಾಡಪ್ರಭು ಬೈರಿದೇವ ಎಂಬುವನು ಆಳ್ವಿಕೆ ನಡೆಸಿದನು.[46] ಇದನ್ನು ಮೇಲೆಯೂ ಗಮನಿಸಲಾಗಿದೆ.

1ನೇ ಬುಕ್ಕರಾಯನ ಕಾಲದ ಕಲ್ಯಶಾಸನವುಹೆಚ್ಚು ಪ್ರಸಿದ್ಧವಾದುದು. ಕ್ರಿ.ಶ.1368ರಲ್ಲಿ ಶ್ರೀ ವೈಷ್ಣವರು ಮತ್ತು ಜೈನರ ನಡುವಣ ಕಲಹವನ್ನು ಬಗೆಹರಿಸಿದ ಬಗ್ಗೆ ಕಲ್ಯಶಾಸನವು ಉಲ್ಲೇಖಿಸುತ್ತದೆ.[46a] ಇದೇ ಅಂಶವನ್ನು ಒಳಗೊಂಡ ಶ್ರವಣಬೆಳಗೊಳ ಶಾಸನಕ್ಕಿಂತ ಈ ಶಾಸನವು ಮುಂಚಿತವಾದುದು.[47] 1ನೇ ಬುಕ್ಕರಾಯನ ಆಳ್ವಿಕೆಯ ದತ್ತಿ ಶಾಸನಗಳು ಈ ಭಾಗದಲ್ಲಿ ದೊರಕಿವೆ.[48] 1ನೇ ಬುಕ್ಕರಾಯನಿಗೆ ಮಲ್ಲಪ್ಪ ಒಡೆಯ, ಕಂಪಣ್ಣ ಒಡೆಯ ಮತ್ತು ಎರಡನೇ ಹರಿಹರ ಎಂಬ ಮಕ್ಕಳಿದ್ದರು. 1ನೇ ಬುಕ್ಕರಾಯನ ನಂತರ ಮಗನಾದ ಮಲ್ಲಪ್ಪ ಒಡೆಯರ್‌ನ ಆಳ್ವಿಕೆಯು ಈಭಾಗದಲ್ಲಿ ಮುಂದುವರೆಯಿತು. ಮಲ್ಲಪ್ಪ ಒಡೆಯನ ನಂತರ ಅವರ ಸಹೋದರನಾದ ಕಂಪಣ್ಣ ಒಡೆಯರ್ ಇಲ್ಲಿನ ಆಡಳಿತವನ್ನು ನಿರ್ವಹಿಸಿದನು, ಈತನು ಬೆಂಗಳೂರು ಭಾಗಗಳನ್ನು ನೋಡಿಕೊಳ್ಳುತ್ತಿದ್ದನು. ಕಂಪಣ್ಣ ಒಡೆಯರ್ ನಂತರ ಈತನ ತಮ್ಮನಾದ 2ನೇ ಹರಿಹರನು (ಕ್ರಿ.ಶ.1377-1404) ಎಂಬುವನು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. 2ನೇ ಹರಿಹರನ ಮಗನಾದ ವಿರೂಪಾಕ್ಷನ (ಕ್ರಿ.ಶ.1404-05) ಶಾಸನಗಳು ಈ ಭಾಗದಲ್ಲಿ ಕಂಡುಬಂದಿಲ್ಲ 2ನೇ ಹರಿಹರನ ಮಗನಾದ 2ನೇ ಬುಕ್ಕ (ಕ್ರಿ.ಶ.1405-006) ಎಂಬುವನು ತನ್ನ ತಂದೆಯ ಕಾಲದಲ್ಲಿ ಮುಳಬಾಗಿಲನ ಗವರ್ನರ್‌ಆಗಿ ಆಳ್ವಿಕೆ ನಡೆಸಿದನು.

2ನೇ ಬುಕ್ಕರಾಯನ ನಂತರ ಈ ಪ್ರದೇಶವು ಅವನ ಸಹೋದರನಾದ 1ನೇ ದೇವರಾಯನ ಆಳ್ವಿಕೆಗೆ ಒಳಪಟ್ಟಿತು.[49]

**1ನೇ ದೇವರಾಯ:** (ಕ್ರಿ.ಶ.1406-22) ಹರಿಹರನ 3ನೇ ಮಗನಾದ 1ನೇ ದೇವರಾಯನ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿತು. ಈತನ ಕಾಲದಲ್ಲಿ ಇಟಲಿಯ ಪ್ರವಾಸಿಗ ನಿಕೊಲೊ ಕೊಂಟಿ ಎಂಬುವನು ವಿಜಯನಗರಕ್ಕೆ ಭೇಟಿ ನೀಡಿ, ರಾಜದಾನಿಯು 60 ಮೈಲಿ ಸುತ್ತಳತೆಯನ್ನು ಹೊಂದಿದೆ ಎಂದು ವರ್ಣಿಸಿದ್ದಾನೆ. ಈತನ ಆಳ್ವಿಕೆಗೆ ಸಂಬಂಧಿಸಿದಂತೆ ಹಲವಾರು ದಾಖಲೆಗಳು ಈ ಭಾಗದಲ್ಲಿ ದೊರಕಿವೆ. ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ. ಈತನ ಕಾಲದಲ್ಲಿ ಕ್ರಿ.ಶ.1407ರಲ್ಲಿ ಅಂಜದುನಾಡುವಿನ ತಿಮ್ಮನಾಯಕನೆಂಬುವನು ಮಂಗಸಂದ್ರದಲ್ಲಿ ಅಗ್ರಹಾರವನ್ನು ನಿರ್ಮಿಸಿದನು.[50]ಈತನ ಮಂತ್ರಿಯಾದ ಯಲಹಂಕ ನಾಡುವಿನ ಹಿರಣ ದಣ್ಣನಾಯಕ ಎಂಬುವನು ಪಾಠಶಾಲೆ ನಿರ್ವಹಣೆಗೋಸ್ಕರ ದೇವರಾಯ ಸಮುದ್ರ ಎಂಬ ಗ್ರಾಮವನ್ನು ದತ್ತಿ ನೀಡಿದನು[51]ದೇವರಾಯನ ಉತ್ತರಾಧಿಕಾರಿಯಾಗಿ ಮಗನಾದ ರಾಮಚಂದ್ರ ಅಥವಾ ತಮ್ಮರಾಯ (ಕ್ರಿ.ಶ.1422) ಎಂಬುವನು ಅಲ್ಪ ಅವಧಿಗೆ ಆಳ್ವಿಕೆ ನಡೆಸಿದನು. ಈತನನ್ನು ಈತನ ಕಿರಿಯ ಸಹೋದರನಾದ ವಿಜಯರಾಯ (3ನೇ ಬುಕ್ಕ-ಕ್ರಿ.ಶ.1422-24) ಎಂಬುವನು ಹತ್ತಿಕ್ಕಿ ಅಧಿಕಾರಕ್ಕೆ ಬಂದನು.

**ಪ್ರೌಢ ದೇವರಾಯ/2ನೇ ದೇವರಾಯ (ಕ್ರಿ.ಶ.1424-44):**

ವಿಜಯರಾಯನ ನಂತರ 2ನೇ ದೇವರಾಯನು/ಪ್ರೌಢದೇವರಾಯನು ಅಧಿಕಾರಕ್ಕೆ ಬಂದನು. ಈತನು ಸಂಗಮವಂಶದ ಅರಸರಲ್ಲೇ ಸಮರ್ಥನಾದ್ದು ಈತನ ಕಾಲದಲ್ಲಿ ಕ್ರಿ.ಶ.1441ರಲ್ಲಿ ಪರ್ಶಿಯಾದ ಹಖ್‌ಷಾನ ರಾಯಭಾರಿಯಾದ ಅಬ್ದುಲ್ ರಜಾಕ್ ಎಂಬುವನು ವಿಜಯನಗರಕ್ಕೆ ಭೇಟಿನೀಡಿ ವಿಜಯನಗರದ ವೈಭವದ ಬಗ್ಗೆ ವರ್ಣಿಸಿದ್ದಾನೆ[52]ಈ ಜಿಲ್ಲೆಮತ್ತು ತಾಲೂಕಿನಲ್ಲಿ 2ನೇ ದೇವರಾಯನ ಕಾಲಕ್ಕೆ ಸಂಬಂಧಿಸಿದ ಆರಂಭಿಕ ದಾಖಲೆಯು ದೇವನಹಳ್ಳಿಯ ತಾಮ್ರಪಟ ಶಾಸನವಾಗಿದ್ದು ಈ ಶಾಸನದಲ್ಲಿ ಕ್ರಿ.ಶ.1425ರಲ್ಲಿ ವೈದ್ಯ ಕೇಶವ ಪಂಡಿತ ಎಂಬುವನಿಗೆ 'ಯಲತೊರೆ' ಗ್ರಾಮವನ್ನು ಅಗ್ರಹಾರವನ್ನಾಗಿ ದತ್ತಿ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.[53]2ನೇ ದೇವರಾಯನ ನಂತರ ಅಧಿಕಾರಕ್ಕೆ ಬಂದ ಅರಸರು ದುರ್ಬಲರಾಗಿದ್ದರು ಈತನ ಕಿರಿಯ ತಮ್ಮನಾದ ವಿಜಯ ದೇವರಾಯ (ಕ್ರಿ.ಶ.1446-47) ಎಂಬುವನು ಅಲ್ಪಾವಧಿಗೆ ಆಳ್ವಿಕೆ ನಡೆಸಿದನು. 2ನೇ ದೇವರಾಯನ ಮಗನಾದ ಮಲ್ಲಿಕಾರ್ಜುನ ಅಥವಾ 3ನೇ ದೇವರಾಯ (ಕ್ರಿ.ಶ.1447-65) ಎಂಬುವನು ಆಳ್ವಿಕೆ ನಡೆಸಿದನು.

ಮಲ್ಲಿಕಾರ್ಜುನನ ನಂತರ ಅವನ ಚಿಕ್ಕಪ್ಪನಾದ 2ನೇ ವಿರೂಪಾಕ್ಷನ (ಕ್ರಿ.ಶ.1465-82) ಅಧೀನಕ್ಕೆ ಈ ಪ್ರದೇಶವು ಒಳಪಟ್ಟಿತು. ಕ್ರಿ.ಶ.1467ರ ಶಾಸನವು ಕಜಗಿ ಅಮರನಾಯಕನನ್ನು ಉಲ್ಲೇಖಿಸಿದ್ದು ಈತನು ತನ್ನ ಸ್ವಾಮಿಗೆ ನಿಷ್ಠೆಯನ್ನು ವ್ಯಕ್ತಪಡಿಸಿದ್ದಾನೆ. ಈತನು ತನ್ನ ಅಧೀನವರ್ತಿಯಾದ ಜಾಲದ ಭೀಮಸೆಟ್ಟಿ ಎಂಬುವನಿಗೆ ದತ್ತಿ ನೀಡಿದನು.[54]ಇದು ಉಪ ಸಾಮಂತತನವನ್ನು ಸೂಚಿಸುತ್ತದೆ.

**ಸಾಳವ ವಂಶ**: ಸಂಗಮ ವಂಶದ ಕೊನೆಯ ಅರಸರು ಅಸಮರ್ಥರಾಗಿದ್ದರಿಂದ ಸಾಳವ ವಂಶದ 1ನೇ ನರಸಿಂಹನು (ಕ್ರಿ.ಶ.1485-91) ಸಾಮ್ರಾಜ್ಯವನ್ನು ರಕ್ಷಿಸಿ ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. ಈತನು ಚಂದ್ರಗಿರಿಯ ಗವರ್ನರ್ ಆಗಿದ್ದನು. ಕ್ರಿ.ಶ.1491ರಲ್ಲಿ ಸಾಳ್ವ 1ನೇ ನರಸಿಂಹನ ಮರಣ ನಂತರ ಆತನ ನಂಬಿಕಸ್ಥ ದಂಡನಾಯಕನಾದ ನರಸಣ್ಣ ನಾಯಕ ಎಂಬುವನು ಅಪ್ರಾಪ್ತ ವಯಸ್ಕ ಮಕ್ಕಳ ಪ್ರತಿನಿಧಿಯಾಗಿ ಆಡಳಿತ ಸೂತ್ರವನ್ನು ನಿರ್ವಹಿಸಿದನು. 1ನೇ ನರಸಿಂಹನ ನಂತರ 1ನೇ ಮಗನಾದ ತಿಮ್ಮ ಎಂಬುವನು ರಾಜನೆಂದು ಘೋಷಿಸಿಕೊಂಡನು, ಆದರೆ ಕೊಲಲ್ಪಟ್ಟನು. ಈತನ ನಂತರ 1ನೇ ನರಸಿಂಹನ ಮಗನಾದ 2ನೇ ನರಸಿಂಹನು (ಕ್ರಿ.ಶ.1491-1505) ಎಂಬುವನು ಆಳ್ವಿಕೆ ನಡೆಸಿದನು. ನರಸನಾಯಕನು ರಾಜ ಪ್ರತಿನಿಧಿಯಾಗಿ ಮುಂದುವರೆದನು.[55]

**ತುಳುವ ವಂಶ**: ನರಸನಾಯಕನು ತುಳುವ ವಂಶದ ಆಳ್ವಿಕೆಗೆ ಅಸ್ಥಿಭಾರ ಹಾಕಿದನು (ಕ್ರಿ.ಶ.1503-1505) ಈತನ ನಂತರ ಈ ಪ್ರದೇಶವು ಇವನ ಮಗನಾದ ವೀರನರಸಿಂಹನ ಆಳ್ವಿಕೆಗೆ ಒಳಪಟ್ಟಿತು. (ಕ್ರಿ.ಶ.1505-1509) ಇವನಿಗೆ ಭುಜಬಲರಾಯ ಎಂಬ ಬಿರುದಿತ್ತು. ವೀರನರಸಿಂಹನ ನಂತರ ಈ ಪ್ರದೇಶವು ಈತನ ಸಹೋದರನಾದ ಶ್ರೀಕೃಷ್ಣದೇವರಾಯನ ಆಳ್ವಿಕೆಗೆ ಒಳಪಟ್ಟಿತು.

**ಕೃಷ್ಣದೇವರಾಯ**: (ಕ್ರಿ.ಶ.1509-1929) ಈತನು ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ಸಾಮ್ರಾಟ. ಈತನು ತನ್ನ ಮಲಸಹೋದರನೊಂದಿಗೆ ಕ್ರಿ.ಶ.1509ರ ಪೂರ್ವದಲ್ಲಿ ಆಳ್ವಿಕೆ ನಡೆಸಿದನು. ಈತನು ಬಿಜಾಪುರದ ಯೂಸೂಫ್ ಆದಿಲ್ ಷಾಹಿಯನ್ನು ಸೋಲಿಸಿದನು, ಕ್ರಿ.ಶ.1512-13ರಲ್ಲಿ ಉಮ್ಮತ್ತೂರನ್ನು ವಶಪಡಿಸಿಕೊಂಡನು, ಶ್ರೀರಂಗಪಟ್ಟಣದ ಸಾಮಂತನೊಬ್ಬನ ಮಗಳಾದ ತಿರುಮಲಾದೇವಿಯನ್ನು ವರಿಸಿದನು. ಒರಿಸ್ಸಾದ ಗಜಪತಿಯ ರಾಜಧಾನಿ ಕಟಕ್‌ನ್ನುವಶಪಡಿಸಿಕೊಂಡು ಗಜಪತಿಯ ಮಗಳಾದ ಜಗನ್ಮೋಹಿನಿಯನ್ನು ವರಿಸಿದನು, ಗುಲಬರ್ಗಾವನ್ನು ಪ್ರವೇಶಿಸಿ ಬಹಮನಿ ಸುಲ್ತಾನನ್ನು ಅಧಿಕಾರಕ್ಕೆ ತಂದು, ಯವನರಾಜ್ಯ

ಪ್ರತಿಷ್ಠಾಪನಚಾರ್ಯ ಎಂಬ ಬಿರುದನ್ನು ಗಳಿಸಿದನು. ಈತನ ಕಾಲದಲ್ಲಿ ವಿದೇಶಿ ಪ್ರವಾಸಿಗರಾದ ಪೋರ್ಚುಗಲ್‌ನ ಬಾರ್ಬೋಸ ಮತ್ತು ಡೊಮಿಂಗೊ ಪಯಸ್ ಎಂಬುವರು ವಿಜಯನಗರಕ್ಕೆ ಭೇಟಿ ನೀಡಿದ್ದರು. ಇವರ ಬರಹಗಳು ವಿಜಯನಗರ ಸಾಮ್ರಾಜ್ಯದ ಇತಿಹಾಸದ ರಚನೆಗೆ ಉಪಯುಕ್ತವಾಗಿವೆ. ಈತನ ಕಾಲದಲ್ಲಿ ವಿಜಯನಗರವು ಎಲ್ಲಾ ಕ್ಷೇತ್ರಗಳಲ್ಲಿ ಪ್ರಗತಿ ಕಂಡಿತು.[56]

**ಅಚ್ಯುತರಾಯ:(ಕ್ರಿ.ಶ.1529-42)** ಕೃಷ್ಣದೇವರಾಯನ ಮಲಸಹೋದರನಾದ ಅಚ್ಯುತರಾಯನು ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. ಈತನು ಗಜಪತಿ ಮತ್ತು ಗೋಲ್ಕೊಂಡ ಸುಲ್ತಾನನೊಂದಿಗೆ ಹೋರಾಟಗಳನ್ನು ನಡೆಸಬೇಕಾಯಿತು. ಈತನ ಕಾಲದಲ್ಲಿ ಹಲವಾರು ಸಾಮಂತರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು. ಈತನ ಕಾಲದಲ್ಲಿ ಪೋರ್ಚುಗೀಸ್ ಪ್ರವಾಸಿಗನಾದ ನ್ಯೂನೀಜ್ ಎಂಬುವನು ವಿಜಯನಗರಕ್ಕೆ ಭೇಟಿ ನೀಡಿದ್ದನು. ಕ್ರಿ.ಶ.1542ರಲ್ಲಿ ಅಚ್ಯುತರಾಯನ ನಿಧನ ನಂತರ ಮಗನಾದ ವೆಂಕಟನು ಅಧಿಕಾರಕ್ಕೆ ಬಂದನು ಆದರೆ ಕೊಲಲ್ಪಟ್ಟನು. ನಂತರ ಅಚ್ಯುತರಾಯನ ತಮ್ಮನಾದ ಶ್ರೀರಂಗನ ಮಗನಾದ ಸದಾಶಿವರಾಯನು ಕ್ರಿ.ಶ.1543ರಲ್ಲಿ ಅಧಿಕಾರಕ್ಕೆ ಬಂದನು ಈತನು ಕ್ರಿ.ಶ.15433-1570ರವರೆಗೆ ಆಳ್ವಿಕೆ ನಡೆಸಿದನು. ಈತನು ಹೆಸರಿಗೆ ಮಾತ್ರ ಚಕ್ರವರ್ತಿಯಾಗಿದ್ದು ಅಧಿಕಾರವು ಅಳಿಯ ರಾಮರಾಯ ಮತ್ತು ಆತನ ತಮ್ಮಂದಿರಾದ ಅಳಿಯ ತಿರುಮಲ ಮತ್ತು ವೆಂಕಟಾದ್ರಿರವರ ಕೈಯಲ್ಲಿತ್ತು.[57]

ಅಳಿಯ ರಾಮರಾಯನು ಉತ್ತಮ ಆಡಳಿತಗಾರ ಮತ್ತು ರಾಜನೀತಿಜ್ಞ. ಈತನು ದಖನ್ನಿನ ಷಾಹಿ ರಾಜ್ಯಗಳ ವಿಷಯಗಳಲ್ಲಿ ಹಸ್ತಕ್ಷೇಪ ಮಾಡಿದನು, ಈ ಹಿಂದಿನ ಅಧಿಕಾರಿಗಳ ಬದಲಾಗಿ ತನಗೆ ಬೇಕಾದವರನ್ನು ನೇಮಿಸಿಕೊಂಡನು. ಇದು ಸಾಮ್ರಾಜ್ಯವನ್ನು ಆಡಳಿತದಲ್ಲಿ ದುರ್ಬಲಗೊಳಿಸಿತು, ವಿಜಯನಗರ ಸಾಮ್ರಾಜ್ಯವನ್ನು ಉತ್ತರದಲ್ಲಿ ಕೃಷ್ಣಾನದಿಯ ತನಕ ವಿಸ್ತರಿಸಿದನು. ಕ್ರಿ.ಶ.1565ರಲ್ಲಿ ಜರುಗಿದ ತಾಳಿಕೋಟೆ (ರಕ್ಕಸ-ತಂಗಡಿ) ಕದನದಲ್ಲಿ ಷಾಹಿರಾಜ್ಯಗಳು ವಿಜಯನಗರವನ್ನು ಸೋಲಿಸಿದವು. ರಾಮರಾಯನು ಯುದ್ಧದಲ್ಲಿ ಕೊಲಲ್ಪಟ್ಟನು. ಪರಿಣಾಮವಾಗಿ ಇವನ ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿರವರು ಸದಾಶಿವನೊಂದಿಗೆ ಪೆನುಗೊಂಡಕ್ಕೆ ಪಲಾಯನ ಮಾಡಿದರು, ವಿಜಯನಗರವು ಡೆಕ್ಕನ್ ಸುಲ್ತಾನರಿಂದ ಲೂಟಿಗೆ ಮತ್ತು ಹಾನಿಗೊಳಗಾಯಿತು, ತಿರುಮಲನು ಪೆನುಗೊಂಡದಿಂದ ಆಳ್ವಿಕೆಯನ್ನು ಪ್ರಾರಂಭಿಸಿದನು. ಅರವೀಡು ವಂಶದ 6 ಅರಸರು ಪೆನುಗೊಂಡದಿಂದ ನಂತರ ಚಂದ್ರಗಿರಿ ಮತ್ತು ಅಂತಿಮವಾಗಿ ಕ್ರಿ.ಶ.1646ರವರೆಗೆ ವೇಲೂರು (ತಮಿಳುನಾಡು) ನಿಂದ ಆಳ್ವಿಕೆ ನಡೆಸಿದರು. ಅವರೆಂದರೆ 1ನೇ ಶ್ರೀರಂಗ (ಕ್ರಿ.ಶ.1572-86) 1ನೇ ವೆಂಕಟ (ಕ್ರಿ.ಶ.1586-1614)

2ನೇ ಶ್ರೀರಂಗ (ಕ್ರಿ.ಶ.1614) ರಾಮದೇವ (ಕ್ರಿ.ಶ.1617-32) 2ನೇ ವೆಂಕಟ (ಕ್ರಿ.ಶ.1632-42) 3ನೇ ಶ್ರೀರಂಗ (ಕ್ರಿ.ಶ.1642-46) ಎಂಬುವರು ಆಳ್ವಿಕೆ ನಡೆಸಿದರು.[58]

ರಾಮರಾಯ ಮತ್ತು ಸದಾಶಿವರಾಯರಿಗೆ ಸಂಬಂಧಿಸಿದಂತೆ ಶಾಸನಗಳು ಈ ಭಾಗದಲ್ಲಿ ದೊರಕಿವೆ. ವಿಜಯನಗರದ ಅರವೀಡು ವಂಶಸ್ಥರು ತಾಳಿಕೋಟೆ ಕದನ ನಂತರ ಪೆನುಗೊಂಡದಿಂದ ಆಳ್ವಿಕೆಯನ್ನು ಪ್ರಾರಂಭಿಸಿದರು. 2ನೇ ವೆಂಕಟಪತಿ ಕಾಲದಲ್ಲಿ (ಕ್ರಿ.ಶ.1576-1614) ಕಾಲದಲ್ಲಿ ಆವತಿನಾಡುವಿನ 2ನೇ ಹಾವಳ ಬೈರಪ್ಪಗೌಡ ಎಂಬುವನು ಸಾಮಂತನಾಗಿ ಈ ಭಾಗದಲ್ಲಿ ಆಳ್ವಿಕೆ ನಡೆಸಿದನು[59]3ನೇ ಶ್ರೀರಂಗರಾಯ (ಕ್ರಿ.ಶ.1642-1646) ನ ಅಧೀನಕ್ಕೆ ಈ ಪ್ರದೇಶವು ಒಳಪಟ್ಟಿತು. ಇವನು ಈ ವಂಶದ ಮತ್ತು ಸಾಮ್ರಾಜ್ಯದ ಕಟ್ಟಕಡೆಯ ಅರಸ. ಬೆಂಗಳೂರು ಆಡಳತಗಾರರು (ಕೆಂಪೇಗೌಡನ ಕುಟುಂಬಸ್ಥರು) ಶ್ರೀರಂಗನನ್ನು ಉಲ್ಲೇಖಿಸಿದ್ದು ಬೆಂಗಳೂರು, ಮಾಗಡಿ, ಸುಗಟೂರು, ಚನ್ನಪಟ್ಟಣ ಮತ್ತು ಆವತಿಯವರು ತಮ್ಮ ಪ್ರದೇಶಗಳಲ್ಲಿ ಈ ಸಾಮ್ರಾಜ್ಯ ಪತನ ನಂತರ ತಮ್ಮ ಆಳ್ವಿಕೆಯನ್ನು ಮುಂದುವರೆಸಿದರು.[60]

**ಯಲಹಂಕ ನಾಡಪ್ರಭುಗಳು:**

ಪ್ರಾಚೀನ ಕಾಲದ ಕರಿಕನಾಡನ್ನು ಕೇಂದ್ರವಾಗಿಟ್ಟುಕೊಂಡು ಕುಕ್ಕರಿಪಾರಿಕ್ಕಾರಿನಾಡು, ಕುಕ್ಕನೂರು, ತೊರವಳನಾಡುಗಳು ಹಾಗೂ ಮಾಶಂಡಿ ಮತ್ತು ಬೆಂಪೂರು ನಾಡುಗಳ ಹಲವು ಪ್ರದೇಶಗಳನ್ನೊಳಗೊಂಡಂತೆ "ಎಲಹಂಕ ನಾಡು" ಚೋಳರ ಆಳ್ವಿಕೆಯ ಕಾಲದಲ್ಲಿ ರೂಪುಗೊಂಡಿತ್ತು. ಬೆಂಗಳೂರು ಸಮೀಪದ ಯಲಹಂಕ ಈ ನಾಡಿನ ಕೇಂದ್ರಸ್ಥಾನವಾಗಿತ್ತು. ಎಲಹಂಕ ನಾಡಿನಲ್ಲಿ ಇಂದಿನ ಬೆಂಗಳೂರಿನ ಬಹುಭಾಗವು ಸೇರಿದಂತೆ, ಬೆಂಗಳೂರು ಉತ್ತರ ತಾಲೂಕು, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ತಾಲೂಕುಗಳಲ್ಲಿನ ಅನೇಕ ಗ್ರಾಮಗಳು ಅಂತರ್ಗತವಾಗಿದ್ದವು ಎಂಬ ಅಂಶವನ್ನು ಶಾಸನಗಳು ದೃಢಪಡಿಸುತ್ತವೆ.[61]

ಎಲಹಂಕನಾಡನ್ನು ಉಲ್ಲೇಖಿಸುವ ಸುಮಾರು 65 ಶಾಸನಗಳು ಈ ಜಿಲ್ಲೆಯಲ್ಲಿ ಕಂಡುಬಂದಿದು ಇವು ಸುಮಾರು 40 ಗ್ರಾಮಗಳಲ್ಲಿ ದೊರಕಿರುತ್ತವೆ. ಈ ಶಾಸನಗಳಲ್ಲಿ ಎಲಹಂಕನಾಡಿಗೆ ಸೇರಿದ ಬೆಂಗಳೂರು, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ, ಹೊಸಕೋಟೆ ಮತ್ತು ಮಾಗಡಿ ತಾಲೂಕುಗಳ ಗ್ರಾಮಗಳ ಬಗ್ಗೆ ಉಲ್ಲೇಖವಾಗಿದ್ದು ಇದರಲ್ಲಿ ದೇವನಹಳ್ಳಿ ತಾಲೂಕಿನ ಶಾಸನೋಕ್ತ ಗ್ರಾಮಗಳ ವಿವರ ಈ ರೀತಿ ಇದೆ. ಕುದಿರ್ಕ್ಕಿರೈ ಎಂಬ ರಾಮನಾಥ ಚತುರ್ವೇದಿಮಂಗಲ, ಸುರೆತೇನುಪುರ, ಜಾಲ, ತರುಬನಹಳ್ಳಿ, ಆನೂಡಳ ಕೋಡಿಪುರ, ಬೇಗೂರು ಸೋಮಪಂನ ಕೆರೆ, ಹೋಜಾಲ, ಜಾಲಿಗೆ ಕೊಡಿಗೆಹಳ್ಳಿ, ಚಿಕ್ಕಜಾಲ ಎಂಬ ವಿಷ್ಣುವರ್ಧನ ಚತುರ್ವೇದಿಮಂಗಲ

ದಂಡಿಗೇನಹಳ್ಳಿ ದೇವರಾಯಸಮುದ್ರ ಮುಂತಾದವು ದೇವನಹಳ್ಳಿ ಶಾಸನ ಸಂಖ್ಯೆಗಳಾದ 53, 24, 45, 60, 72, 54, 3, 50 , 58, 59 , 12, 81 ಮುಂತಾದವುಗಳು ಈ ಮೇಲ್ಕಂಡ ಗ್ರಾಮಗಳ ಬಗ್ಗೆ ಉಲ್ಲೇಖಿಸುತ್ತವೆ. [62]

ಈ ನಾಡಿನ ಮುಖ್ಯಸ್ಥಳ ಬೆಂಗಳೂರು ಉತ್ತರ ತಾಲೂಕಿನಲ್ಲಿರುವ 'ಯಲಹಂಕ' ಎಂಬ ಊರೇ ಆಗಿದ್ದು, ಬೆಂಗಳೂರಿನಿಂದ ಸುಮಾರು 16 ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ಈ ಊರ ಹೆಸರನ್ನು ಎಲಹಕ,ಎಲಹಕ್ಕ, ಎಲಹಂಕ, ಎಲವಕ, ಯಲಹಕ , ಯಲಹಕ್ಕ, ಯಲವಂಕ, ಯಲಹಂಕ, ಯಲಹಂಕನಾಡು ಎಂದು ಕನ್ನಡದಲ್ಲಿ ಮತ್ತು ಇಲೈಪಾಕ್ಕ ಎಂದು ತಮಿಳಿನಲ್ಲಿ ಕರೆದಿರುವುದು ಕಂಡುಬರುತ್ತದೆ.[63]

ಈ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಮುಖ ಸಾಮಂತರೆಂದರೆ ಬೆಂಗಳೂರು-ಮಾಗಡಿಗಳ ಆಡಳಿತಗಾರರು, ಇವರು ಕೆಂಪೇಗೌಡ ಕುಟುಂಬದವರು ಎಂದು ಹೆಸರಾಗಿದ್ದಾರೆ. ಇವರು ಮೂಲತಹ ಯಲಹಂಕ ನಾಡಪ್ರಭುಗಳು. ನಂತರ ಇವರು ಬೆಂಗಳೂರಿನಲ್ಲಿ ತಮ್ಮ ಕೇಂದ್ರಸ್ಥಾನವನ್ನು ಹೊಂದಿದ್ದು ಕ್ರಿ.ಶ.1637-38ರಲ್ಲಿ ಆದಿಲ್‌ಷಾಹಿಗಳ ದಾಳಿಯಿಂದಾಗಿ ತಮ್ಮ ಕೇಂದ್ರಸ್ಥಾನವನ್ನು ಮಾಗಡಿ ಮತ್ತು ಸಾವನದುರ್ಗಕ್ಕೆ ವರ್ಗಾಯಿಸಿದರು. ಕ್ರಿ.ಶ.1728ರಲ್ಲಿ ಮೈಸೂರು ರಾಜವಂಶವು ಇವರನ್ನು ಸೋಲಿಸುವ ತನಕ ಆಳ್ವಿಕೆ ನಡೆಸಿದರು. ಈ ಕುಟುಂಬವು ಬೆಂಗಳೂರು ನಗರ ನಿರ್ಮಾಣಕ್ಕೆ ಅಸ್ತಿಭಾರ ಹಾಕಿದರು.[64]

ಐತಿಹ್ಯಗಳ ಪ್ರಕಾರ ಇವರು ತಮಿಳುನಾಡಿನ ಯಣಮಂಜಿ ಪುತ್ತೂರಿನಿಂದ ವಲಸೆ ಬಂದು ಆವತಿ ನಾಡಪ್ರಭುಗಳ ಆಳ್ವಿಕೆಗೆ ಅಸ್ತಿಭಾರ ಹಾಕಿದ ವಂಶಕ್ಕೆ ಸೇರಿದವರು. ಇವರು ಮೊರಸು ಒಕ್ಕಲು ಸಮುದಾಯಕ್ಕೆ ಸೇರಿದವರು. ಈ ಕುಟುಂಬದ 7 ಜನ ಸಹೋದರರು 7 ಪ್ರತ್ಯೇಕ ವಂಶಗಳನ್ನು ಸ್ಥಾಪಿಸಿದರು ಎಂಬುದು ಐತಿಹಾಸಿಕವಾಗಿ ಸತ್ಯವಾದುದಲ್ಲ.[65]ರಾಜಕೀಯವಾಗಿ ಯಲಂಕನಾಡು ಕಾಲಕಾಲಕ್ಕೆ ಬೇರೆ ಬೇರೆ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಪ್ರಾರಂಭದಲ್ಲಿ 11ನೇ ಶತಮಾನದಲ್ಲಿ ಚೋಳ ರಾಜರಾಜನ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ.1200 ಸುಮಾರಿಗೆ ಈ ನಾಡು ಹೊಯ್ಸಳರ ಅಧೀನಕ್ಕೆ ಬಂದಿತು.ಕ್ರಿ.ಶ.1288ರಲ್ಲಿ ಹೊಯ್ಸಳ ಅರಸ ರಾಮನಾಥನ ಆಳ್ವಿಕೆಗೆ ಒಳಪಟ್ಟಿತ್ತು.[66]ಈ ಪ್ರದೇಶವು 3ನೇ ವೀರಬಲ್ಲಾಳನ ಆಳ್ವಿಕೆಗೆ ಒಳಪಟ್ಟಿತು.[67]3ನೇ ವೀರಬಲ್ಲಾಳನ ಅಧೀನದಲ್ಲಿ ಮಹಾಪ್ರಧಾನ ಬೆಟ್ಟದ ಅರಸು ಎಂಬುವನು ಈ ನಾಡಿನ ಸಾಮಂತ ಅಧಿಕಾರಿಯಾಗಿ ಆಡಳಿತ ನಡೆಸಿದನು.[68]ಕ್ರಿ.ಶ.1345ರಲ್ಲಿ ವೀರಮ್ಮಾಜಿ

ಹಿರಿಯಣ್ಣ ಪೆರುಮಯ್ಯ ನಾಯಕ ಎಂಬುವನು ರಂಗನಾಥಭಟ್ಟರ ಮಗನಾದ ಭವಭೂತಿ ಎಂಬುವರಿಗೆ ಯಲಹಂಕ ನಾಡುವಿನ ಜಾಲವನ್ನು ಅಗ್ರಹಾರವನ್ನಾಗಿ ದತ್ತಿ ನೀಡಿದನು.[69]

ಈ ನಾಡಿನ ಪ್ರಭುವಾಗಿ ಭೈರಿದೇವ ಎಂಬುವನು ಆಳ್ವಿಕೆ ನಡೆಸಿದನು. ಇವನು 3ನೇ ಬಲ್ಲಾಳನ ಸಾಮಂತನಾಗಿದ್ದನು ನಂತರ ಈತನು ವಿಜಯನಗರದ ಅರಸರಾದ ಹರಿಹರ ಮತ್ತು ಬುಕ್ಕರ ಸಾಮಂತನಾಗಿ ಮುಂದುವರೆದನು.[70] ಕ್ರಿ.ಶ.1382ರಲ್ಲಿ ರಾಮರಸನ ಮಗನಾದ ದೇವರಸ ಎಂಬುವನು ಈ ನಾಡಿನ ಸುಂಕದ ಅಧಿಕಾರಿಯಾಗಿದ್ದನು.[71] ನಂತರ ಆವತಿಯ ರಣಭೈರೇಗೌಡನ ಮಗನಾದ ಜಯಗೌಡ ಎಂಬುವನು ಆಳ್ವಿಕೆ ನಡೆಸಿದನು. ಜಯಗೌಡನನ್ನು ಸ್ಥಳೀಯ ಐತಿಹ್ಯ ಮತ್ತು ಸಾಹಿತ್ಯ ಆಧಾರಗಳು ಉಲ್ಲೇಖಿಸಿದೆ.ಈತನ ನಂತರ ಕೆಂಪನಂಜೇಗೌಡ (ಕೆಂಪನಾಚೇಗೌಡ) ಎಂಬುವನು ಆಳ್ವಿಕೆ ನಡೆಸಿದನು. ಈತನ ಮಗನಾದ 1ನೇ ಕೆಂಪೇಗೌಡ (ಕ್ರಿ.ಶ.1510–1570) ನು ಬೆಂಗಳೂರು ನಗರ ನಿರ್ಮಾಣಮಾಡಿ ಒಂದು ಕೋಟೆಯನ್ನು ಕಟ್ಟಿಸಿದನು. ಈತನು ಕೆಂಪಾಂಬುದಿ, ಧರ್ಮಾಂಬುದಿ ಕೆರೆಗಳನ್ನು, ನಿರ್ಮಿಸಿ ಬಸವನಗುಡಿ, ಗವಿಗಂಗಾಧರೇಶ್ವರ, ಹಲಸೂರು ಸೋಮೇಶ್ವರ ದೇವಾಲಯಗಳನ್ನು ವಿಜಯನಗರ ಚಕ್ರವರ್ತಿ ಅಚ್ಯುತರಾಯನ ಅನುಮತಿಯಂತೆ ಅಭಿವೃದ್ಧಿಪಡಿಸಿದನು.[72]

1ನೇ ಕೆಂಪೇಗೌಡನು ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಟಂಕಿಸಿದ್ದರಿಂದ ವಿಜಯನಗರದ ಅರಸನು ಈತನನ್ನು ರಾಜಧಾನಿಯಾದ ಪೆನುಗೊಂಡದಲ್ಲಿ ಸ್ವಲ್ಪ ಸಮಯದವರೆಗೆ ಬಂಧಿಯಾಗಿರಿಸಿದನು ನಂತರ ಬಿಡುಗಡೆಗೊಳಿಸಿದನು. ಈತನ ಹಿರಿಯ ಮಗನಾದ ಗಿಡ್ಡೇಗೌಡ ಎಂಬುವನು (ಕ್ರಿ.ಶ.1570–85) ಈ ಭಾಗದಲ್ಲಿ ಆಳ್ವಿಕೆ ನಡೆಸಿದನು ನಂತರ 2ನೇ ಕೆಂಪೇಗೌಡ (ಇಮ್ಮಡಿ ಕೆಂಪೇಗೌಡ) ಎಂಬುವನು ಕ್ರಿ.ಶ.1585–1633ರವರೆಗೆ ಈ ಭಾಗದಲ್ಲಿ ಆಳ್ವಿಕೆ ನಡೆಸಿದನು. ಬೆಂಗಳೂರಿನ ಕ್ರಿ.ಶ.1597ರ ತಾಮ್ರಪಟ ಶಾಸನದಂತೆ ಬೆಂಗಳೂರಿನ 4 ದಿಕ್ಕುಗಳಲ್ಲಿ4 ಗೋಪುರಗಳನ್ನು ನಿರ್ಮಿಸಿದನು. ಪೆನುಗೊಂಡದ ಅರವೀಡು ವೆಂಕಟರಾಯನ ಸಾಮಂತನಾಗಿ ಆಳ್ವಿಕೆ ನಡೆಸಿದನು ಈತನ ಕಾಲದಲ್ಲಿ ದೇವಾಲಯಗಳ ಜೀರ್ಣೋದ್ಧಾರ ಮತ್ತು ದಾನದತ್ತಿಗಳನ್ನು ಮುಂದುವರೆಸಿಕೊಂಡು ಹೋಗಲಾಯಿತು.[73]

3ನೇ ಕೆಂಪೇಗೌಡ (ಕ್ರಿ.ಶ.1633–1678) ಈತನು 3ನೇ ವೆಂಕಟನ ಸಾಮಂತನಾಗಿದ್ದನು, ಈತನ ಕಾಲದಲ್ಲಿ ರಣದುಲ್ಲಾಖಾನನ ನೇತೃತ್ವದ ಬಿಜಾಪುರ ಸೈನ್ಯವು ಬೆಂಗಳೂರನ್ನು ವಶಪಡಿಸಿಕೊಂಡಿತು ಇದರಿಂದಾಗಿ 3ನೇ ಕೆಂಪೇಗೌಡನು ಬೆಂಗಳೂರನ್ನು ತ್ಯಜಿಸಿ ಮಾಗಡಿಯನ್ನು ತನ್ನ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡನು. ಈತನು ಮತ್ತು ಈತನ

ಉತ್ತಾರಾಧಿಕಾರಿಗಳು ವಿಜಯನಗರದ ಸಾಮಂತರೆಂದು ಕರೆದುಕೊಂಡಿದ್ದು 3ನೇ ಶ್ರೀರಂಗನ ಸಾಮಂತರಾಗಿ ಆಳ್ವಿಕೆ ನಡೆಸಿದರು ಈತನು ಮಾಗಡಿಗೆ ಕೇಂದ್ರಸ್ಥಾನವನ್ನು ಬದಲಾಯಿಸಿದ ನಂತರ ಸಾವನದುರ್ಗ ಕೋಟೆಯು ಈತನ ಕೇಂದ್ರಸ್ಥಾನವಾಯಿತು. [74]

ದೊಡ್ಡವೀರಪ್ಪಗೌಡ (ಕ್ರಿ.ಶ.1678-1710): 3ನೇ ಕೆಂಪೇಗೌಡನ ನಂತರ ದೊಡ್ಡವೀರಪ್ಪ ಗೌಡನು ಆಳ್ವಿಕೆ ನಡೆಸಿದನು ಈತನು ಪೆನುಗೊಂಡದ ಶ್ರೀರಂಗನನ್ನು ತನ್ನ ರಾಜನೆಂದು ಕರೆದುಕೊಂಡಿದ್ದಾನೆ.

ಕೆಂಪವೀರಪ್ಪಗೌಡ (ಕ್ರಿ.ಶ.1710-1728) ದೊಡ್ಡವೀರಪ್ಪನ ಉತ್ತರಾಧಿಕಾರಿಯಾದ ಮುಮ್ಮಡಿ ಕೆಂಪವೀರಪ್ಪನು ತನ್ನ ತಂದೆಗೆ ಆಡಳಿತದಲ್ಲಿ ನೆರವು ನೀಡಿದನು, ಹಲವಾರು ದಾನದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳು ಈ ಭಾಗದಲ್ಲಿ ದೊರೆಯುತ್ತವೆ. ಕ್ರಿ.ಶ.1728ರಲ್ಲಿ ಮೈಸೂರಿನ ದೊಡ್ಡಕೃಷ್ಣರಾಜ ಒಡೆಯರ ದಳವಾಯಿಯಾದ ದೇವರಾಜನು ಮಾಗಡಿಯನ್ನು ಆಕ್ರಮಿಸಿ ಕೆಂಪವೀರಪ್ಪನನ್ನು ಬಂಧಿಯಾಗಿರಿಸಿದನು. ಈತನು ಶ್ರೀರಂಗಪಟ್ಟಣದಲ್ಲಿ ನಿಧನ ಹೊಂದಿದ್ದರಿಂದ ಈ ವಂಶದ ಆಳ್ವಿಕೆ ಅಂತ್ಯಗೊಂಡಿತು. ಹೀಗೆ ಮಾಗಡಿ, ಬೆಂಗಳೂರು ಪ್ರದೇಶಗಳು ಮೈಸೂರು ಒಡೆಯರ್‌ರವರ ಆಳ್ವಿಕೆಗೆ ಒಳಪಟ್ಟವು. [75]

**ಸುಗಟೂರು ನಾಯಕರು:**

ಇವರನ್ನು ಆವತಿ ರಣಭೈರೇಗೌಡರ ವಂಶಕ್ಕೆ ಸೇರಿದವರೆಂದು ಹೇಳಲಾಗುತ್ತಿದೆ. ಸುಗಟೂರು ನಾಯಕರು ಬೆಂಗಳೂರು ಜಿಲ್ಲೆಯ ಹೊಸಕೋಟೆಯನ್ನು ತಮ್ಮ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಹೊಸಕೋಟೆ, ಆನೇಕಲ್ ತಾಲೂಕುಗಳು ಮತ್ತು ಕೋಲಾರ ಜಿಲ್ಲೆಯ ಪ್ರದೇಶಗಳಾದ ಕೋಲಾರ ಶಿಡ್ಲಘಟ್ಟ, ಮುಳಬಾಗಿಲು, ಚಿಂತಾಮಣಿ, ಬಂಗಾರಪೇಟೆ ತಾಲೂಕುಗಳನ್ನು ಒಳಗೊಂಡ ಭಾಗಗಳ ಮೇಲೆ ನಿಯಂತ್ರಣ ಹೊಂದಿದ್ದರು. ಅವರು ತಮ್ಮನ್ನು ಸುಗಟೂರು ನಾಯಕರೆಂದು ಕರೆದುಕೊಂಡಿದ್ದು ಅವರು ಮೂಲತಹ ಕೋಲಾರ ಜಿಲ್ಲೆಯ ಸುಗಟೂರಿಗೆ ಸೇರಿದವರು. ಅವರು ವಿಜಯನಗರ ಕಾಲದ 7 ನಾಡುಗಳಾದ ಹೊಸಕೋಟೆ, ಕೊಳಲು, (ಕೋಲಾರ) ಸುಗಟೂರು ಮುಂತಾದ ಪ್ರದೇಶಗಳ ಮೇಲೆ ಹಿಡಿತಹೊಂದಿದ್ದರು. ಈ ವಂಶದ ತಮ್ಮಪ್ಪಗೌಡ, ಚಿಕ್ಕತಮೇಂದ್ರ, ಮುಮ್ಮಡಿ ತಮ್ಮೇಗೌಡ, ಚಿಕ್ಕರಾಯ ತಮ್ಮೇಗೌಡ ಮುಂತಾದ ನಾಯಕರ ಕಾಲದಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿತ್ತು. [76]

**ಆವತಿ ನಾಡಪ್ರಭುಗಳು:**

ಆವತಿ ದೇವನಹಳ್ಳಿ ತಾಲೂಕಿನ ಕಸಬಾ ಹೋಬಳಿಗೆ ಸೇರಿದ ಒಂದು ಗ್ರಾಮವಾಗಿದ್ದು ಬೆಂಗಳೂರು-ಹೈದ್ರಾಬಾದ್ರಾಷ್ಟ್ರೀಯ ಹೆದ್ದಾರಿ ಸಂಖ್ಯೆ-7ರಲ್ಲಿ ದೇವನಹಳ್ಳಿಯಿಂದ ಉತ್ತರಕ್ಕೆ ಸುಮಾರು 4 ಕಿ.ಮೀ ದೂರದಲ್ಲಿದೆ.[77] ಆವತಿಯ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿದೆ. ಶಾಸನಗಳು ಆವತಿಯನ್ನು ಆವತಿಯೂರ್,ಆಹುತಿ, ಆವತಿ, ಆವತ್ತಿನಾಡು ಎಂದು ಕರೆದಿವೆ.

ವಿಜಯನಗರ ಕಾಲದಲ್ಲಿ ಆವತಿಯು ಸಾಮಂತ ಮನೆತನವಾಗಿದ್ದು ಒಂದು ಸಣ್ಣ ಪ್ರಭುತ್ವವನ್ನು ಹೊಂದಿತ್ತು.ಈ ವಂಶದ ಶಾಖೆಗಳರವರು ಕ್ರಿ.ಶ.14 ರಿಂದ 18ನೇ ಶತಮಾನದ ಅವಧಿಯಲ್ಲಿ ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿ ಆಳ್ವಕೆ ನಡೆಸಿದರು.[78]ಬೆಂಗಳೂರು, ಕೋಲಾರ ಮತ್ತು ತುಮಕೂರು ಮುಂತಾದ ಪ್ರದೇಶಗಳ ಮೇಲೆ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಸ್ಥಳೀಯವಾಗಿ ಆಳ್ವಕೆ ನಡೆಸಿದ ಮೊರಸು ಮನ್ನೆಯರೆಂದು ಖ್ಯಾತರಾಗಿದ್ದ ಆವತಿ ನಾಡು, ಯಲಹಂಕ ನಾಡು, ಸುಗಟೂರು ನಾಡು ಮತ್ತು ಮಹಾನಾಡಪ್ರಭುಗಳೆಲ್ಲರು ಒಂದೇ ಮೂಲಕ್ಕೆ ಸೇರಿದವರು ಎಂದು ಹೇಳಲಾಗುತ್ತದೆ. ಆವತಿ ನಾಡಪ್ರಭುಗಳು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಈ ಭಾಗದಲ್ಲಿ ಸಾಮಂತರಾಗಿ ಆಳ್ವಕೆ ನಡೆಸಿದರು.

**ಉಗಮ:**ಆವತಿನಾಡ ಪ್ರಭುಗಳ ಉಗಮದ ಬಗ್ಗೆ ಅವರ ಶಾಸನಗಳಿಂದ ಯಾವುದೇ ಸುಳಿವು ಸಿಗುವುದಿಲ್ಲ. ಸ್ಥಳೀಯ ಚರಿತ್ರೆ ಪ್ರಕಾರ ರಣಭೈರೇಗೌಡ ಎಂಬುವನು ಕಂಚಿ ಬಳಿಯ ಯಣಮಂಜಿ ಪುತ್ತೂರಿನಿಂದ ತನ್ನ 7 ಜನ ಸಹೋದರರೊಂದಿಗೆ ಆವತಿಗೆ ಬಂದು ಆವತಿ ಪ್ರಭುತ್ವವನ್ನು ಸ್ಥಾಪಿಸಿದರು. ಮೂಲತಃ ತೆಲುಗಿನವರಾದ ಇವರು ಮೊರಸು ಒಕ್ಕಲು ಎಂದು ಕರೆಯಲ್ಪಡುತ್ತಿದ್ದರು ಇವರು ಭೈರವ ದೇವರ ಆರಾಧಕರು. ಇವರ ನಾಯಕ ರಣಭೈರೇಗೌಡ. ಇವನು ತನ್ನ ಏಕಮಾತ್ರ ಪುತ್ರಿ ದೊಡ್ಡಮ್ಮನನ್ನು ದುಷ್ಟ ಪಾಳೆಯಗಾರನೊಬ್ಬನಿಂದ ರಕ್ಷಿಸುವ ಸಲುವಾಗಿ ತನ್ನ ಊರನ್ನು ತ್ಯಜಿಸಿ ದೇವನಹಳ್ಳಿ ಉತ್ತರದಲ್ಲಿರುವ ಆಹುತ್ತಿಯಲ್ಲಿ (ಈಗಿನ ಆವತಿಯಲ್ಲಿ) ನೆಲೆಸಿದನು. ರಣಭೈರವನ ಜೊತೆಯಲ್ಲಿ ಮಲ್ಲಭೈರೆಗೌಡ, ಸಣ್ಣ ಭೈರೇಗೌಡ, ವೀರೆಗೌಡ ಎಂಬ ಅವನ ತಮ್ಮಂದಿರು, ಜಯಗೌಡ, ಸಣ್ಣಭೈರೇಗೌಡ, ಮಲ್ಲಭೈರೇಗೌಡ ಎಂಬ ಮಕ್ಕಳು ಇದ್ದರು. ಸ್ವಲ್ಪ ಕಾಲದಲ್ಲಿಯೇ ಇವರೆಲ್ಲ ಬೇರೆ ಬೇರೆ ಭಾಗಗಳಿಗೆ ಹೋಗಬೇಕೆಂದು ತೀರ್ಮಾನಿಸಿಕೊಂಡರು. ಭೈರೇಗೌಡನು ಆವತಿಯಲ್ಲಿಯೇ ನೆಲೆಸಿದನು. ಅವನ ಮಕ್ಕಳು ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ ಈ ಸ್ಥಳಗಳಲ್ಲಿ ಪಾಳೆಪಟ್ಟುಗಳನ್ನು ಸ್ಥಾಪಿಸಿದರು. ಸಣ್ಣಭೈರೇಗೌಡನು

ಹೊಳವನಹಳ್ಳಿಯಲ್ಲಿ ನೆಲೆಸಿ ತುಮಕೂರುಜಿಲ್ಲೆಯ ಕೊರಟಗೆರೆಯನ್ನು ಸ್ಥಾಪಿಸಿದನು. ಈ ವಂಶದ ತಿಮ್ಮೇಗೌಡ ಎಂಬುವನು ಜಂಗಮಕೋಟೆ ಹತ್ತಿರದಲ್ಲಿರುವ ಸುಗಟೂರಿಗೆ ಹೋಗಿ ಕೋಲಾರ ಪಾಳೆಯಗಾರನಾಗಿ ಹೊಸಕೋಟೆ ಸ್ಥಾಪಿಸಿದನು. ಜಯಗೌಡ ಎಂಬುವನು ಯಲಹಂಕದಲ್ಲಿ ನೆಲೆಸಿದನು. ಇವನ ವಂಶಸ್ಥರು ಬೆಂಗಳೂರು ಮತ್ತು ಮಾಗಡಿಗಳಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿದರು. ಅಲ್ಲದೆ ಆವತಿ ವಂಶದ ಇತರೇ ಶಾಖೆಗಳವರು ಗುಡಿಬಂಡೆ, ಮಧುಗಿರಿ, ಕುಣಿಗಲ್, ಆನೇಕಲ್, ಮುಳಬಾಗಿಲು, ನಂದಿ, ಹೊಸಕೋಟೆ ಮೊದಲಾದ ಕಡೆ ನೆಲೆಸಿದರು.[79]

ರಣಭೈರೇಗೌಡನ ಮೂವರು ಮಕ್ಕಳನ್ನು ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರಗಳ ಮುಖ್ಯಸ್ಥರನ್ನಾಗಿ ನೇಮಿಸಲಾಯಿತು. ರಣಭೈರೇಗೌಡನ ಮಗನಾದ ಮಲ್ಲಭೈರೇಗೌಡನು ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿಗಳಲ್ಲಿ ಕೋಟೆಗಳನ್ನು ನಿರ್ಮಿಸಿದನು. ಮಲ್ಲಭೈರೇಗೌಡನು ತನ್ನ ಕಿರಿಯ ಸಹೋದರನಾದ ಸಣ್ಣಭೈರೇಗೌಡನನ್ನು ಈ ಪ್ರದೇಶಗಳ ಆಡಳಿತಗಾರನನ್ನಾಗಿ ನೇಮಿಸಿದನು. ಈ ಮೇಲ್ಕಂಡ ಹೇಳಿಕೆಗಳು ಸ್ಥಳೀಯ ಚರಿತ್ರೆಗಳ ಮೇಲೆ ನಿಂತಿವೆ.[80]

ರಣಭೈರೇಗೌಡನು ತನಗೆ ಸಿಕ್ಕಿದ ನಿಧಿಯನ್ನು ಉಪಯೋಗಿಸಿಕೊಂಡು ಈ ಪ್ರದೇಶದಲ್ಲಿ ಸ್ಥಳೀಯ ಆಡಳಿತವನ್ನು ಸ್ಥಾಪಿಸಿದನು. ಈತನು ಆವತಿಯಲ್ಲಿ ಚನ್ನಕೇಶವಸ್ವಾಮಿ ದೇವಾಲಯವನ್ನು ಮತ್ತು ದೇವನಹಳ್ಳಿಯಲ್ಲಿ ವೇಣುಗೋಪಾಲಸ್ವಾಮಿ ದೇವಾಲಯವನ್ನು ಕಟ್ಟಿಸಿದನು.[81]

ಇನ್ನೊಂದು ಸ್ಥಳೀಯ ಐತಿಹ್ಯದ ಪ್ರಕಾರ ರಣಭೈರೇಗೌಡನ ಕುಟುಂಬ ಆವತಿಯಲ್ಲಿ ನೆಲೆಸಿ ಕೃಷಿಚಟುವಟಿಕೆ ಮಾಡುತ್ತಿತ್ತು. ರಣಭೈರೇಗೌಡನು ಒಂದು ದಿನ ಅತ್ತಿಮರದ ಕೆಳಗೆ ತೊಟ್ಟಿಲನ್ನು ಕಟ್ಟಿ ಮಗವೊಂದನ್ನು ಮಲಗಿಸಿದ್ದನು. ಹಾವೊಂದು ಅತ್ತಿಮರವನ್ನು ಹತ್ತುತ್ತಿರುವುದನ್ನು ರಣಭೈರೇಗೌಡನ ಕುಟುಂಬ ಗಮನಿಸಿತು. ಹಾವು ಹತ್ತಿ ಮರವೇರಿದ್ದರಿಂದ ಆ ಊರಿಗೆ ಹಾವುಹತ್ತಿ ಎಂದು ಹೆಸರಾಯಿತು. ಕಾಲಕ್ರಮೇಣ ಈ ಊರು ಆವತಿಯೆಂದು ಹೆಸರಾಯಿತು.[82]ಈ ಐತಿಹ್ಯಕ್ಕೆ ಯಾವುದೇ ಐತಿಹಾಸಿಕ ದಾಖಲೆಗಳಿಲ್ಲ. ಆವತಿ ನಾಡಪ್ರಭುಗಳ ಬಗ್ಗೆ ಅನೇಕ ಐತಿಹ್ಯಗಳು ಹುಟ್ಟಿಕೊಂಡಿದ್ದರೂ ಆ ಐತಿಹ್ಯಗಳನ್ನು ಇತಿಹಾಸ ಎಂದು ಪುಷ್ಟೀಕರಿಸಲು ಸದ್ಯಕ್ಕೆ ಸಾಕಷ್ಟು ಆಧಾರಗಳಿಲ್ಲ.

**ಆವತಿನಾಡು ಮತ್ತು ಅದರ ವ್ಯಾಪ್ತಿ:**

ಆವತಿ ನಾಡಪ್ರಭುಗಳ ಆಳ್ವಿಕೆಗೆ ನಂದಿಗಿರಿ ದುರ್ಗದ ಸುತ್ತಮುತ್ತಲ ಪ್ರದೇಶಗಳು ಒಳಪಟ್ಟಿದ್ದವು. ಈ ಪ್ರದೇಶವನ್ನು ನಂದಿಮಂಡಲ ಎಂದು, ಅದು ಪಂಚಕ್ರೋಶ ಪರಿಮಿತಿಯುಳ್ಳದೆಂದು ಶಾಸನೋಕ್ತವಾಗಿದೆ. ಕ್ರೋಶ ಎಂದರೆ ದೂರವನ್ನು ಅಳೆಯುವ ಒಂದು ಪ್ರಯಾಣ ಎಂಬ ಅರ್ಥವಿದೆ, ಒಂದು ಕ್ರೋಶವೆಂದರೆ ಸುಮಾರು 8 ಕಿ.ಮೀ ದೂರ, ಪಂಚ ಕ್ರೋಶವೆಂದರೆ ಸುಮಾರು 40 ಕಿ.ಮೀ, ಅಂದರೆ ನಂದಿಯನ್ನು ಕೇಂದ್ರವಾಗಿಟ್ಟುಕೊಂಡು ಸುಮಾರು 80 ಕಿ.ಮೀ, ವ್ಯಾಸಪರಿಮಿತಿಯ ಪ್ರದೇಶ ನಂದಿಮಂಡಲದಲ್ಲಿ ಅಂತರ್ಗತವಾಗಿತ್ತು.[83]

ವಿಜಯನಗರದ ಅರಸು ಇಮ್ಮಡಿ ವೆಂಕಟಪತಿರಾಯನ (ಕ್ರಿ.ಶ.1632-42) ಕಾಲಕ್ಕಾಗಲೇ ಬಿಜಾಪುರದ ಆದಿಲ್ ಷಾಹಿಗಳ ಆಕ್ರಮಣ ಅವರ ಸೇನಾನಿ ರಣದುಲ್ಲಾಖಾನ್‌ನ ನಾಯಕತ್ವ ಮತ್ತು ಜಹಗೀರುದಾರ ಮರಾಠರ ಷಹಜಿಯ ಮೂಲಕ ದಕ್ಷಿಣ ಕರ್ನಾಟಕದ ಮೇಲೆ ನಡೆಯಿತು. ಮರಾಠ ಷಹಜಿಯು ಬಿಜಾಪುರ ಸೈನ್ಯದಲ್ಲಿ ಒಬ್ಬ ಪ್ರಮುಖ ಸರದಾರನಾಗಿದ್ದನು. ಆಗ ನಡೆದ ಆಕ್ರಮಣದಲ್ಲಿ ಕೋಲಾರ, ಬೆಂಗಳೂರು ಜಿಲ್ಲಾ ಪ್ರದೇಶದ ಹಲವು ಭಾಗಗಳು ಮರಾಠರ ಷಹಜಿಗೆ ಜಹಗೀರಾಗಿ ದೊರೆತವು. ಅಂತೆಯೇ ಆವತಿನಾಡ ಪ್ರಭುಗಳ ರಾಜ್ಯವೂ ಕೈತಪ್ಪಿ ಹೋಯಿತು. ಷಹಜಿಯು ಕ್ರಿ.ಶ.1664ರಲ್ಲಿ ಮೃತನಾದನು. ಆತನ ಮಗ ಏಕೋಜಿಯು ತಮಿಳುನಾಡಿನ ತಂಜಾವೂರಿನವರೆಗೂ ತನ್ನ ಆಳ್ವಿಕೆಯನ್ನು ವಿಸ್ತರಿಸಿದನು. ಕ್ರಿ.ಶ.1675ರ ಸುಮಾರಿಗೆ ಆತನು ತನ್ನ ರಾಜಧಾನಿಯನ್ನು ಬೆಂಗಳೂರಿನಿಂದ ತಂಜಾವೂರಿಗೆ ಸ್ಥಳಾಂತರಿಸಿದನು. ಈ ಮಧ್ಯೆ ಆತನ ಸೋದರ ಶಿವಾಜಿ, ಮಗ ಸಂಬಾಜಿ (ಕ್ರಿ.ಶ.1680-1689) ಅವರ ಆಕ್ರಮಣಕಾರಿ ಆಡಳಿತ ಅವರ ಪ್ರಬಲ ಸೇನಾನಿಯಾಗಿದ್ದ ಹರ್‌ಜಿಯ ನೇತೃತ್ವದಲ್ಲಿ ನಡೆಯಿತು. ಕ್ರಿ.ಶ.1696ರಲ್ಲಿ ಹರ್‌ಜಿಯು ಮರಣ ಹೊಂದಲು ಆವತಿನಾಡಿನ ಪ್ರಭುಗಳು ಮತ್ತೆ ತಮ್ಮ ಆಳ್ವಿಕೆಯ ಪ್ರದೇಶಗಳಾಗಿದ್ದ ದೇವನಹಳ್ಳಿ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ಮುಂತಾದ ತಾಲೂಕುಗಳಿಗೆ ಸೇರಿದ ಪ್ರದೇಶಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ದೇವಣಾಪುರ ರಾಜ್ಯವನ್ನು ಸಂಸ್ಥಾಪಿಸಿದರು.[84] ಕ್ರಿ.ಶ.1697ರ ಅನಂತರದಲ್ಲಿ ಆವತಿನಾಡ ಪ್ರಭುಗಳ ಆಳ್ವಿಕೆಯನ್ನು ಪಸ್ತಾಪಿಸುವ ಶಾಸನಗಳು ಕಂಡುಬಂದಿದ್ದು ದೇವಣಾಪುರ ರಾಜ್ಯದ ಉಲ್ಲೇಖ ಕಂಡುಬಂದಿದೆ. ದೇವಣಾಪುರ ಎಂಬುದು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ತಾಲೂಕೊಂದರ ಕೇಂದ್ರ ಸ್ಥಳವಾಗಿರುವ ಇಂದಿನ ದೇವನಹಳ್ಳಿಯ ಪರ್ಯಾಯ ನಾಮವಾಗಿದೆ. ಹಾಗಾಗಿ ಆವತಿನಾಡ ಪ್ರಭುಗಳು 17ನೆಯ ಶತಮಾನದ ಅಂತ್ಯದ ವೇಳೆಗೆ

ದೇವನಹಳ್ಳಿಯನ್ನು ತಮ್ಮ ರಾಜ್ಯದ ಕೇಂದ್ರವನ್ನಾಗಿಸಿಕೊಂಡು ರಾಜ್ಯವಾಳತೊಡಗಿದರೆಂದು ಹೇಳಬಹುದು. ಈ ದೇವಣಾಪುರದ ರಾಜ್ಯದಲ್ಲಿ ವಡಿಗೇನಹಳ್ಳಿ ಹೋಬಳಿ, ನಲ್ಲೂರು ಹೋಬಳಿ, ಸೋಮತ್ತನಹಳ್ಳಿ ಹೋಬಳಿ, ಸೀಗೇಕೋಟೆ ಹೋಬಳಿ ಎಂಬ ಕೆಲವು ಸಣ್ಣ ಸಣ್ಣ ಆಡಳಿತ ಘಟಕಗಳ ಪ್ರಸ್ತಾಪ ಶಾಸನಗಳಲ್ಲಿವೆ. ಈ ಆಡಳಿತ ಘಟಕಗಳಲ್ಲಿ ಸೋಮೇತಿಹಳ್ಳಿ, ವೇಲೂರು, ಮಡ್ಲೂರು, ಸೇತುಹಳ್ಳಿ, ಸಗೇಪಹಳ್ಳಿ, ಸಾಔಕನಹಳ್ಳಿ, ಹೊಸಕೆರೆ, ಉಪ್ಪಾರಹಳ್ಳಿ, ಗೋಪಾಲಸಾಗರ, ಬಯಿಚಾಪುರ, ಭೈರಾಪುರ, ಆವರಹಳ್ಳಿ, ಸಿಂಗರಹಳ್ಳಿ, ಹಿರಿಯಕೆರೆ, ಚಿಕ್ಕೋಹಳ್ಳಿ, ಹೊಸಪೇಟೆ ಎಂಬ ಗ್ರಾಮಗಳು ಅಂತರ್ಗತವಾಗಿದ್ದವು. ಈ ಗ್ರಾಮಗಳೆಲ್ಲವೂ ಇಂದಿನ ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ ತಾಲೂಕುಗಳಿಗೆ ಸೇರಿದ ಗ್ರಾಮಗಳಾಗಿವೆ. ಒಟ್ಟಾರೆ ನಂದೀದುರ್ಗದ ಸುತ್ತಮುತ್ತಲ ಪ್ರದೇಶ ಇವರ ಆಳ್ವಿಕೆಗೆ ಒಳಪಟ್ಟಿತ್ತು.[85]ಇದರ ಜೊತೆಗೆ ಚಿಂತಾಮಣಿ, ಬಾಗೇಪಲ್ಲಿ, ಗೌರಿಬಿದನೂರು, ಗುಡಿಬಂಡೆ ತಾಲೂಕುಗಳಿಗೆ ಸೇರಿದ ಗ್ರಾಮಗಳು ಆವತಿ ನಾಡಪ್ರಭುಗಳ ಆಡಳಿತ ವ್ಯಾಪ್ತಿಗೆ ಒಳಪಟ್ಟಿದ್ದವು. [86]

**ಶಾಸನೋಕ್ತ ಆವತಿ ನಾಡಪ್ರಭುಗಳು:**

ಆವತಿ ನಾಡಪ್ರಭುಗಳ ಬಗ್ಗೆ ಅನೇಕ ಐತಿಹ್ಯಗಳು ಹುಟ್ಟಿಕೊಂಡಿದ್ದರೂ ಆ ಐತಿಹ್ಯಗಳನ್ನು ಇತಿಹಾಸ ಎಂದು ಪುಷ್ಠಿಕರಿಸಲು ಸಾಕಷ್ಟು ಆಧಾರಗಳು ಇಲ್ಲ. ಕ್ರಿ.ಶ.1396ರಿಂದ 1782ರವರೆಗೆ ಅಂದರೆ ಈ ವಂಶದ ಮೂಲಪುರುಷ ಮಾರೇಗೌಡನಿಂದ ಕೊನೆಯ ಅರಸನಾದ ರಾಮಸ್ವಾಮಿ ಕಾಲದವರೆಗೆ ಈ ವಂಶದ ನಾಡಪ್ರಭುಗಳನ್ನು ಕಾಲಾನುಕ್ರಮಣಿಕೆಯಂತೆ ಶಾಸನೋಕ್ತವಾಗಿ ಈ ಮುಂದಿನಂತೆ ವಿವರಿಸಲಾಗಿದೆ.

**ಮಾರೇಗೌಡ:**(ಕ್ರಿ.ಶ.1396-1403) ಕ್ರಿ.ಶ.1438ಕ್ಕೆ ಸೇರಿದ ಚಿಕ್ಕಬಳ್ಳಾಪುರ ತಾಲೂಕು ಕೂಡುವತಿಯ ತಾಮ್ರಶಾಸನವೊಂದು ಈ ವಂಶದವರಗೆ ಬಗ್ಗೆ ಬೆಳಕುಚೆಲ್ಲುತ್ತದೆ. ಈ ಶಾಸನದಲ್ಲಿ ಇವರು ತನ್ನ ಕುಲದೇವ ಭೈರವನೆಂದು ಮನೆದೇವರು ಕರಗದಮ್ಮ ಎಂದು ಹೇಳಿಕೊಂಡಿರುವುದು, ಮರಿಭೈರೇಗೌಡ ಮತ್ತು ಆತನ ಮಗ ಮಾದೇಗೌಡ ಎಂಬುವರು ಆವತಿನಾಡ ಪ್ರಭುಗಳ ಪೂರ್ವಜರೆಂದು ಈ ಶಾಸನದಿಂದ ತಿಳಿದುಬರುತ್ತದೆ.[87]ಮಾರೇಗೌಡನಿಗಿಂತ ಮೊದಲೆ ಆವತಿನಾಡನ್ನು ಆಳ್ವಿಕೆ ಮಾಡುತ್ತಿದ್ದ ಪ್ರಭುಗಳೇ ಈ ವಂಶದ ಮೂಲಪುರಷರೆಂದು ತಿಳಿದರೂ ಅವರ ಹೆಸರುಗಳನ್ನು ಕಾಲವನ್ನು ತಿಳಿಸುವ ಯಾವುದೇ ಶಾಸನಗಳು ಆಕರಗಳು ಲಭ್ಯವಿಲ್ಲದ ಕಾರಣ ಕ್ರಿ.ಶ.1396ರ ವೇಮಗಲ್ ಹೋಬಳಿ ಮಂಚಂಡಹಳ್ಳಿ ಶಾಸನ ಮತ್ತು ಕೆಂಗೇರಿ ಹೋಬಳಿ ವಳಗೇರನಹಳ್ಳಿ ಶಾಸನ ಮತ್ತು

ಚಿಕ್ಕಬಳ್ಳಾಪುರ ತಾಲೂಕು ಕುಡುವತಿ ಶಾಸನಗಳನ್ವಯ ಮಾರೇಗೌಡನನ್ನು ಈ ವಂಶದ ಮೂಲಪುರಷನೆಂದು ಪರಿಗಣಿಸಲಾಗಿದೆ.[88]

**ದೊಡ್ಡಭೈರೇಗೌಡ**:(ಕ್ರಿ.ಶ.1403-1428)ಈತನು ಮಾರೇಗೌಡನ ಮಗ. ಕ್ರಿ.ಶ.1428ರ ಚಿಕ್ಕಬಳ್ಳಾಪುರ ತಾಲೂಕು ಶಾಸನ ಸಂಖ್ಯೆ 40 ಮತ್ತು 134ರಲ್ಲಿ ಆವತಿಯ ದೊಡ್ಡಭೈರಯಗೌಡನೆಂದು ಉಲ್ಲೇಖಿಸಿದೆ.[89]

**ಭೈರೇಗೌಡ/ಭೈರವ ಭೂಪಾಲಕ**:(ಕ್ರಿ.ಶ.1428-1498) ಈತನು ದೊಡ್ಡಭೈರೇಗೌಡನ ಮಗ, ಈತನನ್ನು ಕಾರೇಪುರದ ಭೈರವ ಭೂಪಾಲನೆಂದು ಶಾಸನದಲ್ಲಿ ಕರೆಯಲಾಗಿದೆ.ನಂದಿಯ ಶಿವದೇವಾಲಯದಲ್ಲಿನ ನಂದೀಶ್ವರ ಗುರಕಳ್ ಎಂಬುವರಿಗೆ ಆಚಾರ್ಯ ಪೂಜೆಯನ್ನು ಸಲ್ಲಿಸಿ ಕುಡುವತಿ ಎಂಬ ಗ್ರಾಮವನ್ನು ದತ್ತಿ ನೀಡಿದನು.[90]

ಈ ಭೈರವಭೂಪಾಲನ ಅನಂತರ ಮುಂದೆ ಕ್ರಿ.ಶ.1565ರವರೆಗೂ ಈ ವಂಶೀಕರ ಪ್ರಸ್ತಾಪ ಶಾಸನಗಳಲ್ಲಿ ಕಂಡುಬರುವುದಿಲ್ಲ. ಈ ಮಧ್ಯದ ಅವಧಿಯಲ್ಲಿ ಇವರ ಮತ್ತು ವಿಜಯನಗರ ಸಾಮ್ರಾಟರ ಸಂಬಂಧಗಳು ಹೇಗಿದ್ದವೆಂದು ಖಚಿತವಾಗಿ ಹೇಳಲು ಆಧಾರಗಳ ಕೊರತೆ ಇದೆ. ಮುಂದೆ ರಕ್ಕಸತಂಗಡಿಯ ಯುದ್ಧದ ಅನಂತರದಲ್ಲಿ ವಿಜಯನಗರದ ಅರಸರ ಪ್ರಭಾವ ಕಡಿಮೆ ಆದಂತೆ ಸ್ಥಳೀಯ ಪ್ರಭುಗಳು ಹೆಚ್ಚು ಹೆಚ್ಚು ಸ್ವಾಯುತ್ತತೆಯನ್ನು ಪಡೆದುಕೊಳ್ಳಲಾರಂಭಿಸಿದರು. [91]

**ಸೊಣ್ಣಪ್ಪಗೌಡ ಅಯ್ಯ**: (ಕ್ರಿ.ಶ.1510-1565) ದೇವನಹಳ್ಳಿ ತಾಲೂಕು ಕಾಡಿಗಾನಹಳ್ಳಿ ಗ್ರಾಮದ ಶಾಸನವು ಆವತಿ ನಾಡಪ್ರಭು ಎಂದು ಉಲ್ಲೇಖಿಸಿದೆ.[92]ಈತನು ವಿಜಯನಗರ ಅರಸ ಸದಾಶಿವರಾಯನ ಸಾಮಂತ ಅಧಿಕಾರಿಯಾಗಿ ಆಳ್ವಿಕೆ ನಡೆಸಿದನು. ಈತನು ವಿಜಯನಗರ ಅರಸರ ಆಜ್ಞೆಯ ಮೇರೆಗೆ ಗೌರಿಬಿದನೂರು ತಾಲೂಕಿನ ಮುದಿಗೆರೆ ಗ್ರಾಮದ ಚನ್ನಕೇಶವ ದೇವಾಲಯದ ಅಮೃತಪಡಿಗೆ ದೀಪರಾಧನೆ ಪಂಚಪರ್ವ ರಥೋತ್ಸವ ಮುಂತಾದ ಸೇವೆಗಳಿಗೆ ಮುದಿಗೆರೆ ಗ್ರಾಮವನ್ನು ಸ್ಥಾನಮಾನ್ಯವನ್ನಾಗಿ ದತ್ತಿ ನೀಡಿದನು.[93]

**ಮೊಲೆಯ ಭೈರಯ್ಯಗೌಡ**: ಕ್ರಿ.ಶ.1565ರ ನಂದಿ ಗ್ರಾಮ ಶಾಸನದಲ್ಲಿ ಈತನ ಹೆಸರು ಉಕ್ತವಾಗಿದೆ. ಈತನ ಹೆಂಡತಿಯ ಹೆಸರು ಭೈಯಕ್ಕ ಎಂದು ತಿಳಿದುಬರುತ್ತದೆ. ಈತನಿಗೆ ಭೈರಯ್ಯಗೌಡ ಮತ್ತು ಮಾರಯ್ಯಗೌಡ ಎಂಬ ಪುತ್ರರಿದ್ದರು. ಇವರಲ್ಲಿ ಬಯಿರಯ್ಯಗೌಡನು ವಿಜಯನಗರ ಅರಸ ಶ್ರೀರಂಗರಾಯನ ಸಾಮಂತಾಧಿಕಾರಿಯಾಗಿದ್ದನು.[94]

**ಭೈರೆಯ್ಯಗೌಡ/ಇಮ್ಮಡಿ ಭೈರೇಗೌಡ**:(ಕ್ರಿ.ಶ.1565-1576)ಮೊಲೆಯ ಭೈರೇಗೌಡನ ಪುತ್ರನಾದ ಈತನ ಆಳ್ವಿಕೆ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಈತನ ಸೋದರನಾದ ಮಾರೇಗೌಡನನ್ನು ಪ್ರಸ್ತಾಪಿಸುವ ಶಾಸನ ನಂದಿಗ್ರಾಮದಲ್ಲಿದ್ದು, ಈತನು ತನ್ನ ತಂದೆತಾಯಿಯವರಿಗೆ ಪುಣ್ಯವಾಗಲೆಂದು ವೆಂಕಟೇಶ್ವರ ದೇವರಿಗೆ ದತ್ತಿ ಬಿಟ್ಟಿರುವ ಬಗ್ಗೆ ತಿಳಿಸುತ್ತದೆ.[95]

**ಬೈಚೇಗೌಡ**: (ಕ್ರಿ.ಶ.1576-1586) ಇಮ್ಮಡಿ ಬೈರೇಗೌಡನ ಮೊದಲನೆ ಮಗನೇ ಬೈಚೇಗೌಡ. ದೇವನಹಳ್ಳಿ ಶಾಸನ ಸಂಖ್ಯೆ 82 ಈತನ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ವಿಜಯನಗರದ ಅರಸ ಶ್ರೀರಂಗರಾಯನು ಯಲಹಂಕ ನಾಡು ವ್ಯಾಪ್ತಿಯಲ್ಲಿನ ಶಿವನಸಮುದ್ರ ಸೀಮೆಯ ಬೇಲೂರು ಗ್ರಾಮವನ್ನು ಬೈಚೇಗೌಡನ ಹೆಸರಿನಲ್ಲಿ ಬೈಚಾಪುರವೆಂದು ಮರುನಾಮಕರಣ ಮಾಡಿ 40 ವೃತ್ತಿಗಳನ್ನಾಗಿ ವಿಂಗಡಿಸಿ ವಿವಿಧ ಗೋತ್ರದ ವಿವಿಧ ಸೂತ್ರದ ಬ್ರಾಹ್ಮಣರಿಗೆ ದಾನ ನೀಡಿದನು.[96]

**ಹಾವಳಿ ಬೈಯಪ್ಪ ಗೌಡ**:(ಕ್ರಿ.ಶ.1586-1596) ಈತನು ಭೈರೇಗೌಡನ ಪುತ್ರ ದೊಡ್ಡಬಳ್ಳಾಪುರ ತಾಲೂಕು ತಿಪ್ಪೂರು ಗ್ರಾಮ ಶಾಸನವು ಹಣಬೆ, ತಿಪ್ಪೂರು, ಸೀಮೆಯೊಳಗಿನ ನಾಲ್ಕು ದಿಕ್ಕುಗಳ ಊರುಗಳ ಮೇಲಿನ ಮೂಲೆಗಾಸು ಎಂಬ ಸುಂಕವನ್ನು ತಿಪ್ಪೂರಲ್ಲಿ ಕೆಂಪಿಸೆಟ್ಟು ಎಂಬುವರು ಕಟ್ಟಿಸಿದ ಮಠಕ್ಕೆ ದತ್ತಿ ನೀಡಿದ ಬಗ್ಗೆ ಉಲ್ಲೇಖಿಸಿದೆ. ಅಲ್ಲದೆ ಆ ಮೂಲೆಗಾಸಿನ ಸೀಮೆಯ ಮೇಲೆ ಪಾರುಪತ್ತೆಗಾರ, ಸರ್ಕಾರದ ಗೌಡ, ಸೇನಾಭೋವ ಅಥವಾ ಸುಂಕದ ಮಣೆಗಾರರು ಅತಿಕ್ರಮಣ ಮಾಡಬಾರದೆಂದು ತಿಳಿಸಿದೆ. [97]

**ಇಮ್ಮಡಿ ಹಾವಳಿ ಭೈರಪ್ಪಗೌಡ**:(ಕ್ರಿ.ಶ.1596-1638) ಈತನು ವಿಜಯನಗರದ ಅರಸ 1ನೇ ವೆಂಕಟಪತಿರಾಯನ ಸಾಮಂತ ಅಧಿಕಾರಿಯಾಗಿ ಆಳ್ವಿಕೆ ನಡೆಸಿದನು ಈತನು ಹಾವಳಿ ಭೈಯಪ್ಪಗೌಡ ಮತ್ತು ಭೈರೇಗೌಡನ ಮೊಮ್ಮಗ ಈತನ ಆಳ್ವಿಕೆಗೆ ಸಂಬಂಧಿಸಿದ ಹಲವಾರು ಶಾಸನಗಳು ಈ ಭಾಗದಲ್ಲಿ ದೊರೆಕಿವೆ. ಈತನು ಕ್ರಿ.ಶ.1596ರಲ್ಲಿ ತನ್ನ ಸೋದರಳಿಯ ಸೊಣ್ಣಪ್ಪಯ್ಯನಿಗೆ ಗೌಡಕೊಡುಗೆಯಾಗಿ ಅಂತ್ರಹಳ್ಳಿ ಗ್ರಾಮವನ್ನು ದಾನವನ್ನಾಗಿ ನೀಡಿದನು.[98]

ಈತನು ಕ್ರಿ.ಶ.1598ರಲ್ಲಿ ದೊಡ್ಡಬಳ್ಳಾಪುರದ ಆದಿನಾಥಸ್ವಾಮಿ ದೇವರಿಗೆ ಪೂಜೆ ಮಾಡಿಸಿದನಲ್ಲದೆ ತನ್ನ ತಂದೆ ಹಾವಳಿ ಭೈರೇಗೌಡನಿಗೆ ಪುಣ್ಯವಾಗಲಿ ಎಂದು ವಿವಿಧ ಗೋತ್ರದ ಬ್ರಾಹ್ಮಣರಿಗೆ ದಾನ ನೀಡಿದನು. [99] ಈತನು ಪಂಡಿತರನ್ನು ಗೌರವಿಸಿ ಅವರಿಗೆ ದಾನ ದತ್ತಿ ನೀಡುತ್ತಿದ್ದನು ಎಂಬ ಸಂಗತಿಯು ಕ್ರಿ.ಶ.1610ರ ನಾಗೇನಹಳ್ಳಿ ಶಾಸನದಲ್ಲಿ ಉಕ್ತವಾಗಿದ್ದು ತಿರುಮಲಪಂಡಿತರ ಪುತ್ರರಾದ ಪುಟ್ಟಣ ಪಂಡಿತ ಮತ್ತು ತಿಮ್ಮಣ್ಣ ಪಂಡಿತ ಪುತ್ರ

ತಿಮ್ಮಣ್ಣಪಂಡಿತರಿಗೆ ಹಣಬೆ ಗ್ರಾಮಕ್ಕೆ ಇಮ್ಮಡಿ ಭೈರಾಪುರವೆಂದು ಪ್ರತಿನಾಮವಿಟ್ಟು ಸರ್ವಮಾನ್ಯ ಅಗ್ರಹಾರವನ್ನಾಗಿಸಿ ದತ್ತಿ ನೀಡಿರುವುದರ ಬಗ್ಗೆ ಉಲ್ಲೇಖಿಸಿದೆ.[100] ಈತನು ತನ್ನ ಆಳ್ವಿಕೆಯಲ್ಲಿ ಸೇರಿದ ಮಾರಗಾನಿಕುಂಟೆಗೆ ಸೇರಿದ ಗೊಡಗು ಚಿಂತಪಲ್ಲೆ ಗ್ರಾಮದ ಹೊಲಗದ್ದೆಗಳನ್ನು ಚಿನ್ನಪ್ಪರೆಡ್ಡಿ ಎಂಬುವರಿಗೆ ಉಂಬಳೆಯಾಗಿ ನೀಡಿರುವ ವಿವರ ಬಾಗೇಪಲ್ಲಿ ತಾಲೂಕು ವೊಕ್ಕವಾರಪಲ್ಲಿ ಗ್ರಾಮದ ಶಾಸನದಲ್ಲಿ ಉಲ್ಲೆಖಿಸಲ್ಪಟ್ಟಿದೆ.[101]

**ಇಮ್ಮಡಿ ಸೊಣ್ಣ ಭೈರೇಗೌಡ**:(ಕ್ರಿ.ಶ.1638-1651) ಈತನು ಇಮ್ಮಡಿ ಹಾವಳಿ ಭೈರೇಗೌಡನ ಉತ್ತರಾಧಿಕಾರಿ.ಸೊಣ್ಣಪ್ಪಗೌಡ ಅಥವಾ ಸೊಣ್ಣ ಭೈರೇಗೌಡನುಮುದ್ದುಭೈರೇಗೌಡನ ಮಗನಾಗಿದ್ದು ಮುದ್ದುಭೈರೇಗೌಡನ ನಂತರ ಆಳ್ವಿಕೆ ನಡೆಸಿದನು. ಇಮ್ಮಡಿ ಸೊಣ್ಣ ಭೈರೇಗೌಡನಿಗೆ ಕೆಂಪಮ್ಮ ಎಂಬ ಧರ್ಮಪತ್ನಿಯು ಮತ್ತು ಗೋಪಾಲಗೌಡ ಎಂಬ ಮಗನಿದ್ದನು.[102] ಈತನನ್ನು ಬಿಜಾಪುರದ ಸೇನಾನಿಯಾದ ರಣದುಲ್ಲಾಖಾನ್ ಎಂಬುವನು ಕ್ರಿ.ಶ.1638ರಲ್ಲಿ ಸೋಲಿಸಿದನು. ದೊಡ್ಡಬಳ್ಳಾಪುರವನ್ನು ಈತನಿಂದ ಪಡೆದುಕೊಂಡು ಅದನ್ನು ಷಹಜಿಯ ಜಹಗೀರನ್ನಾಗಿ ಸೇರ್ಪಡೆಗೊಳಿಸಿದನು. ಇಲ್ಲಿಂದ ಮುಂದೆ ಆವತಿನಾಡು ಮರಾಠರ ಅಧೀನಕ್ಕೆ ಒಳಪಟ್ಟು ಅವರ ಅಧೀನರಾಜರಾಗಿ ಆಳ್ವಿಕೆ ನಡೆಸಿದಂತೆ ತಿಳಿದುಬರುತ್ತದೆ.ಕ್ರಿ.ಶ.1640ರ ಶಿಡ್ಲಘಟ್ಟ ತಾಲೂಕು ಬೂದಿಹಾಳು ಗ್ರಾಮದಲ್ಲಿನ ಶಾಸನ ಈತನನ್ನು ಉಲ್ಲೇಖಿಸುತ್ತದೆ. ಅದರಲ್ಲಿ ವಡಿಗೇನಹಳ್ಳಿಯ ಶ್ರೀಮತು ಸಜ್ಜನ ಗುರು ಸಿವಾಚಾರ ಸಂಪನ್ನರಾದ ಶ್ರೀಲಿಂಗ ಚಕ್ರಿ ಎಂಬುವರಿಗೆ ಬೂದಿಹಾಳು ಗ್ರಾಮವನ್ನು ದತ್ತಿ ನೀಡಿದ ಬಗ್ಗೆ ಉಲ್ಲೇಖಿಸಲಪ್ಪಟಿದೆ. [103]

**ಇಮ್ಮಡಿ ಭೈಚೇಗೌಡ**:(ಕ್ರಿ.ಶ.1651-1697) ಈತನು ಮುದ್ದುಭೈರೇಗೌಡನ ಎರಡನೇ ಮಗ. ಇಮ್ಮಡಿ ಭೈಚೇಗೌಡನ ನಂತರ ಮುಂದೆ ಸುಮಾರು ಕ್ರಿ.ಶ.1697ರವರೆಗೆ ಆವತಿ ನಾಡಪ್ರಭುಗಳ ಶಾಸನಗಳು ಕಂಡುಬಂದಿರುವುದಿಲ್ಲ. ಇದಕ್ಕೆ ಮುಖ್ಯಕಾರಣವೇನೆಂದರೆ ಕ್ರಿ.ಶ.1638ರ ಸುಮಾರಿನಲ್ಲಿ ತುಮಕೂರು, ಕೋಲಾರ, ಬೆಂಗಳೂರು ಜಿಲ್ಲೆಯ ಬಹುತೇಕ ಭಾಗಗಳು ಬಿಜಾಪುರ ಆದಿಲ್‌ಷಾಹಿಗಳ ಆಕ್ರಮಣಕ್ಕೆ ಒಳಪಟ್ಟವು. ಈ ಪ್ರದೇಶಗಳು ಬಿಜಾಪುರದ ಸೇನೆಯ ಸರದಾರನಾದ ಷಹಜೀಗೆ ಜಹಗೀರಾಗಿ ನೀಡಲ್ಪಟ್ಟವು, ಹೀಗಾಗಿ ಕ್ರಿ.ಶ.1638ರಿಂದ 1676ರವರೆಗೂ ಆವತಿ ನಾಡಪ್ರಭುಗಳು ಅವರ ಅಧೀನಕ್ಕೆ ಒಳಪಡಬೇಕಾಯಿತು. ಈ ಅವಧಿಯಲ್ಲಿ ಇಮ್ಮಡಿ ಭೈರೇಗೌಡ ಅಥವಾ ಮುದ್ದುಭೈರೇಗೌಡ ಎಂಬುವರು ಆವತಿ ನಾಡಪ್ರಭುಗಳ ಪ್ರತಿನಿಧಿಯಾಗಿ ಉಳಿದಂತೆ ಕಂಡುಬರುತ್ತದೆ. [104]

**ಗೋಪಾಲಗೌಡ**:(ಕ್ರಿ.ಶ.1697-1715) ಈತನು ಇಮ್ಮಡಿ ಸೊಣ್ಣಭೈರೇಗೌಡ ಮತ್ತು ಕೆಂಪಮ್ಮನವರ ಪುತ್ರನಾಗಿದ್ದು ವಿಜಯನಗರದ ಅರಸ ಶ್ರೀವೆಂಕಟರಾಯನ ಸಾಮಂತ ಅಧಿಕಾರಿಯಾಗಿ ಆಳ್ವಿಕೆ ನಡೆಸಿದನು. ಕ್ರಿ.ಶ.1697ಕ್ಕೆ ಸೇರಿದ 8-9ಶಾಸನಗಳು ದೇವನಹಳ್ಳಿ ತಾಲೂಕಿನ ಬೇಗೂರು, ದೇವನಹಳ್ಳಿ, ಸೋಮನಹಳ್ಳಿ, ಸಿಂಗನಹಳ್ಳಿ ಮತ್ತು ಶಿಡ್ಲಘಟ್ಟ ತಾಲೂಕಿನ ಮಳ್ಳೂರು, ಮೇಲೂರು ಮುಂತಾದ ಗ್ರಾಮಗಳೆಂದು ಇವೆಲ್ಲವು ದೇವನಹಳ್ಳಿಯಲ್ಲಿರುವ ಶ್ರೀರುಕ್ಮಿಣಿ ಸತ್ಯಭಾಮ ಸಮೇತರಾದ ಶ್ರೀ ಮದನಗೋಪಾಲಸ್ವಾಮಿ ದೇವರ ಪೂಜಾ ಕೈಂಕರ್ಯಗಳಗಾಗಿ ಗೋಪಾಲಗೌಡನು ಉದಾರವಾಗಿ ಅನೇಕ ಗ್ರಾಮ ಮತ್ತು ಜಮೀನುಗಳನ್ನು ದತ್ತಿನೀಡಿರುವುದನ್ನು ದೇವನಹಳ್ಳಿ ಶಾ.ಸಂ.15, 16, 37, 51, 70, 71 ಮತ್ತು ಶಿಡ್ಲಘಟ್ಟ ಶಾ.ಸಂ.53, 56, 57ರ ಶಾಸನಗಳಿಂದ ದಾಖಲಿಸಿದೆ[105]

**ದೊಡ್ಡಭೈರಪ್ಪಗೌಡ**:(ಕ್ರಿ.ಶ.1715-1728) ಗೋಪಾಲಗೌಡನ ನಂತರ ಅವನ ಮಗ ದೊಡ್ಡಭೈರಪ್ಪಗೌಡನು ಶ್ರೀವೆಂಕಟರಾಯನ ಸಾಮಂತ ಅಧಿಕಾರಿಯಾಗಿ ಮುಂದುವರೆದನು. ಈತನು ತಿರುಪತಿ ವೆಂಕಟೇಶ್ವರಸ್ವಾಮಿಯನ್ನು ತನ್ನ ಅಧಿಪತಿಯೆಂದು ಪರಿಗಣಿಸಿ ಆಳ್ವಿಕೆ ನಡೆಸಿದನು. ಈತನು ಕ್ರಿ.ಶ.1715ರಲ್ಲಿ ಕುರುಬರಹಳ್ಳಿಯಲ್ಲಿ ಅಗ್ರಹಾರ ಸ್ಥಾಪಿಸಿ ಅದನ್ನು ಗೋಪಾಲಪುರ ಎಂದು ಕರೆದನು.[106]ಈತನು ಕ್ರಿ.ಶ.1729ರಲ್ಲಿ ದೇವನಹಳ್ಳಿ ತಾಲೂಕು ವಡಿಗೇನಹಳ್ಳಿ (ವಿಜಯಪುರ) ಯಲ್ಲಿರುವ ಚನ್ನಕೇಶವಸ್ವಾಮಿಗೆ ಪೂಜಾಕೈಂಕರ್ಯಗಳಗಾಗಿ ಸೆಟ್ಟಿಹಳ್ಳಿ ಮತ್ತು ಅಂಗಟ್ಟ ಗ್ರಾಮಗಳನ್ನು ದತ್ತಿನೀಡಿದನು.[107]ಈತನು ತನ್ನನ್ನು ತಿರುಪತಿ ವೆಂಕಟೇಶ್ವರಸ್ವಾಮಿಯ ಸಾಮಂತನೆಂದು ಕರೆದುಕೊಂಡಿದ್ದಾನೆ.ಮಾವಳಪುರವನ್ನು ದೊಡ್ಡಭೈರಸಾಗರವೆಂದು ತನ್ನ ಹೆಸರಿನಲ್ಲೇ ಪ್ರತಿನಾಮವಿಟ್ಟು ಹರಿತಗೋತ್ರದ ಸುಬ್ಬಾಭಟ್ಟ ಎಂಬುವನಿಗೆ ಸರ್ವಮಾನ್ಯ ಅಗ್ರಹಾರವನ್ನಾಗಿಸಿ ದತ್ತಿ ನೀಡಿದನು.[108]ಈತನ ಕಾಲದಲ್ಲಿ ಮೊಘಲರು ಮತ್ತು ಮರಾಠರ ಆಕ್ರಮಣಗಳು ಮುಂದುವರೆದವು. ಆದರೂ ಸಹ ಅಗ್ರಹಾರಗಳ ಸ್ಥಾಪನೆ, ದೇವಾಲಯಗಳ ಪೂಜಾ ಕೈಂಕರ್ಯಗಳಗೆ ಉದಾರವಾಗಿ ದಾನದತ್ತಿ ನೀಡಿರುವುದನ್ನು ಮುಂದುವರೆಸಿದನು.

**ವೆಂಕಟನಾರಾಯಣಗೌಡ**:(ಕ್ರಿ.ಶ.1728-1753) ಈತನು ದೊಡ್ಡಭೈರಪ್ಪಗೌಡನ ಉತ್ತರಾಧಿಕಾರಿ, ಕ್ರಿ.ಶ.1746ರ ಶಾಸನವೊಂದರಲ್ಲಿ ಈತನ ಹೆಸರು ಪ್ರಸ್ತಾಪವಾಗಿದ್ದು, ಈತನ ಆಳ್ವಿಕೆಗೆ ಒಳಪಟ್ಟಿದ್ದ ಬೋಡಂಪಲ್ಲಿ ಎಂಬ ಗ್ರಾಮದಲ್ಲಿ ದೊಡ್ಡಕೆರೆಯೊಂದು ರಚನೆಯಾದಾಗ ಅದಕ್ಕೆ ಕಾರಣವಾದವರಿಗೆ ದಶವಂದ ದತ್ತಿಯಾಗಿ ಗದ್ದೆ ಭೂಮಿಯನ್ನು ನೀಡಿರುವುದನ್ನು ಉಲ್ಲೇಖಿಸಲಾಗಿದೆ. ಶಾಸನಗಳಲ್ಲಿ ಈತನನ್ನು ಆವತಿನಾಡ ಪ್ರಭು ಎಂದೇ ಗುರುತಿಸಿದ್ದು ಈತನ

ಪೂರ್ವಪರಗಳ ಬಗ್ಗೆ ತಿಳಿದುಬರುವುದಿಲ್ಲ. [109]ಈತನ ಕಾಲದಲ್ಲಿ ಮೊಘಲರು ಮತ್ತು ಮರಾಠರ ಆಕ್ರಮಣಗಳು ಮುಂದುವರೆದವು. ಮರಾಠ ದಂಡನಾಯಕ ಬಾಬೂಜಿಯು ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲೂಕಿನಲ್ಲಿರುವ ಏಲೂರು ಮತ್ತು ಬೇದೂರುಗಳನ್ನು ವಶಪಡಿಸಿಕೊಂಡನು. ತನಗೆ ಸೇರಿದ ಪ್ರಾಂತ್ಯಕ್ಕೆ ನುಗ್ಗಿದ ಬಾಬೂಜಿಯನ್ನು ಗುತ್ತಿಯ ಮುರಾರಿರಾವ್ ಘೋರ್ಪಡೆ ಎಂಬುವನು ವಿರೋಧಿಸಿದನು. ದೇವನಹಳ್ಳಿಗೆ ಸಂಬಂಧವಾಗಿ ಚಿಕ್ಕಬಳ್ಳಾಪುರದ ಪಾಳೆಗಾರನಿಗೂ ಮತ್ತು ಮೈಸೂರು ಅರಸರಿಗೆ ವೈಮನಸ್ಯವಿತ್ತು. ಬಾಬೂಜಿಯು ಚಿಕ್ಕಬಳ್ಳಾಪುರ ಪಾಳೆಗಾರನಿಗೆ ಸಹಾಯ ಮಾಡಲು ಇಚ್ಛಿಸಿದನು. ಬಾಬೂಜಿಯು ತನ್ನ ಪ್ರಭಾವಕ್ಕೆ ಒಳಪಟ್ಟ ಪ್ರದೇಶದಲ್ಲಿ ಹಸ್ತಕ್ಷೇಪ ನಡೆಸುತ್ತಿದ್ದನೆಂದು ಮುರಾರಿ ರಾವ್ ಘೋರ್ಪಡೆಯು ಪೇಶ್ವೆಗೆ ದೂರಿತ್ತನು. ನಾಸಿರ್‌ಜಂಗ್, ದಿಲಾವರ್ ಖಾನ್, ದಳವಾಯಿ ನಂಜರಾಜಯ್ಯ ಮತ್ತು ಮುರಾರಿ ರಾವ್ ಮರಾಠರ ವಿರುದ್ಧ ಒಂದು ಒಕ್ಕೂಟವನ್ನು ಮಾಡಿಕೊಂಡರು, ಈ ಒಕ್ಕೂಟದ ಸೈನ್ಯವು ಬಾಬೂಜಿಯನ್ನು ಯುದ್ಧದಲ್ಲಿ ಸೋಲಿಸಿತು.

ಚಿಕ್ಕಬಳ್ಳಾಪುರ ಪಾಳೆಗಾರನಾದ ಚಿಕ್ಕಪ್ಪಗೌಡನು ದೇವನಹಳ್ಳಿಯನ್ನು ಮುತ್ತಿದನು. ಚಿಕ್ಕಬಳ್ಳಾಪುರದ ಚಿಕ್ಕಪ್ಪಗೌಡ ದೇವನಹಳ್ಳಿಯ ನಾರಾಯಣಗೌಡನ ನಡುವೆ ಅಧಿಕಾರಕ್ಕೆ ಸಂಬಂಧಿಸಿದಂತೆ ವಿವಾದವಿತ್ತು. ಈ ನಡುವೆ ದಳವಾಯಿ ನಂಜರಾಜಯ್ಯ ಮತ್ತು ಹೈದರ್‌ಅಲಿ ಕ್ರಿ.ಶ.1747ರಲ್ಲಿ ದೇವನಹಳ್ಳಿಗೆ ಮುತ್ತಿಗೆ ಹಾಕಿ ದೇವನಹಳ್ಳಿಯನ್ನು ವಶಪಡಿಸಿಕೊಂಡು ಚಿಕ್ಕಪ್ಪಗೌಡನನ್ನು ಸೆರೆ ಹಿಡಿಯಲಾಯಿತು. ಅನಂತರ ಚಿಕ್ಕಪ್ಪಗೌಡನನ್ನು ಸೆರೆಮನೆಯಿಂದ ಬಿಡುಗಡೆಮಾಡಿ, ಆತನನ್ನು ಚಿಕ್ಕಬಳ್ಳಾಪುರದಲ್ಲಿದ್ದ ತನ್ನ ಸಂಬಂಧಿಕರನ್ನು ಸೇರಿಕೊಳ್ಳಲು ಅನುಮತಿಸಲಾಯಿತು.[110]ಈತನ ನಂತರ ಮಗನಾದ ಚಿನ್ನಣ್ಣಪಯ್ಯ ಎಂಬುವನು ಆಳ್ವಿಕೆ ನಡೆಸಿದನು.

**ಚಿನ್ನಣಪ್ಪಯ್ಯ:**ಕ್ರಿ.ಶ.1792ರ ಸಾದಲಿ ಶಾಸನವು ಈತನನ್ನು ಆವತಿನಾಡಪ್ರಭು ದೊಡ್ಡಭೈರೇಗೌಡನ ಪುತ್ರನೆಂದು ರಾಮಸ್ವಾಮಿಯವರ ತಂದೆಯೆಂದು ದಾಖಲಿಸುತ್ತದೆ.[111]

**ರಾಮಸ್ವಾಮಿ:** ಶಿಡ್ಲಘಟ್ಟ ತಾಲೂಕು ಸಾದಲಿ ಗ್ರಾಮದ ಕ್ರಿ.ಶ.1792ರ ಶಾಸನವು ಈತನನ್ನು ಆವತಿ ನಾಡಪ್ರಭು ದೊಡ್ಡಭೈರೇಗೌಡನ ಮೊಮ್ಮಗ ಮತ್ತು ಚಿನ್ನಣ್ಣಪ್ಪಯ್ಯನ ಮಗನೆಂದು ಉಲ್ಲೇಖಿಸಿದೆ. ಈ ಶಾಸನವು ವಶಿಷ್ಟ ಗೋತ್ರದ ಶಾಮಶಾಸ್ತ್ರಿ ಎಂಬವಿಪ್ರ (ಬ್ರಾಹ್ಮಣ) ನಿಗೆ ಶ್ರೀ ನಂದೀಶ್ವರಸ್ವಾಮಿಯ ಚರಂಣಾದ ವಿಂಧ್ಯಗಳಿಗೆ ಪ್ರೀತಿಯಾಗಿ ಹರಿಹರಾದಿಗಳ ಸಾಕ್ಷಿಯಾಗಿ ಸಾದಲಿ ಗ್ರಾಮದ ನಾಗರಕಟ್ಟೆಯ ಹೊಲಗದ್ದೆಗಳನ್ನು ದಾನ ನೀಡಿದಿರುವುದನ್ನು

ಉಲ್ಲೇಖಿಸಿದೆ.[112] ಈತನ ನಂತರ ಈ ಮನೆತನದ ಬಗ್ಗೆ ವಿವರಗಳು ಸ್ಪಷ್ಟವಾಗಿ ದೊರೆಯುವುದಿಲ್ಲ. ಕ್ರಿ.ಶ.1782ರ ಆಂಗ್ಲೋ-ಮೈಸೂರು ಯುದ್ಧದ ನಂತರ ಟಿಪ್ಪುಸುಲ್ತಾನನು ಮೈಸೂರು ರಾಜ್ಯದಲ್ಲಿದ್ದ ಎಲ್ಲಾ ಸಣ್ಣ-ಸಣ್ಣ ಪಾಳೆಯಪಟ್ಟುಗಳನ್ನು ಅಧಿಕಾರದಿಂದ ಪದಚ್ಯುತಗೊಳಿಸಿದನು. ಇಲ್ಲಿಂದ ಮುಂದೆ ಆವತಿನಾಡು ಆಡಳಿತಾತ್ಮಕವಾಗಿ ಕೊನೆಗೊಂಡು ಇತಿಹಾಸ ಪುಟಗಳಲ್ಲಿ ಮಾತ್ರ ಉಳಿಯಿತು.

**ದೇವನಹಳ್ಳಿ ಪಾಳೆಯಗಾರರು**: ದೇವನಹಳ್ಳಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದು ಬೆಂಗಳೂರಿನಿಂದ ಉತ್ತರಕ್ಕೆ ಸುಮಾರು 36 ಕಿ.ಮೀ ದೂರದಲ್ಲಿದ್ದು ಬೆಂಗಳೂರು-ಬಳ್ಳಾರಿ ರಸ್ತೆ ಮಾರ್ಗದಲ್ಲಿದೆ. ದೇವನಹಳ್ಳಿ ತಾಲೂಕಿನ ಕೇಂದ್ರಸ್ಥಾನವಾಗಿದೆ.

ದೇವನಹಳ್ಳಿಯಲ್ಲಿ ಆಳ್ವಿಕೆ ಮಾಡಿದ ಆಡಳಿತಗಾರರ ಬಗ್ಗೆ ಕರ್ನಲ್ ಮೆಕೆಂಜಿ ಸಿದ್ಧಪಡಿಸಿದ ದೇವಣಪುರ ಕೈಫಿಯತ್ತು ನಂ.21, ಸಂಪುಟ 2048, ದೇವನಕಲ್ಲು ಕೈಫಿಯತ್ತು ನಂ.22, ಸಂಪುಟ 351 ಮತ್ತು ದೇವೇಗೌಡನಹಳ್ಳಿ ಕೈಫಿಯತ್ತು ನಂ.22, ಸಂಪುಟ 287ಗಳು ಮಾಹಿತಿಯನ್ನು ಒದಗಿಸುತ್ತವೆ. ಇದರಲ್ಲಿ ದೇವೇಗೌಡನಹಳ್ಳಿ ಕೈಫಿಯತ್ತು ದೇವನಹಳ್ಳಿಯಲ್ಲಿ ಆಳ್ವಿಕೆ ಮಾಡಿದವರ ಹೆಸರು ಮತ್ತು ಆಳ್ವಿಕೆ ಅವಧಿಯನ್ನು ನಮೂದಿಸಿದೆ.[113]

ದೇವನಹಳ್ಳಿಗೆ ಮೊದಲು ದೇವ ಎಂಬುವನು ಮುಖ್ಯಸ್ಥನಾಗಿದ್ದುದರಿಂದ ಅದಕ್ಕೆ ದೇವನದೊಡ್ಡಿ ಎಂಬ ಹೆಸರಿದ್ದು ಒಂದು ಚಿಕ್ಕ ಹಳ್ಳಿಯಾಗಿತ್ತು. ಕಂಚಿಯಿಂದ ನಿರಾಶ್ರಿತರಾಗಿ ಬಂದು ಆವತಿಯಲ್ಲಿ ನೆಲೆಸಿದ್ದವನ ಒಬ್ಬನ ಮಗನಾದ ಮಲಭೈರೇಗೌಡ ಎಂಬುವನು ಕ್ರಿ.ಶ.1501ರಲ್ಲಿ ದೇವನ ಒಪ್ಪಿಗೆ ಪಡೆದು ದೇವನದೊಡ್ಡಿಯಲ್ಲಿ ಕೋಟೆಯನ್ನು ಕಟ್ಟಿ ಅದಕ್ಕೆ ದೇವನಹಳ್ಳಿ ಅಥವಾ ದೇವಂಡಹಳ್ಳಿ ಎಂದು ಹೆಸರಿಟ್ಟನು. ಅದರ ಆಡಳಿತವನ್ನು ತನ್ನ ಸಹೋದರ ಸಣ್ಣಭೈರೇಗೌಡನಿಗೆ ವಹಿಸಿದನು. ಈತನು ಸುಮಾರು 40 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಸಣ್ಣ ಭೈರೇಗೌಡನ ನಂತರ ಆತನ ಮಗನಾದ ಭೈರೇಗೌಡನು ಸುಮಾರು 25ವರ್ಷಗಳ ಕಾಲ ಆಳ್ವಿಕೆ ನಡೆಸಿದನು ನಂತರ ದಯಾಲುಬಚ್ಚೇಗೌಡ ಸುಮಾರು 37 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಮುದ್ದಭೈರೇಗೌಡನು ಸುಮಾರು 20 ವರ್ಷಗಳ ಕಾಲ ಆಳ್ವಿಕೆ ನಡೆಸಿದನು ಈತನ ನಂತರ ಇಮ್ಮಡಿ ಸಣ್ಣ ಭೈರೇಗೌಡನು ಸುಮಾರು 37ವರ್ಷಕಾಲ ಆಳ್ವಿಕೆ ನಡೆಸಿದನು ನಂತರ ಗೋಪಾಲಗೌಡನು ಸುಮಾರು 35ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ದೊಡ್ಡಭೈರೇಗೌಡನು ಸುಮಾರು 54ವರ್ಷಗಳ ಕಾಲ ಆಳ್ವಿಕೆ ನಡೆಸಿದನು ನಂತರ ಅಧಿಕಾರಕ್ಕೆ ಬಂದ ಮಗ ರಂಗಪ್ಪಗೌಡನು ಕೇವಲ 10 ತಿಂಗಳು ಮಾತ್ರ ಆಳ್ವಿಕೆ ನಡೆಸಿದನು ಈತನು ಸಂತಾನವಿಲ್ಲದೆ

ನಿಧನನಾದ್ದರಿಂದ ಈತನ ಸಂಬಂಧಿಯಾದ ಚಿಕ್ಕಬಳ್ಳಾಪುರದ ಚಿಕ್ಕಪ್ಪಗೌಡನು ಆಳ್ವಿಕೆ ನಡೆಸಿದನು. ಈತನ ಕಾಲದಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯನು ಕ್ರಿ.ಶ.1749ರಲ್ಲಿ ದೇವನಹಳ್ಳಿಗೆ ಮುತ್ತಿಗೆ ಹಾಕಿದನು. ಈ ಮುತ್ತಿಗೆ ೮ ತಿಂಗಳುಗಳ ಕಾಲ ಮುಂದುವರೆದು ಕೊನೆಗೆ ಪಾಳೆಗಾರನು ಸೋತನು. ಈ ಯುದ್ಧದಲ್ಲಿ ಹೈದರ್‌ಅಲಿಯ ಯುದ್ಧಪರಾಕ್ರಮ ಮತ್ತು ಕೌಶಲ್ಯವು ಮೊದಲಬಾರಿಗೆ ಬೆಳಕಿಗೆ ಬಂದಿತು. ದೇವನಹಳ್ಳಿಯು ಮೈಸೂರಿನ ಪ್ರಭುತ್ವವನ್ನು ಒಪ್ಪಿಕೊಂಡಿತು.ಈ ಯುದ್ಧದಲ್ಲಿ ಹೈದರ್ ದೇವನಹಳ್ಳಿಗೆ ತೆರಳಿದಾಗ ಚಿಕ್ಕಬಳ್ಳಾಪುರದ ಚಿಕ್ಕಪ್ಪಗೌಡ ಎಂಬುವನು ಗುತ್ತಿಯ ನಾಯಕನಾದ ಮುರಾರಿ ನಾಯಕನ ಸ್ನೇಹವನ್ನು ಸಂಪಾದಿಸಿ ಆತನ ಸೈನ್ಯವನ್ನು ಚಿಕ್ಕಬಳ್ಳಾಪುರದ ಕೋಟೆಯ ರಕ್ಷಣೆಗೆ ನೇಮಿಸಿ ತಾನು ನಂದಿ ದುರ್ಗಕ್ಕೆ ಪಲಾಯನ ಮಾಡಿದನು. ಆದರೆ ಹೈದರ್ ಚಿಕ್ಕಪ್ಪಗೌಡನನ್ನು ಸೆರೆಹಿಡಿದು ಅವನನ್ನು ಮತ್ತು ಅವನ ಕುಟುಂಬದವರನ್ನು ಬೆಂಗಳೂರಿನ ಸೆರೆಮನೆಯಲ್ಲಿಟ್ಟನು, ಚಿಕ್ಕಪ್ಪಗೌಡ ಮೃತನಾದನು, ದೇವನಹಳ್ಳಿಯು ಮೈಸೂರು ರಾಜ್ಯಕ್ಕೆ ಸೇರಿಕೊಂಡಿತು.[114]

**ನಲ್ಲೂರುನಾಡು ನಾಯಕರು/ಪಾಳೆಗಾರರು**

ನಲ್ಲೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲೂಕಿನ ಒಂದು ಗ್ರಾಮ. ಇದು ದೇವನಹಳ್ಳಿಯಿಂದ ಸೂಲಿಬೆಲೆ–ಹೊಸಕೋಟೆಗೆ ಹೋಗುವ ರಸ್ತೆ ಮಾರ್ಗದಲ್ಲಿ ದಕ್ಷಿಣಕ್ಕೆ ಒಂಬತ್ತು ಕಿ.ಮೀ. ಹಾಗೂ ಬೆಂಗಳೂರು ನಗರದಿಂದ ಈಶಾನ್ಯ ದಿಕ್ಕಿಗೆ 46 ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ನಲ್ಲೂರಪಾರು, ನಲ್ಲೂರನಾಡು,ನಲ್ಲೂರಸೀಮೆ, ನಲ್ಲೂರು ರಾಜ್ಯ ಹಾಗೂ ನಲ್ಲೂರು ಹೋಬಳಿ ಎಂದು ಉಲ್ಲೇಖಿಸಲ್ಪಟ್ಟಿದೆ. ಹಾಳುಬಿದ್ದ ನಲ್ಲೂರು ಪಟ್ಟಣದ ಪ್ರದೇಶವನ್ನು 'ನಲ್ಲೂರು ಕೋಟೆ' ಎಂದು ಗುರುತಿಸಲಾಗುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಸುಮಾರು 1 ಕಿ.ಮೀ. ದೂರದ ಜನವಸತಿಯು ನಲ್ಲೂರು ಗ್ರಾಮವಾಗಿರುತ್ತದೆ.[115]

ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಅವರ ಪರಂಪರೆಯನ್ನು ಚಿಕ್ಕ ಮನೆತನಗಳು (ನಾಡವರು/ನಾಡಪ್ರಭುಗಳು/ಪಾಳೆಯಗಾರರು) ಮುಂದುವರೆಸಿಕೊಂಡು ಬಂದವು. ಆದರೆ ಇಲ್ಲಿ ಸಂಗಮ ವಂಶದ ಒಂದನೆಯ ಹರಿಹರನು ಕ್ರಿ.ಶ.೧೩೩೬ರಲ್ಲಿ ಪಟ್ಟಕ್ಕೆ ಬಂದ ಎರಡು ವರ್ಷಗಳಲ್ಲಿ ಅಂದರೆ ಕ್ರಿ.ಶ.೧೩೩೮ರಲ್ಲೇ ನಲ್ಲೂರು ನಾಡವರು ಮತ್ತು ಯಲಹಕ್ಕ ನಾಡವರು ಉಲ್ಲೇಖಿಸಲ್ಪಡುತ್ತಾರೆ. ಇದರಿಂದ ತಿಳಿದುಬರುವುದೇನೆಂದರೆ ವಿಜಯನಗರ ಸಾಮ್ರಾಜ್ಯವು ಒಂದು ಖಂಡಾಂತರ ರಾಜ್ಯವಾಗಿತ್ತು. ಅದು ಅನೇಕ ನಾಡುಗಳಿಂದ ಕೂಡಿದ್ದಾಗಿತ್ತು. ನಲ್ಲೂರ ನಾಡವರು, ಯಲಹಂಕ ನಾಡವರು, ವಿಜಯನಗರದ ಅರಸರು ಮತ್ತು

ಜನತೆಯ ಮಧ್ಯವರ್ತಿಗಳಾಗಿದ್ದರು. ಅವರು ತಮ್ಮ ನಿರ್ದಿಷ್ಟ ಪ್ರದೇಶದ ಆಡಳಿತವನ್ನು ನಡೆಸುತ್ತ ಸಾರ್ವಭೌಮನಿಗೆ ನಿಷ್ಠರಾಗಿದ್ದರು. ವಿಜಯನಗರ ಕಾಲದಲ್ಲಿ ಸಾಮಂತರು/ಅಮರ ನಾಯಕರು ತಮ್ಮ ಪ್ರದೇಶಗಳಲ್ಲಿ ನಿರ್ದಿಷ್ಟ ಸೈನ್ಯವನ್ನು ಇಟ್ಟುಕೊಂಡು, ಸಾರ್ವಭೌಮನ ಸೇವೆಗೆ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.[116]

ನಲ್ಲೂರು ನಾಡ ನಾಯಕರಾದ ಸೊಣ್ಣೆನಾಯಕ, ಚಿಕ್ಕಅಂಕಿಯನಾಯಕ, ಮಹಾಸಾಮಂತಾಧಿಪತಿ ಚಲವಲಿಕದ ಚಉಂಡಿಯನಾಯಕ, ಚಉಂಡೆಯನಾಯಕ (ಚೌಡರಾಯ) ಮತ್ತು ಕೃಷ್ಣಮನಾಯಕರು ನಲ್ಲೂರು ನಾಡಿನಲ್ಲಿ ಆಳ್ವಿಕೆ ನಡೆಸಿದ್ದಾರೆ.[117]

ನಲ್ಲೂರು ನಾಡಿನ ಪಾಳೆಗಾರರು ಮತ್ತು ಅವರ ಕಾಲದ ದಾನದತ್ತಿಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಇವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ. ಕ್ರಿ.ಶ.1291ರ ಹೊಯ್ಸಳ ದೊರೆ ರಾಮನಾಥನ ಶಾಸನವಿದ್ದು, ಇದರಲ್ಲಿ ದೇವದಾನ, ದೇವರ ಮೆರವಣಿಗೆ ತಿರುವಳ್ಳೆಯಾಟಂ, ಮಾದಪ್ಪುರಂ ಎಂಬ ವಿಧಿ ವಿಧಾನಗಳು ಇಳೈಪಕ್ಕನಾಡು ಹಾಗೂ ಜನವರನಾಥ ನಲ್ಲೂರುಪಾರು ವ್ಯಾಪ್ತಿಯಲ್ಲಿ ನಡೆಯುತ್ತಿದ್ದವು ಎನ್ನಲಾಗಿದೆ. ಇಲ್ಲಿ ಉಕ್ತವಾಗಿರುವ ನಲ್ಲೂರಪಾರು, ನಲ್ಲೂರ ಸೀಮೆ, ನಲ್ಲೂರಪಟ್ಟು ಎಂಬರ್ಥ ಕೊಡುತ್ತದೆ. ನಲ್ಲೂರಸೀಮೆಗೆ ಜನವರನಾಥ ಎಂಬ ಪೂರ್ವಪ್ರತ್ಯಯವನ್ನು ಸ್ಥಳವನ್ನು ಖಚಿತವಾಗಿ ಗುರುತಿಸುವುದಕ್ಕಾಗಿ ಸೇರಿಸಲ್ಪಟ್ಟಿದ್ದು ಬಹುಶಃ ಅದು ಜನವರನಾಥ ದೇವರಿಂದಾಗಿ ಜನವರನಾಥ ನಲ್ಲೂರಪಾರು ಆಗಿರುವ ಸಾಧ್ಯತೆಯಿದೆ.[118]

ಕ್ರಿ.ಶ.1338ರ ಶಾಸನದಲ್ಲಿ ಮಹಾಸಾಮಂತಾಧಿಪತಿ ಮಂಚಯನಾಯಕನ ಮಗ ಗುಣನನಾಯಕನು ನಂದದೇವಣ್ಣನ ಮಗ ಬಯಿರೇದೇವನಿಗೆ ಹಿರಿಯ ಕೆರೆಯ ತೆಂಕಣಕೋಡಿಯ ಹೊಲ, ಪಡುವಲು ಬೇಗೂರ ಹೊಲ-ಗದ್ದೆ, ಸೋಮಾವಂಮನ ಕೆರೆಯನ್ನು ಸರ್ವಮಾನ್ಯ ಕೊಡುಗೆಯಾಗಿ, ಯಲಹಕ್ಕ ನಾಡವರು ಮತ್ತು ನಲ್ಲೂರನಾಡವರ ಮುಂದಿಟ್ಟು ಕೊಡುತ್ತಾನೆ. ನಲ್ಲೂರನಾಡವರು ಯಲಹಕ್ಕ ನಾಡವರಷ್ಟೇ ಪ್ರಬಲ ಮತ್ತು ಪ್ರಮುಖರಾಗಿದ್ದರೆಂಬುದು ಶಾಸನೋಕ್ತ ಸಾಲಿನಿಂದ ತಿಳಿದುಬರುತ್ತದೆ.[119] ದೇವನಹಳ್ಳಿ ತಾಲೂಕು, ಗಂಗವಾರದ ಸೋಮೇಶ್ವರ ದೇವಾಲಯದ ಒಳಬಾಗಿಲಿನ ಎಡಭಿತ್ತಿ ಮೇಲಿರುವ ಕ್ರಿ.ಶ.1371ರ ಶಾಸನವೊಂದರಲ್ಲಿ ನಲ್ಲೂರ ನಾಡನಾಳುವ ಅರಸು ತಂಗಿದ್ದ ಪಟ್ಟಣ ಎನ್ನಲಾಗಿದೆ.[120] ನಲ್ಲೂರಿನ ರಾಮಸ್ವಾಮಿ ದೇವಸ್ಥಾನದ ಮುಂದಿರುವ ಕ್ರಿ.ಶ.1386ರ ಶಾಸನವು ಮಹಾಸಾಮಂತಾಧಿಪತಿ ಸೊಂಣಯನಾಯಕರ ಕುಮಾರ ಚಿಕ್ಕ ಅಂಕಿಯನಾಯಕರು ತಿರುಮಲೆನಾಥ ದೇವರಿಗೆ

ದೀಪಮಾಲೆ ಕಂಬವನ್ನು ಪ್ರತಿಷ್ಠಾಪಿಸಿದ ಬಗ್ಗೆ ವಿವರಿಸುತ್ತದೆ. [121]ಜಾಲಹೋಬಳಿ ಚಿಕ್ಕಜಾಲದ ಕೇಶವ ದೇವಾಲಯದ ಹೊರಪ್ರಾಕಾರದಲ್ಲಿರುವ ಕ್ರಿ.ಶ.1412ರ ಶಾಸನವು ಶ್ರೀವಿಷ್ಣುವರ್ಧನನಚತುರ್ವೇದಿಮಂಗಲದ ಶ್ರೀ ಚನ್ನಕೇಶವನಾಥ ದೇವರಿಗೆ ಉಷಾಕಾಲ ಉಪಾಹಾರಕ್ಕೆ ಶ್ರೀ ಮನ್ಮಹಾಸಾಮಂತಾಧಿಪತಿ ಚಲವಳಿಕದ ಚಾಉಂಡಿಯನಾಯಂಕರ ಕುಮಾರ ಚಾಉಂಡಿಯನಾಯಕರು ನಲ್ಲೂರನಾಡ ಮುತ್ತುಗದಹಳ್ಳಿಯಲು ಕ್ಷೇತ್ರಪಾಲನೆಯ ಮಾಡುವಂತಾಗಿ ಕೊಟ್ಟ ದತ್ತಿಶಾಸನ ತಿಳಿಸುತ್ತದೆ.[122]

ದೇವನಹಳ್ಳಿ ತಾಲೂಕು ಚನ್ನರಾಯಪಟ್ಟಣ ಹೋಬಳಿ ಧರ್ಮಪುರದ ತಿರುಮಲದೇವರ ಗುಡಿಗೆ ಉತ್ತರ ತೋಟಿಇ ಇನಾಮತಿ ಹೊಲದಲ್ಲಿರುವ ಕ್ರಿ.ಶ.1447ರ ಶಾಸನದಲ್ಲಿ ವಿರುಪಾಕ್ಷ ದೇವರಾಯ ಮಹಾರಾಯರು ನಲ್ಲೂರಗಾಡಿಗೆ ಸಲ್ಲುವ ಧರ್ಮನಪುರ ಗ್ರಾಮವನ್ನು ದಾನ ಕೊಟ್ಟಿರುವ ಸಂಗತಿಯಿದೆ.[123]

ಶ್ರೀ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಕೃಷ್ಣಮನಾಯಕನು, ದೊರೆಯಿಂದ ನಲ್ಲೂರ ಸೀಮೆಯ ಪ್ರಭುತ್ವವನ್ನು ಪಡೆದು ಸೀಮೆಯೊಳಗಿನ ಮುಂಡಬೇಲಿ ಸ್ಥಳಕ್ಕೆ ಸಲ್ಲುವ ವೊಡಹಳ್ಳಿಯನ್ನು ದೀಪಾರಾಧನೆ, ಅಂಗರಂಗ ಚಟುವಟಿಕೆಗಳಿಗಾಗಿ ಹೊಸಬಣನಾಯಕನಿಗೆ ಕೊಡುತ್ತಾನೆಂಬ ವಿಷಯ ಕ್ರಿ.ಶ.1522ರ ಸುಗಟೂರು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ.[124]

ಹೊಸಕೋಟೆ ತಾಲೂಕು ನಂದಗುಡಿ ಹೋಬಳಿ ವೊಡ್ಡರಹಳ್ಳಿ ಗ್ರಾಮಕ್ಕೆ ನೈಋತ್ಯ ಲಕ್ಷ್ಮೀನಾರಾಯಣ ದೇವಾಲಯದ ಈಶಾನ್ಯದಲ್ಲಿ ಕ್ರಿ.ಶ.1530ರ ಶಾಸನವಿದೆ. ಇದರಲ್ಲಿ ಅಚ್ಯುತರಾಯ ಮಹಾರಾಯರು ಪೃಥ್ವಿರಾಜ್ಯಂಗೆಯುತಿರಲು, ಮುಳುಬಾಗಿಲು ಸಾಳುವ ಕೆಂಚಣನಾಯಕರ ಕುಮಾರ ವೀರಪ್ಪನಾಯಕ-ದಾಸಪ್ಪನಾಯಕರು ಒಟ್ಟಾಗಿ ನಲ್ಲೂರು ರಾಜ್ಯಕ್ಕೆ ಸಲ್ಲುವ ನಂದುಗುಳಿ ಸ್ಥಳದ ವೊಡ್ಡರಹಳ್ಳಿಯನ್ನು ಆಶ್ಲಾಯನಸೂತ್ರದ ರುಕುಶಾಖಾಧ್ಯಾಯಿಗಳಾದ ಚತುರ್ವೇದಿಮಂಗಲದಲ್ಲಿರುವ ಕೃಷ್ಣಭಟ್ಟರ ಮಕ್ಕಳು ಸೋಮನಾಥ ದೀಕ್ಷಿತರಿಗೆ ಹಿರಣ್ಯೋದಕ ದಾನವಾಗಿ ಕೊಟ್ಟರೆಂದು ಹೇಳಲಾಗಿದೆ.[125]

ಶಿಡ್ಲಘಟ್ಟ ತಾಲೂಕು ಜಂಗಮಕೋಟೆ ಹೋಬಳಿ, ದೊಡ್ಡ ಚೊಕ್ಕೊಂಡಹಳ್ಳಿ ಬಸವಣ್ಣ ಗುಡಿಯ ಮುಂಭಾಗದಲ್ಲಿರುವ ಕ್ರಿ.ಶ.1530ರ ಶಾಸನವು ತುಳುವ ವಂಶದ ಅಚ್ಯುತರಾಯನ ಕಾಲದ್ದಾಗಿದೆ. ಕಾಸ್ಯಪಗೋತ್ರದ ಸೂರ್ಯವಂಶೋದ್ಭೂತರಾದ ಶ್ರೀ ತಿವುಡಬೇಹಾರ

ಮಹಾಪಾತ್ರೆ, ಶ್ರೀ ಸೋಮಶೀಲದೇವು ರಾಹುತ್ತರಾಯ ಮಹಾಪಾತ್ರೆಯರು ವಡಿಗಿಹಳ್ಳಿಯ ಸೋಮೇಶ್ವರ ದೇವರ ಅಮೃತಪಡಿಗೆ ಕೊಟ್ಟ ಭೂದಾನದ ಬಗ್ಗೆ ತಿಳಸುತ್ತದೆ.[126]

ಇದೇ ತಾಲೂಕಿನ ಬಸವಾಪಟ್ಟಣಕ್ಕೆ ಪೂರ್ವದ ಪೊದೆಯಲ್ಲಿರುವ ಕ್ರಿ.ಶ.1531ರ ಶಾಸನವು ಅಚ್ಯುತರಾಯ ಮಹಾರಾಯರು ರಾಉತ್ತರಾಯ ಮಹಾಪಾತ್ರೆಯರಿಗೆ ಉಂಬಳಿಯಾಗಿ ಕೊಟ್ಟ ನಲ್ಲೂರಸೀಮೆಯ ಮಂಡಬೆಲೆ ಸ್ಥಳದ ಬಸವಾಪಟ್ಟನವನ್ನು ಉಲ್ಲೇಖಿಸುತ್ತದೆ.[127]

ಗಂಜಿಗುಂಟೆ (ಈಗ ಚಿಕ್ಕಬಳ್ಳಾಪುರ) ಹೋಬಳಿಯಲ್ಲಿರುವ ಕುಂದಲಗುರಿಕೆ ಗ್ರಾಮದ ಬಸವನ ಗುಡಿಯ ಹಿಂದಿನ ಬಂಡೆಯ ಮೇಲಿರುವ ಕ್ರಿ.ಶ.1523ರ ಶಾಸನದಲ್ಲಿ ನಲ್ಲೂರನಾಡಿಗೆ ಸಲ್ಲುವ ಮಳಲೂರ ಸ್ಥಳದ ಕುಂದಲ ಗುರುಕಿಯ ಗ್ರಾಮಗಳಿಗೆ ಯಾರೊಬ್ಬರೂ ಮದುವೆ ಮಾಡಿದರೂ ಸುಂಕವಿಲ್ಲವೆಂದು ನಾಡಗವುಂಡಪಗಳ ಮುಂದಿಟ್ಟು ಧರ್ಮಶಾಸನವನ್ನು ಹಾಕಿಸಿದವರು ಕೃಷ್ಣದೇವರಾಯ ಮಹಾರಾಯರ ನಿರೂಪವಿಡಿದ ಕೃಷ್ಣಮನಾಯಕರು ಎಂದು ಉಲ್ಲೇಖಿಸಲ್ಪಟ್ಟಿದೆ.[128]

ಸುಮಾರು ಕ್ರಿ.ಶ.1380ರಿಂದ ಮೂರು ಶತಮಾನಗಳಿಗಿಂತಲೂ ಹೆಚ್ಚು ಕಾಲ 'ನಾಡು' ಎನಿಸಿದ್ದ ನಲ್ಲೂರಿನ ಪ್ರದೇಶಗಳು ಕ್ರಿ.ಶ.1697ರಲ್ಲಿ ಆವತಿನಾಡಪ್ರಭುವಾದ ಗೋಪಾಲಗೌಡರ ಆಡಳಿತಾವಧಿಯಲ್ಲಿ ದೇವಣಪುರ ರಾಜ್ಯಕ್ಕೆ ಸೇರ್ಪಡೆಗೊಳ್ಳುತ್ತವೆ. ಕ್ರಿ.ಶ.1698ನೇ ಇಸವಿಯ ಹೊತ್ತಿಗೆ ನಲ್ಲೂರುನಾಡು ಹೋಬಳಿಯ ಸ್ಥಾನಕ್ಕೆ ಇಳಿಯಿತು.[129] ಒಟ್ಟಾರೆಯಾಗಿ ಇಂದಿನ ದೇವನಹಳ್ಳಿ ತಾಲೂಕು ಚನ್ನರಾಯಪಟ್ಟಣ ಹೋಬಳಿಯ ನಲ್ಲೂರನ್ನು ಕೇಂದ್ರಸ್ಥಾನವಾಗಿ ಮಾಡಿಕೊಂಡ ನಲ್ಲೂರನಾಡ ನಾಯಕರು, ಚನ್ನರಾಯಪಟ್ಟಣ ಹೋಬಳಿಯ ಧರ್ಮನಪುರ, ಬೂದಿಗೆರೆ ಹೋಬಳಿಯ ಗಂಗವಾರ, ಚಿಕ್ಕೋಹಳ್ಳಿ, ಸಿಂಗೋಹಳ್ಳಿ, ಜಾಲ ಹೋಬಳಿಯ ಮುತ್ತುಗದಹಳ್ಳಿ, ಬೇಗೂರು, ಶಿಡ್ಲಘಟ್ಟ ತಾಲೂಕು ಜಂಗಮಕೋಟೆ ಹೋಬಳಿಯ ಮುಂಡಬೇಲಿ, ವೊಡಹಳ್ಳಿ, ಬಸವಾಪಟ್ಟಣ, ಚೊಕ್ಕೊಂಡಹಳ್ಳಿ, ಚಿಕ್ಕಬಳ್ಳಾಪುರ ಹೋಬಳಿಯ ಮುಳೂರು, ಕುಂದಲಗುರುಕಿ ಹಾಗೂ ಹೊಸಕೋಟೆ ತಾಲೂಕಿನ ನಂದಗುಡಿ ಹೋಬಳಿಯ ವೊಡ್ಡರಹಳ್ಳಿ ಗ್ರಾಮಗಳನ್ನು ತಮ್ಮ ವ್ಯಾಪ್ತಿಗೆ ಅಂತರ್ಗತಪಡಿಸಿಕೊಂಡಿದ್ದರು.

**ಬಿಜಾಪುರ ಸುಲ್ತಾನರು ಮತ್ತು ಮರಾಠರು:**

ಕ್ರಿ.ಶ.1490ರಲ್ಲಿ ಯೂಸೂಫ್ ಆದಿಲ್ ಷಾಹನು ಬಿಜಾಪುರದಲ್ಲಿ ಆದಿಲ್‌ಷಾಹಿ ರಾಜ ಮನೆತನವನ್ನು ಸ್ಥಾಪಿಸಿದನು. ಕ್ರಿ.ಶ.1638ರಲ್ಲಿ ಬಿಜಾಪುರದ ಮಹಮದ್ ಆದಿಲ್ ಷಾಹಿಯ

ಸೇನಾನಿ ರಣದುಲ್ಲಾಖಾನ್‌ನು ಷಹಜಿ ಬೋಂಸ್ಲೆಯ ಜೊತೆಗೂಡಿ ದಕ್ಷಿಣ ಕರ್ನಾಟಕದ ಮೇಲೆ ದಾಳಿ ನಡೆಸಿದನು, ಇವರು ಸಿರಾ, ಹಿರಿಯೂರುಗಳನ್ನು ವಶಪಡಿಸಿಕೊಂಡು ಶಿವಗಂಗೆಗೆ ಆಗಮಿಸಿದರು ಬೆಂಗಳೂರಿನ 2ನೇ ಕೆಂಪೇಗೌಡನನ್ನು ಸೋಲಿಸಿ ಬೆಂಗಳೂರನ್ನು ವಶಪಡಿಸಿಕೊಂಡನು ಇದರಿಂದಾಗಿ 2ನೇ ಕೆಂಪೇಗೌಡನು ಮಾಗಡಿ–ಸಾವನದುರ್ಗ ಪ್ರದೇಶಗಳಿಗೆ ಹೋಗಬೇಕಾಯಿತು. ಷಹಜಿಗೆ ಬೆಂಗಳೂರನ್ನು ಜಹಗೀರನ್ನಾಗಿ ನೀಡಲಾಯಿತು ಅದರ ಜೊತೆಗೆ ದೊಡ್ಡಬಳ್ಳಾಪುರ, ಹೊಸಕೋಟೆ, ಚಿಕ್ಕಬಳ್ಳಾಪುರ, ಕೋಲಾರ, ಚಿಂತಾಮಣಿ ಮುಂತಾದ ಪ್ರದೇಶಗಳು ಜಹಾಗೀರಾಗಿ ದೊರೆತವು.

ಷಹಜಿಯ ಅನುಪಸ್ಥಿತಿಯಲ್ಲಿ ಆತನ ಮಗನಾದ ಸಾಂಬಾಜಿಯು ಬೆಂಗಳೂರು ಜಹಗೀರಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಬೆಂಗಳೂರು ಜಹಗೀರು ಬಿಜಾಪುರ ಆದಿಲ್‌ಷಾಹಿಗಳ ಪ್ರಾಂತ್ಯದ ಒಂದು ಭಾಗವಾಗಿದ್ದು ಸಿರಾವನ್ನು ಒಳಗೊಂಡಿತ್ತು. ಷಹಜಿಯ ಮಗನಾದ ಶಿವಾಜಿಯು ಸ್ವತಂತ್ರ ರಾಜ್ಯಸ್ಥಾಪನೆಯ ಉದ್ದೇಶವನ್ನು ಹೊಂದಿದ್ದನು, ಷಹಜಿಯ ನಂತರ ಏಕೋಜಿಯು ಬೆಂಗಳೂರು ಜಹಗೀರು ಮೇಲೆ ಅಧಿಕಾರ ಪಡೆದನು. ಏಕೋಜಿಯು ಕ್ರಿ.ಶ.1675ರಲ್ಲಿ ತಂಜಾವೂರನ್ನು ವಶಪಡಿಸಿಕೊಂಡನು. ಈ ನಡುವೆ ಶಿವಾಜಿಯು ತಮಿಳುನಾಡಿನ ಜಿಂಜಿಯನ್ನು ವಶಪಡಿಸಿಕೊಂಡನು. ಏಕೋಜಿಯು ಶಿವಾಜಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಭಾಗ ನೀಡಲು ನಿರಾಕರಿಸಿದನು. ಇದರಿಂದಾಗಿ ಶಿವಾಜಿಯು ಕ್ರಿ.ಶ.1677ರಲ್ಲಿ ಬೆಂಗಳೂರು ಜಹಗೀರನ್ನು ವಶಪಡಿಸಿಕೊಂಡನು, ಬೆಂಗಳೂರು ಮತ್ತು ಹೊಸಕೋಟೆಗಳನ್ನು ಏಕೋಜಿಯ ಪತ್ನಿ ದೀಪಾಬಾಯಿಗೆ ನೀಡಿದನು.[130]

**ಮೊಘಲರ ಆಳ್ವಿಕೆ**

ಈ ಭಾಗದಲ್ಲಿ ಮೊಘಲರ ದಾಳಿಗಳು ಮತ್ತು ಆಳ್ವಿಕೆ ಕಂಡುಬರುತ್ತದೆ. ಮೊಘಲ್ ಸೈನ್ಯವು ಕ್ರಿ.ಶ.1680ರಲ್ಲಿ ಬಿಜಾಪುರವನ್ನು ವಶಪಡಿಸಿಕೊಂಡಿತು ನಂತರ ದಕ್ಷಿಣ ಕರ್ನಾಟಕದ ಕಡೆ ಆಗಮಿಸಿ, ಕ್ರಿ.ಶ.1687ರಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡಿತು, ಔರಂಗಜೇಬನ ಆಳ್ವಿಕೆಯ 31ನೇ ವರ್ಷದಲ್ಲಿ ಮೊಘಲರ ಖಾಸಿಂ ಖಾನನು ಸಾಂಬಾಜಿಯಿಂದ ದೊಡ್ಡಬಳ್ಳಾಪುರವನ್ನು ವಶಪಡಿಸಿಕೊಂಡನು. ಕ್ರಿ.ಶ.1691ರಲ್ಲಿ ದೊಡ್ಡಬಳ್ಳಾಪುರ ಕೋಟೆಯನ್ನು ದೆಹಲಿಯ ಶೇಕ್ ಅಬ್ದುಲ್ಲ ಎಂಬುವನ ವಶಕ್ಕೆ ನೀಡಲಾಯಿತು. ಮೊಘಲ್ ಸೇನಾನಿ ಖಾಸಿಂ ಖಾನನು ಬೆಂಗಳೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ಮೈಸೂರಿನ ಚಿಕ್ಕದೇವರಾಜ ಒಡೆಯರಿಗೆ ಇಜಾರವಾಗಿ (ಬೋಗ್ಯಕ್ಕೆ) 3 ಲಕ್ಷ ರೂಪಾಯಿಗಳಿಗೆ ಬಿಟ್ಟುಕೊಟ್ಟನು, ಬೆಂಗಳೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳು ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿದ್ದರೂ ದೊಡ್ಡಬಳ್ಳಾಪುರ, ಹೊಸಕೋಟೆ

ಮತ್ತು ಇತರೆ ಪ್ರದೇಶಗಳು ಸಿರಾದ ಆಡಳಿತಕ್ಕೆ ಒಳಪಟ್ಟಿದ್ದವು. ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟ ಬೆಂಗಳೂರು ಮುಂದೆ ಹೈದರ್ ಅಲಿ, ಟಿಪ್ಪು ಸುಲ್ತಾನ್ ಹಾಗೂ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟು ಅನೇಕ ಬದಲಾವಣೆಗಳನ್ನು ಕಂಡಿತು.[131]

**ಮೈಸೂರು ಒಡೆಯರು:**

ಮೈಸೂರು ಒಡೆಯರು 15ನೇ ಶತಮಾನದ ಪ್ರಾರಂಭದಲ್ಲಿ ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದು, ವಿಜಯನಗರ ಪತನ ನಂತರ, 17ನೇ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಸ್ವತಂತ್ರವಾಗಿ ಆಳ್ವಿಕೆ ನಡೆಸಿದರು. 18ನೇ ಶತಮಾನದಲ್ಲಿ ದೊಡ್ಡ ಮತ್ತು ಕಿರಿಯ ಸಂಸ್ಥಾನಗಳು ಹೈದರ್ ಅಲಿಯ ಪರಿಶ್ರಮದಿಂದ ಮೈಸೂರು ಸಂಸ್ಥಾನಕ್ಕೆ ಒಳಪಟ್ಟವು. ಮೈಸೂರು ಒಡೆಯರು ಪ್ರಾರಂಭದಲ್ಲಿ ಮೈಸೂರಿನಿಂದ ನಂತರ ಕ್ರಿ.ಶ.1610ರಿಂದ ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು, ಕ್ರಿ.ಶ.1799ರಲ್ಲಿ ಅವರು ತಮ್ಮ ರಾಜಧಾನಿಯನ್ನು ಶ್ರೀರಂಗಪಟ್ಟಣದಿಂದ ಮೈಸೂರಿಗೆ ವರ್ಗಾಯಿಸಿದರು. ಕ್ರಿ.ಶ.1831ರ ನಂತರ ಬೆಂಗಳೂರನ್ನು ಆಡಳಿತಾತ್ಮಕ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡಿರು. ಮೈಸೂರು ಒಡೆಯರು ಕನ್ನಡ ನಾಡು, ನುಡಿ, ಪರಂಪರೆ, ಕೃಷಿ, ನೀರಾವರಿ, ಕೈಗಾರಿಕೆ, ವಿದ್ಯುಚ್ಛಕ್ತಿ, ಸಾಹಿತ್ಯ, ಶಿಕ್ಷಣ, ಸಂಗೀತ, ಕಲೆ ಮುಂತಾದ ಕ್ಷೇತ್ರಗಳ ಬೆಳವಣಿಗೆಗೆ ಪ್ರೋತ್ಸಾಹಿಸಿದರು.

ಮೈಸೂರು ಒಡೆಯರು ತಮ್ಮನ್ನು ದ್ವಾರಕೆಯ ಯಾದವ ವಂಶಕ್ಕೆ ಸೇರಿದವರೆಂದು ಮತ್ತು ಕ್ರಿ.ಶ.1399ರಿಂದ ತಮ್ಮ ಆಳ್ವಿಕೆ ಪ್ರಾರಂಭವಾಯಿತ್ತೆಂದು ಕರೆದುಕೊಂಡಿದ್ದಾರೆ. ಕ್ರಿ.ಶ.16ನೇಶತಮಾನದಲ್ಲಿ 3ನೇ ಬೆಟ್ಟದ ಚಾಮರಾಜ ಒಡೆಯರ್‌ರವರ ಕಾಲದಲ್ಲಿ ಇವರ ಆಳ್ವಿಕೆ ಸ್ಪಷ್ಟವಾಗಿ ಕಂಡುಬಂದಿದೆ. ಇವರು ವಿಜಯನಗರದ ಸಾಮ್ರಾಟ ಕೃಷ್ಣದೇವರಾಯನ ಸಮಕಾಲೀನ ಮತ್ತು ಸಾಮಂತರಾಗಿದ್ದರು. ಇವರ ನಂತರ 2ನೇ ತಿಮ್ಮರಾಜ (ಕ್ರಿ.ಶ.1553–72) 4ನೇ ಚಾಮರಾಜ ಒಡೆಯರ್ (ಬೋಳ) (ಕ್ರಿ.ಶ.1572–76) ಬೆಟ್ಟದ ಒಡೆಯರ್ (ಕ್ರಿ.ಶ.1576–78) ನಂತರ ರಾಜಒಡೆಯರ್ (ಕ್ರಿ.ಶ.1578–1617) ಎಂಬುವರು ಆಳ್ವಿಕೆ ನಡೆಸಿದರು.[132]

ಇವರ ನಂತರ ಇವರ ಮೊಮ್ಮಗನಾದ 5ನೇ ಚಾಮರಾಜ ಒಡೆಯರ್ (ಕ್ರಿ.ಶ.1617–37) ಎಂಬುವರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು. ಇವರು ಕ್ರಿ.ಶ.1629–30ರಲ್ಲಿ ಚನ್ನಪಟ್ಟಣ ಮತ್ತು ದೇವನಹಳ್ಳಿಗಳನ್ನು ವಶಪಡಿಸಿಕೊಂಡರು ಇವರ ನಂತರ 2ನೇ ರಾಜಒಡೆಯರ್ (ಕ್ರಿ.ಶ.1637–38) ಎಂಬುವರು ಅಲ್ಪಾವದಿಗೆ ಆಳ್ವಿಕೆ ನಡೆಸಿದರು ಇವರ ನಂತರ 1ನೇ ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ.1638–59) ಎಂಬುವರು ಆಳ್ವಿಕೆ ನಡೆಸಿದರು. ಇವರ ಕಾಲದಲ್ಲಿ ಬಿಜಾಪುರದ

ಸೇನಾನಿ ರಣದುಲ್ಲಾಖಾನ್ ಬೆಂಗಳೂರು ಮತ್ತು ಶ್ರೀರಂಗಪಟ್ಟಣಗಳನ್ನು ವಶಪಡಿಸಿಕೊಂಡನುನಂತರ ಇವುಗಳನ್ನು ರಣಧೀರರು ಪಡೆದುಕೊಂಡರು.[133]ಇವರು ಬೆಂಗಳೂರು ಬಳಿಯ ಯಲಹಂಕವನ್ನು ಪಡೆದುಕೊಂಡರು ಇವರ ಆಸ್ಥಾನ ಕವಿ ಗೋವಿಂದ ವೈದ್ಯ ರಚಿಸಿರುವ ಕಂಠೀರವ ನರಸರಾಜ ವಿಜಯಂ ಎಂಬ ಕೃತಿಯು ಇವರ ಆಳ್ವಿಕೆ ಮತ್ತು ಇತರೆ ವಿಷಯಗಳ ಬಗ್ಗೆ ಉಲ್ಲೇಖಿಸುತ್ತದೆ. ಈ ಕೃತಿಯಲ್ಲಿ ಕರ್ನಾಟಕಕ್ಕೆ ಖಾನನು ಬಂದುದು ಎಂಬ ಶೀರ್ಷಿಕೆಯಡಿಯಲ್ಲಿ ಪುಟ ಸಂಖ್ಯೆ 211, ಪದ್ಯಸಂಖ್ಯೆ 62ರಲ್ಲಿ ಬಲ್ಲಾಳಪುರ, ಕೋಳಾಲ, ಬಿಜ್ಜಾವರಗಳನ್ನು ಉಲ್ಲೇಖಿಸಿದೆ ಇಲ್ಲಿ ಉಲ್ಲೇಖಿಸಲ್ಪಟ್ಟಿರುವ ಬಿಜ್ಜಾವಾರ ಪ್ರದೇಶವು ಈ ಭಾಗಕ್ಕೆ ಸೇರಿದ ಪ್ರದೇಶವಾಗಿದೆ[134]ಇದೇ ಕೃತಿಯ ಪು.ಸಂ.212, ಪದ್ಯ ಸಂಖ್ಯೆ 62ರಲ್ಲಿ ದೇವಂಡಪುರಿ, ಸೂರೆಬೆಲೆ, ಸಿಡಿಲ್‌ಗಟ್ಟದ ಎಂದು ಉಲ್ಲೇಖಿಸಲಾಗಿದೆ ಇದರಲ್ಲಿ ಉಲ್ಲೇಖವಾಗಿರುವ ದೇವಂಡಪುರಿ ದೇವನಹಳ್ಳಿಯಾಗಿದೆ[135]

ಇವರ ನಂತರ ದೊಡ್ಡದೇವರಾಜ ಒಡೆಯರ್ (ಕ್ರಿ.ಶ.1659-1673) ಎಂಬುವರು ಆಳ್ವಿಕೆ ನಡೆಸಿದರು. ಇವರ ನಂತರ ಚಿಕ್ಕದೇವರಾಜ ಒಡೆಯರ್ (ಕ್ರಿ.ಶ.1673-1704) ಎಂಬುವರು ಆಳ್ವಿಕೆ ನಡೆಸಿದರು. ಮೊಘಲರು ಸಿರಾ ಮತ್ತು ಬೆಂಗಳೂರುಗಳನ್ನು 1687ರಲ್ಲಿ ವಶಪಡಿಸಿಕೊಂಡರು ಇವರು ಮೊಘಲರಿಂದ ಬೆಂಗಳೂರು ಮತ್ತು ಹೊಸಕೋಟೆಗಳನ್ನು ಇಜಾರ (ಬೋಗ್ಯ) ಮೇಲೆ ಪಡೆದುಕೊಂಡು ನಿಯಮಿತವಾಗಿ ವಂತಿಗೆಯನ್ನು ಪಾವತಿಸಲು ಮತ್ತು ಮೊಘಲರ ಸೇವೆಗೆ ಅಧೀನ ಸೈನ್ಯವನ್ನು ನೀಡಲು ಸಮ್ಮತಿಸಿದರು[136]ಇವರ ನಂತರ 2ನೇ ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ.1704-1714) ಎಂಬುವರು ಆಳ್ವಿಕೆ ನಡೆಸಿದರು. ಇವರ ಕಾಲದಲ್ಲಿ ಕಳಲೆ ಕುಟುಂಬದವರು ಕಳಲೆ ಚೆಲುವರಾಯ ಮತ್ತು ಕಳಲೆ ದೇವರಾಜಯ್ಯ ಎಂಬುವರು ದಳವಾಯಿಗಳಾಗಿ, ಸರ್ವಾಧಿಕಾರಿಗಳಾಗಿ ಅಧಿಕಾರ ಚಲಾಯಿಸಿದರು. ಇವರ ನಂತರ 7ನೇ ಚಾಮರಾಜ ಒಡೆಯರ್ (ಕ್ರಿ.ಶ.1732-34) ಎಂಬುವರು ಆಳ್ವಿಕೆ ನಡೆಸಿದರು, ಕಳಲೆ ಕುಟುಂಬದವರು ಎಲ್ಲಾ ರೀತಿಯ ಅಧಿಕಾರಗಳನ್ನು ತಮ್ಮಲ್ಲೇ ಕೇಂದ್ರಿಕರಿಸಿಕೊಂಡಿದ್ದರು. 1ನೇ ಕೃಷ್ಣರಾಜನ ವಿಧವೆ ರಾಣಿಯಾದ ದೇವರಾಜಮ್ಮ ಎಂಬುವರು 2ನೇ ಕೃಷ್ಣರಾಜ ಎಂಬುವರನ್ನು ದತ್ತು ತೆಗೆದುಕೊಂಡರು. ಇವರು ಕ್ರಿ.ಶ.1734ರಿಂದ ಕ್ರಿ.ಶ.1766ರವರೆಗೆ ಆಳ್ವಿಕೆ ನಡೆಸಿದರು. ಈ ನಡುವೆ ಮರಾಠರ ಪೇಶ್ವೆ ಸಂಬಂಧಿಯಾದ ಬಾಬೂಜಿ ನಾಯಕ್ ಎಂಬುವನು ಕ್ರಿ.ಶ.1747ರಲ್ಲಿ ದೇವನಹಳ್ಳಿ ತಾಲೂಕಿನ ಯಲೂರು ಮತ್ತು ಬೇಡೂರುಗಳನ್ನು ವಶಪಡಿಸಿಕೊಂಡನು, ಇಲ್ಲಿಯ ಕೋಟೆಗಳನ್ನು ಸ್ವಲ್ಪ ಸಮಯದವರೆಗೆ ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದನು, ನಂತರ ಈತನು ದೊಡ್ಡಬಳ್ಳಾಪುರದ ರಂಗೇಗೌಡನಿಗೆ, ನಾರಾಯಣಗೌಡನ

ಆಳ್ವಿಕೆಗೆ ಒಳಪಟ್ಟಿದ್ದ ದೇವನಹಳ್ಳಿಯನ್ನು ವಶಪಡಿಸಿಕೊಳ್ಳಲು ನೆರವು ನೀಡಿದನು ಆದರೆ ಮೈಸೂರು ಸೈನ್ಯವು ಗುತ್ತಿಯ ಘೋರ್ಪಡೆ ಸಹಾಯದಿಂದ ದೇವನಹಳ್ಳಿಯನ್ನು ವಶಪಡಿಸಿಕೊಂಡಿತು. ದಳವಾಯಿ ಕಳಲೆ ನಂಜರಾಜಯ್ಯನು ಕ್ರಿ.ಶ.1749ರಲ್ಲಿ ದೇವನಹಳ್ಳಿಯನ್ನು ವಶಪಡಿಸಿಕೊಂಡನು, ಈ ಮುತ್ತಿಗೆಯಲ್ಲಿ ಹೈದರ್ ಅಲಿಯು ಪ್ರಮುಖ ಪಾತ್ರವಹಿಸಿದನು.ದೇವನಹಳ್ಳಿಯು ಮೈಸೂರು ಪ್ರಾಂತ್ಯಕ್ಕೆ ಸೇರ್ಪಡೆಗೊಂಡಿತು.[137]

ಎರಡನೇ ಕೃಷ್ಣರಾಜ ಒಡೆಯರು ಚಾಮುಂಡೇಶ್ವರಿ ದೇವಿಗೆ ದತ್ತಿ ನೀಡಿದರು.[138]ನಂಜನಗೂಡಿನ ನಂಜುಂಡೇಶ್ವರಸ್ವಾಮಿಯ ಪೂಜಾ ಕಾರ್ಯಕ್ರಮಗಳಿಗಾಗಿ ದತ್ತಿ ನೀಡಿದರು.[139]ಕ್ರಿ.ಶ.1753ರಲ್ಲಿ ಮರಾಠರು ಚಿಕ್ಕಬಳ್ಳಾಪುರ ಮತ್ತು ದೇವನಹಳ್ಳಿಗಳನ್ನು ವಶಪಡಿಸಿಕೊಂಡರು.[140]

ಮೈಸೂರಿನ ಒಡೆಯರ್ ಮತ್ತು ದಳವಾಯಿ ನಂಜರಾಜಯ್ಯರ ನಡುವೆ ಅವಿಶ್ವಾಸಗಳು ಮೂಡಿಬಂದವು. ಮೈಸೂರು ಸೈನ್ಯವು ಸಂಬಳ ಮತ್ತು ಹಿಂಬಾಕಿಗಳ ಪಾವತಿಗೋಸ್ಕರ ಅರಮನೆ ಮತ್ತು ನಂಜರಾಜಯ್ಯನ ಮನೆಮುಂದೆ ಧರಣಿ ನಡೆಸಿತು, ಖಜಾನೆ ಬರಿದಾಗಿದ್ದರಿಂದ ಸೈನಿಕರಿಗೆ ಹಣ ಪಾವತಿಸಲು ಸಾಧ್ಯವಾಗಲಿಲ್ಲ. ಹೈದರನು ಖಂಡೇರಾವ್ ಮುಂತಾದವರ ಸಹಾಯದಿಂದ ಪರಿಸ್ಥಿತಿಯನ್ನು ನಿಯಂತ್ರಿಸಿದನು. ಹೈದರನು ಮರಾಠರನ್ನು ಸೋಲಿಸಿ ಬೆಂಗಳೂರನ್ನು ವಶಪಡಿಸಿಕೊಂಡನು ಬೆಂಗಳೂರು ಹೈದರನ ಜಹಗೀರಾಯಿತು. ಹೈದರ್‌ನು ದಳವಾಯಿ ನಂಜರಾಜಯ್ಯನನ್ನು ಕ್ರಿ.ಶ.1758ರಲ್ಲಿ ಅಧಿಕಾರದಿಂದ ಕಿತ್ತುಹಾಕಿದನು, 2ನೇ ಕೃಷ್ಣರಾಜ ಒಡೆಯರು ಹೈದರನಿಗೆ ನವಾಬ್ ಹೈದರ್ ಅಲಿಖಾನ್ ಎಂಬ ಬಿರುದು ನೀಡಿ ಗೌರವಿಸಿದರು. 2ನೇ ಕೃಷ್ಣರಾಜ ಒಡೆಯರ ನಂತರ ಇವರ ಮಗ ನಂಜರಾಜ (ಕ್ರಿ.ಶ.1766-70) ಎಂಬುವರು ಆಳ್ವಿಕೆ ನಡೆಸಿದರು. ಈತನು ನಾಮಮಾತ್ರ ಅರಸನಾಗಿದ್ದನು. ನಂತರ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರವರು ಸರ್ವಾಧಿಕಾರಿಗಳಾಗಿ ಆಳ್ವಿಕೆ ನಡೆಸಿದರು. ಟಿಪ್ಪುವಿನ ಪತನ ನಂತರ ಅಧಿಕಾರಕ್ಕೆ ಬಂದ ಮೈಸೂರು ಅರಸರು ಬ್ರಿಟಿಷರ ಅಧೀನದಲ್ಲಿ ಆಳ್ವಿಕೆ ನಡೆಸಿದರು.[141]

**ಹೈದರ್ ಅಲಿ:**

ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರು ಮೈಸೂರಿನ ಇತಿಹಾಸದಲ್ಲಿ ಪ್ರಸಿದ್ಧ ವ್ಯಕ್ತಿಗಳಾಗಿದ್ದು ಜಾಗತಿಕವಾಗಿ ಗಮನವನ್ನು ಸೆಳೆದು ದಕ್ಷಿಣ ಭಾರತದಲ್ಲಿ ಪ್ರಮುಖ ಪಾತ್ರವನ್ನು ವಹಿಸಿ, ಬ್ರಿಟಿಷರ ವಿರುದ್ಧ ಹೋರಾಟವನ್ನು ನಡೆಸಿದರು. ಮೈಸೂರನ್ನು ಒಂದು ಪ್ರಬಲ ಶಕ್ತಿಯನ್ನಾಗಿ ರೂಪಿಸಿದ ಕೀರ್ತಿ ಹೈದರನಿಗೆ ಸಲ್ಲುತ್ತದೆ ಹೈದರನು ಮೈಸೂರಿನ ದಳವಾಯಿ ನಂಜರಾಯ್ಯನ ನೇತೃತ್ವದಲ್ಲಿ

ನಡೆದ ಕ್ರಿ.ಶ.1749ರ ದೇವನಹಳ್ಳಿಯ ಮುತ್ತಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿ ಪ್ರಖ್ಯಾತಿಗೆ ಬಂದನು.[142]

ಹೈದರನು ಕ್ರಿ.ಶ.1751ರಲ್ಲಿ ಸಿರಾವನ್ನು ನಂತರ ಕ್ರಿ.ಶ.1762ರಲ್ಲಿ ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಪೆನುಕೊಂಡ, ಮಡಕಶಿರಗಳನ್ನು, ಕ್ರಿ.ಶ.1763ರಲ್ಲಿ ಕೆಳದಿಯ ರಾಜಧಾನಿ ಬಿದನೂರನ್ನು ಕ್ರಿ.ಶ.1764ರಲ್ಲಿ ಸೋಂದೆಯನ್ನುವಶಪಡಿಸಿಕೊಂಡನು. ಕ್ರಿ.ಶ.1767ರಲ್ಲಿ ಮೊದಲ ಆಂಗ್ಲೋ-ಮೈಸೂರು ಯುದ್ಧದಲ್ಲಿ ಭಾಗಿಯಾಗಿದ್ದನು, ಕ್ರಿ.ಶ.1769ರಲ್ಲಿ ಬ್ರಿಟಿಷರನ್ನು ಸೋಲಿಸಿದನು ಮತ್ತುಕ್ರಿ.ಶ.1770ರಲ್ಲಿ ಮದ್ರಾಸ್ ಒಪ್ಪಂದಕ್ಕೆ ಸಹಿ ಹಾಕಿಸಿದನು ಇದು ಬ್ರಿಟಿಷರಿಗೆ ಅಪಮಾನಕರ ಒಪ್ಪಂದವಾಗಿತ್ತು, ಕ್ರಿ.ಶ.1773ರಲ್ಲಿ ಕೊಡಗನ್ನು ವಶಪಡಿಸಿಕೊಂಡನು, ಮರಾಠರಿಂದ ಶಿರಾ, ಹೊಸಕೋಟೆ, ದೊಡ್ಡಬಳ್ಳಾಪುರಗಳನ್ನು ವಶಪಡಿಸಿಕೊಂಡನು ಕ್ರಿ.ಶ.1779ರಲ್ಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. 2ನೇ ಆಂಗ್ಲೋ-ಮೈಸೂರು ಯುದ್ಧವು ನಡೆಯುತ್ತಿರುವಾಗ, ಡಿಸೆಂಬರ್ 16, 1782ರಂದು ಕಾಯಿಲೆಯಿಂದ ನಿಧನ ಹೊಂದಿದನು.[143]

ಹೈದರನು ಮುಸ್ಲಿಂನಾದರೂ ಧರ್ಮವನ್ನು ರಾಜಕಾರಣದೊಂದಿಗೆ ಬೆರೆಸಲಿಲ್ಲ. ಆತನು ಧಾರ್ಮಿಕ ಸಹಿಷ್ಣುತೆಯನ್ನು ಹೊಂದಿದ್ದನು. ಈತನು ದೇವನಹಳ್ಳಿಯ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯಕ್ಕೆ ಬೆಳ್ಳಿ ಬಟ್ಟಲನ್ನು ದಾನ ನೀಡಿದನು[144]ಹೈದರನು ದೇವನಹಳ್ಳಿ ಕೋಟೆಯನ್ನು ಪುನರ್ ನಿರ್ಮಿಸಲು ಪ್ರಾರಂಭಿಸಿದನು.

**ಟಿಪ್ಪುಸುಲ್ತಾನ್ (ಕ್ರಿ.ಶ.1750-99)**

ಮೈಸೂರು ಹುಲಿ ಎಂದು ಹೆಸರಾಗಿರುವ ಟಿಪ್ಪುಸುಲ್ತಾನನು ಕ್ರಿ.ಶ.1750, ನವೆಂಬರ್ 10ರಂದು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ ಜನಿಸಿದನು[145]ಟಿಪ್ಪುವು ಹೈದರ್ ಅಲಿ ಮತ್ತು ಫಕರುನ್ನೀಸರವರ ಮಗ. ಈತನು ಕ್ರಿ.ಶ.1782ರಿಂದ ಕ್ರಿ.ಶ.1799ರವರೆಗೆ ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮೈಸೂರು ಪ್ರಾಂತ್ಯದಲ್ಲಿ ಆಳ್ವಕೆಯನ್ನು ನಡೆಸಿದನು.. 1ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಭಾಗಿಯಾಗಿದ್ದನು. ಟಿಪ್ಪುವು 2ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೈದರ್ ನಿಧನದ ನಂತರ ಯುದ್ಧವನ್ನು ಮುಂದುವರೆಸಿದನು ಕ್ರಿ.ಶ.1783ರಲ್ಲಿ ವಾಂಡಿವಾಷ್ ಕದನದಲ್ಲಿ ಬ್ರಿಟಿಷರನ್ನು ಸೋಲಿಸಿದನು. ಕ್ರಿ.ಶ.1784ರಲ್ಲಿ ಬ್ರಿಟಿಷರೊಂದಿಗೆ ಮಂಗಳೂರು ಒಪ್ಪಂದವನ್ನು ಮಾಡಿಕೊಂಡನು. 3ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ (ಕ್ರಿ.ಶ.1790-92) ಸೋತುಶ್ರೀರಂಗಪಟ್ಟಣ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದಂತೆ ಟಿಪ್ಪುವು ತನ್ನ ಅರ್ಧರಾಜ್ಯವನ್ನು ಮತ್ತು ಯುದ್ಧನಷ್ಟ ಪರಿಹಾರವನ್ನು ಬ್ರಿಟಿಷರಿಗೆ

ನೀಡಬೇಕಾಯಿತು. ಈ ಒಪ್ಪಂದವು ಟಿಪ್ಪುವನ್ನು ಘಾಸಿಗೊಳಿಸಿತು. ಟಿಪ್ಪುವು 4ನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ನಿಧನ ಹೊಂದಿದನು (ಕ್ರಿ.ಶ.1799) ನಂತರ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಅಧಿಕಾರಕ್ಕೆ ಬಂದರು.[146]

ಟಿಪ್ಪುವಿಗೆ ಜಾಗತಿಕ ವಿದ್ಯಮಾನಗಳ ಅರಿವಿತ್ತು, ವಿಜ್ಞಾನ, ತಂತ್ರಜ್ಞಾನಗಳ ಬೆಳವಣಿಗೆ ಬಗ್ಗೆ ಮಾಹಿತಿ ಇತ್ತು ಈತನು ಮೈಸೂರು ರಾಜ್ಯದ ಅಭಿವೃದ್ಧಿಗೆ ಶ್ರಮಿಸಿದನು. ಮೈಸೂರು ಪ್ರಾಂತ್ಯದಲ್ಲಿ ಚನ್ನಪಟ್ಟಣ ಮತ್ತು ರಾಮನಗರಗಳನ್ನು ಒಳಗೊಂಡಂತೆ ಇತರೇ ಕಡೆ ದೊಡ್ಡ ಪ್ರಮಾಣದಲ್ಲಿ ರೇಷ್ಮೆಯನ್ನು ಪರಿಚಯಿಸಿದನು. ಈತನು ಹತ್ತಿ ರಫ್ತನ್ನು ನಿಷೇದಿಸಿ ಬಟ್ಟೆ ಕೈಗಾರಿಕೆಗೆ ಉತ್ತೇಜನ ನೀಡಿ ತಮಿಳುನಾಡಿನ (ಬಾರಮಹಲ್) ನೇಕಾರರು ರಾಜ್ಯದಲ್ಲಿ ನೆಲೆಸುವಂತೆ ಮಾಡಿದನು, ಈತನು ಕಬ್ಬು ಉತ್ಪಾದನೆಗೆ ಪ್ರೋತ್ಸಾಹಿಸಿ ಉತ್ತಮ ಗುಣಮಟ್ಟದ ಸಕ್ಕರೆ ಮತ್ತು ಬೆಲ್ಲದ ಪಾಕಗಳನ್ನು ದೇವನಹಳ್ಳಿ ಮತ್ತು ಹೊಸಕೋಟೆಗಳಲ್ಲಿ ಉತ್ಪಾದಿಸಲು ಪ್ರೋತ್ಸಾಹಿಸಿದನು. ಪಶುಪಾಲನೆಯನ್ನು ಪ್ರೋತ್ಸಾಹಿಸಿದನು, ಮದ್ಯಪಾನ ಮತ್ತು ಮಾದಕ ದ್ರವ್ಯಗಳನ್ನು ನಿಷೇದಿಸಿದನು ದೇವನಹಳ್ಳಿಯಲ್ಲಿ ಆರ್ಡ್‌ನ್ಯಾನ್ಸ್ ಕಾರ್ಖಾನೆಯನ್ನು ಸ್ಥಾಪಿಸಿದನು. ಬೆಂಗಳೂರಿನ ತಾರಮಂಡಲ ಪೇಟೆಯಲ್ಲಿ ರಾಕೆಟ್‌ಗಳನ್ನು ತಯಾರಿಸಲಾಗುತ್ತಿತ್ತು. ನೀರಾವರಿ ಕಡೆ ಗಮನಹರಿಸಿದನು. ಬಂಜರು ಭೂಮಿಯನ್ನು ಸಾಗುವಳಿಗೆ ಒಳಪಡಿಸಿದನು. ರೈತರಿಗೆ ಟೆಕ್ಕಾವಿ ಸಾಲಗಳನ್ನು ಮಂಜೂರು ಮಾಡಿದನು. ಹಿಂದೂ ದೇವಾಲಯಗಳಿಗೆ ಉದಾರವಾಗಿ ದಾನ–ದತ್ತಿ ನೀಡಿದನು ವಿಶೇಷವಾಗಿ ಶೃಂಗೇರಿ ಮಠಕ್ಕೆ ದತ್ತಿ ನೀಡಿದನು. ಉಳುವವನಿಗೆ ಭೂ ಒಡೆಯ ಎಂಬ ತತ್ವದ ಆಧಾರದ ಮೇಲೆ ಕಂದಾಯ ವ್ಯವಸ್ಥೆಯನ್ನು ಜಾರಿಗೆ ತಂದು ಜಹಗೀರುಪದ್ಧತಿಯನ್ನು ರದ್ದುಮಾಡಿ ಕಂದಾಯ ವಸೂಲಿಯಲ್ಲಿ ಅಧಿಕಾರಿಗಳನ್ನು ನೇಮಿಸಿದನು.[147] ಖಾಸ್‌ಬಾಗ್ ತೋಟಪದ್ಧತಿ ಮತ್ತು ಕೃಷಿಯ ವಾಣಿಜ್ಯಕರಣ ಉತ್ತೇಜನ ನೀಡಿದನು.

ಟಿಪ್ಪುವಿನ ಪತನ ನಂತರ ಬ್ರಿಟಿಷರು ಚಾಮರಾಜ ಒಡೆಯರ್‌ರವರ 5ವರ್ಷದ ಮಗನಾದ 3ನೇ ಕೃಷ್ಣರಾಜ ಒಡೆಯರ್‌ರವರ ಹಕ್ಕುದಾರಿಕೆಯನ್ನು ಮಾನ್ಯಮಾಡಿದರು. ಟಿಪ್ಪುವಿನ ಮಂತ್ರಿಯಾದ ದಿವಾನ್ ಪೂರ್ಣಯ್ಯನನ್ನು ಆಡಳಿತಗಾರನೆಂದು ಅಂಗೀಕರಿಸಿದರು.ಬ್ರಿಟಿಷರು ರಾಣಿ ಲಕ್ಷ್ಮಮಣ್ಣಿಯೊಂದಿಗೆ ಕ್ರಿ.ಶ.1792ರಲ್ಲಿ ಒಪ್ಪಂದ ಮಾಡಿಕೊಂಡು ರಾಜಕುಟುಂಬದ ಹಕ್ಕುದಾರಿಕೆಯನ್ನು ಅಂಗೀಕರಿಸಿದರು.[148]

ಹೈದರ್ ಮತ್ತು ಟಿಪ್ಪುಸುಲ್ತಾನರು ದೇವನಹಳ್ಳಿ ಬಗ್ಗೆ ಭಾವನಾತ್ಮಕವಾದ ಸಂಬಂಧವನ್ನು ಹೊಂದಿದ್ದರು. ದೇವನಹಳ್ಳಿ ಮುತ್ತಿಗೆಯು ಹೈದರ್‌ನನ್ನು ಖ್ಯಾತಿಗೆ ಒಯ್ದಿತು. ಟಿಪ್ಪುಸುಲ್ತಾನನು ದೇವನಹಳ್ಳಿಯಲ್ಲಿ ಜನಿಸಿದ್ದ ಇದರಿಂದ ಈ ಕುಟುಂಬವು ದೇವನಹಳ್ಳಿ ಬಗ್ಗೆ ವಿಶೇಷ ಆಸಕ್ತಿಯನ್ನು ಹೊಂದಿತ್ತು. ಹೈದರನು ದೇವನಹಳ್ಳಿ ಕೋಟೆಯನ್ನು ಪುರ್ನನಿರ್ಮಿಸಿದನು. ಟಿಪ್ಪುವು ದೇವನಹಳ್ಳಿಯನ್ನು ಯೂಸೂಫಾಬಾದ್ ಎಂದು ಕರೆದನು, ಈ ಹೆಸರು ಹೆಚ್ಚು ಪ್ರಸಿದ್ಧಿಯಾಗಲಿಲ್ಲ, ಈ ಭಾಗದಲ್ಲಿ ಹೈದರ್ ಮತ್ತು ಟಿಪ್ಪು ಬಗ್ಗೆ ದಂತ ಕಥೆಗಳಿವೆ, ಮೀರ್ ಹುಸೇನ್ ಅಲಿ ಕಿರ್ಮಾನಿ ಹೇಳುವಂತೆ ದೇವನಹಳ್ಳಿಯು ಟಿಪ್ಪುವಿನ ಬೇಟೆ ಮತ್ತು ವಿಹಾರದ ಅಚ್ಚುಮೆಚ್ಚಿನ ತಾಣವಾಗಿತ್ತು.

**ಕಿರು ರಾಜಮನೆತನಗಳು ಮತ್ತು ಪ್ರಾದೇಶಿಕ ಆಡಳಿತ ವಿಭಾಗಗಳು**:

ಆಡಳಿತದ ಅನುಕೂಲಕೋಸ್ಕರ ಹಲವಾರು ಆಡಳಿತ ವಿಭಾಗಗಳು ರಚನೆಯಾಗಿದ್ದವು. ಶಾಸನಗಳು ಆಡಳಿತ ವಿಭಾಗಗಳನ್ನು ಉಲ್ಲೇಖಿಸಿವೆ, ಗಂಗರ ಕಾಲದಲ್ಲಿ ಇಡೀ ಜಿಲ್ಲೆ ಗಂಗವಾಡಿ ೯೬೦೦೦ ಎಂಬ ಪ್ರದೇಶದಲ್ಲಿ ಅಂತರ್ಗತವಾಗಿತ್ತು. ಕ್ರಿ.ಶ.11ನೇ ಶತಮಾನದ ಪ್ರಾರಂಭದಲ್ಲಿ ಈ ಪ್ರದೇಶವು ಚೋಳರ ವಶವಾಯಿತು ಅವರ ಪ್ರವೇಶದೊಂದಿಗೆ ಮಂಡಲ, ವಳನಾಡು, ಗ್ರಾಮ ಎಂಬ ಆಡಳಿತ ವಿಭಾಗಗಳು ಕಂಡುಬಂದವು, ಅವುಗಳಲ್ಲಿ ಮುದಿಗೊಂಡ ಚೋಳ ಮಂಡಲ ವಿಕ್ರಮಚೋಳ ಮಂಡಲ ನಂತರದಲ್ಲಿ ನಿಗರಿಲಿಚೋಳಮಂಡಲ ರಾಜೇಂದ್ರ ಚೋಳ ವಳನಾಡು ಮುಂತಾದ ನಾಡುಗಳ ಉಲ್ಲೇಖಗಳು ಕಂಡುಬರುತ್ತವೆ. ಚೋಳರ ಕಾಲದಲ್ಲಿ ಅನೇಕ ಗ್ರಾಮಗಳನ್ನು ಚತುರ್ವೇದಿ ಮಂಡಲನ್ನಾಗಿ ಅಂದರೆ ಅಗ್ರಹಾರಗಳನ್ನಾಗಿ ಬ್ರಾಹ್ಮಣರಿಗೆ ದಾನ ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ಇದೇ ಪದ್ಧತಿ ಹೊಯ್ಸಳರ ಕಾಲದಲ್ಲೂಮುಂದುವರೆದಿರುವುದು ಕಂಡುಬರುತ್ತದೆ. ಗಂಗರ ಕಾಲದಲ್ಲಿ ಪ್ರಚಲಿತದಲ್ಲಿದ್ದ ಅನೇಕ ನಾಡುಗಳು ಚೋಳ ಮತ್ತು ಹೊಯ್ಸಳರ ಕಾಲದಲ್ಲೂ ಮುಂದುವರೆದಿರುವುದು ಕಂಡುಬರುತ್ತದೆ. ಉದಾಹರಣೆಗೆ ಮೊರಸುನಾಡುಸಣ್ಣೆನಾಡು ಮುಂತಾದವು. ವಿಜಯನಗರದ ಕಾಲದ ಆಡಳಿತ ವಿಭಾಗಗಳೆಂದರೆ ರಾಜ್ಯ, ಚಾವಡಿ/ವಳಿತ/ವೇಂಠೆ, ನಾಡು/ಸೀಮೆ, ಸ್ಥಳ ಮತ್ತು ಗ್ರಾಮ ಮುಂತಾದವು. ಬೆಂಗಳೂರು ಜಿಲ್ಲೆಯ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ವಿಜಯನಗರ ಕಾಲದವರೆಗೆ ಕಂಡುಬಂದ ಆಡಳಿತ ವಿಭಾಗಗಳನ್ನು ಗುರುತಿಸಬಹುದಾದ್ದು ಅವುಗಳನ್ನುಈ ಮುಂದಿನಂತೆ ವಿವರಿಸಲಾಗಿದೆ.

**ಗಂಗವಾಡಿ ೯೬೦೦೦**: ಇದು ಗಂಗರ ಆಳ್ವಿಕೆಯ ಪೂರ್ಣಪ್ರದೇಶವನ್ನು ಪ್ರತಿನಿಧಿಸುತ್ತದೆ. ಕ್ರಿ.ಶ.೮೯೦ರ ಬೇಗೂರು ಶಾಸನದಲ್ಲಿ ಗಂಗವಾಡಿ ತೊಂಬತ್ತಾರು ಸಾವಿರದ

ಉಲ್ಲೇಖವಿದೆ.[149] ಚೋಳರ ಮತ್ತು ಹೊಯ್ಸಳರ ಕಾಲದ ಅನೇಕ ಶಾಸನಗಳಲ್ಲಿ ಗಂಗಪಾಡಿಯೆಂದು ಈ ಪ್ರದೇಶವನ್ನು ಕರೆದಿರುವುದು ಕಂಡುಬರುತ್ತದೆ.

**ಗಂಗ 6000:** ಬೆಂಗಳೂರು ದಕ್ಷಿಣ ತಾಲೂಕಿನ ವರ್ತೂರು ಗ್ರಾಮದ ಶಾಸನ ಕ್ರಿ.ಶ.ಸುಮಾರು 820 (ಬಿ.ಎನ್.40) ಮತ್ತು ಹೊಸಕೋಟೆ ತಾಲೂಕಿನ ಜೋಡಿ ದಳಸೆಗೆರೆ ಗ್ರಾಮದ ಶಾಸನ ಸುಮಾರು ಕ್ರಿ.ಶ.870 (ಹೆಚ್.ಟಿ.9) ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[150] ಬೆಂಗಳೂರು ಜಿಲ್ಲೆಯ ಪೂರ್ವಕ್ಕಿರುವ ಕೋಲಾರ ಮತ್ತು ಧರ್ಮಪುರಿ ಜಿಲ್ಲೆಯ ಅನೇಕ ಪ್ರಾಚೀನ ಶಾಸನಗಳಲ್ಲಿ ಗಂಗ 6000 ಪ್ರದೇಶದ ಉಲ್ಲೇಖಗಳು ಕಂಡುಬರುತ್ತವೆ.

**ಪುನ್ನಾಡ 70:** ಕ್ರಿ.ಶ.ಸುಮಾರು 900ರ ದೇವನಹಳ್ಳಿ ತಾಲೂಕಿನ ಅರದೇಶನಹಳ್ಳಿ ಗ್ರಾಮದ ಶಾಸನಗಳಲ್ಲಿ ಪುನ್ನಾಡ ಎಂದು ಉಲ್ಲೇಖಿಸಲ್ಪಟ್ಟಿದೆ.[151] ದೊಡ್ಡಬಳ್ಳಾಪುರ ತಾಲೂಕಿನ ಶಿವಪುರ ಶಾಸನದಲ್ಲಿ ಪುಣ್ಣಾಡಯಪತ್ತನಾಡು ಎಂದು ಉಕ್ತವಾಗಿದೆ.[152] ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರ ತಾಲೂಕಿನ ಸಾಂಪ್ರದಾಯಿಕವಾಗಿ 70 ಗ್ರಾಮವನ್ನೊಳಗೊಂಡ ಒಂದು ಆಡಳಿತ ವಿಭಾಗ ಇದಾಗಿದ್ದಿತು.

**ಸಳ್ನೆ 300/ಸಣ್ಣೆನಾಡು:** ಕ್ರಿ.ಶ.ಸುಮಾರು 900ರ ದೇವನಹಳ್ಳಿ ತಾಲೂಕಿನ ಅರದೇಶಹಳ್ಳಿಯ ರಾಷ್ಟ್ರಕೂಟರ ಶಾಸನದಲ್ಲಿ 'ಸಳ್ನೆ ಮೂನೂಳಂ' ಎಂಬ ಉಲ್ಲೇಖ ದೊರೆಯುತ್ತದೆ.[153] ಇದೇ ತಾಲೂಕಿನ ಬ್ಯಾಡರಹಳ್ಳಿ ಶಾಸನದಲ್ಲಿ ಸಣ್ಣೆನಾಡಿನ ತಿಪ್ಪೂರು ವಿಕ್ರಮಸೋಳ ಮಂಡಲಂನ ಭಾಗವೆಂದು ಉಲ್ಲೇಖಿಸಲ್ಪಟ್ಟಿದೆ.[154] ಸಣ್ಯೆನಾಡು ಎಂದು ಆವತಿ ಮತ್ತು ಗಂಗವಾರ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ[155] ಗಂಗವಾರ ಶಾಸನದಲ್ಲಿ ಸಣ್ಯೆನಾಡು ವಿಕ್ರಮಸೋಳ ಮಂಡಲಂ ಭಾಗವೆಂದು ಉಲ್ಲೇಖಿಸಲ್ಪಟ್ಟಿದೆ.[156] ಕಾರಹಳ್ಳಿ ಶಾಸನದಲ್ಲಿ ಸಣ್ಯೆನಾಡು ನಿಗರಿಲ ಸೋಳಮಂಡಲಂ ಭಾಗವೆಂದು ಉಲ್ಲೇಖಿಸಲ್ಪಟ್ಟಿದೆ[157] ಈ ಗ್ರಾಮಗಳ ಶಾಸನಗಳಲ್ಲಿ ಈ ನಾಡಿನ ಉಲ್ಲೇಖವಿದ್ದು ಆವತ್ತಿಯೂರು, ಕೊಡವತ್ತಿ, ಮಾಳ್ವೆಮಾಂಪಳ್ಳಿ (ನಂದಿಸಮುದ್ರ) ಗ್ರಾಮಗಳು ಉಲ್ಲೇಖಿಸಲ್ಪಟ್ಟಿವೆ.

**ಕುಣುಂಗಿ-500:** ಕುಣಂಗಿಯು ಕ್ರಿ.ಶ.900ರಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಒಂದು ಪ್ರಾದೇಶಿಕ ವಿಭಾಗವಾಗಿತ್ತು.[158]

**ವಿಕ್ರಮ ಚೋಳ ಮಂಡಲ**: ದೇವನಹಳ್ಳಿ ತಾಲೂಕಿನಕ್ರಿ.ಶ. 1050ರ ಗಂಗವಾರ ಶಾಸನ ಮತ್ತು ಕ್ರಿ.ಶ.1067ರ ಬ್ಯಾಡರಹಳ್ಳಿ ಶಾಸನಗಳು ಈ ನಾಡಿನ ಬಗ್ಗೆ ಉಲ್ಲೇಖಿಸುತ್ತವೆ.[159]ಈ ನಾಡಿನಲ್ಲಿ ಸಣ್ಣೆನಾಡು ಕುಕ್ಕನೂರು ನಾಡು, ಮಣ್ಣೆನಾಡುಗಳು ಅಂತರ್ಗತವಾಗಿದ್ದವೆಂದು ತಿಳಿದುಬರುತ್ತದೆ.

**ನಿಗಿರಿಲಿ ಚೋಳಮಂಡಲ**:ದೇವನಹಳ್ಳಿ ತಾಲೂಕಿನ ಕಾರಹಳ್ಳಿ ಶಾಸನವು ಈ ಮಂಡಲದ ಬಗ್ಗೆ ಉಲ್ಲೇಖಿಸುತ್ತದೆ. [160]ಈ ಶಾಸನದ ಪ್ರಕಾರ ಸಣ್ಣೆನಾಡು ಈ ಮಂಡಲದಲ್ಲಿ ಅಂತರ್ಗತವಾಗಿತ್ತು.

**ಎಲಹಕ್ಕನಾಡು (ಇಲೈಕಪಾಕ್ಕನಾಡು)**:ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲೂಕುಗಳ ಶಾಸನಗಳಲ್ಲಿ ಈ ನಾಡಿನ ಬಗ್ಗೆ ಉಲ್ಲೇಖವಿದೆ. ದೇವನಹಳ್ಳಿ ತಾಲೂಕಿನ ಜಾಲಿಗೆ, ಯಂಬ್ರಳ್ಳಿ, ಸುರಧೇನಪುರ, ಸಾದೇನಹಳ್ಳಿ, ಕಾಡಿಗೇನಹಳ್ಳಿ, ಚಿಕ್ಕಜಾಲ, ಬಂಡೆ ಕೊಡಿಗೆಹಳ್ಳಿ, ಜಾಲ, ಕಾಡಿಗೇನಹಳ್ಳಿ, ಚಿಕ್ಕಜಾಲ, ಬಂಡೆ ಕೊಡಿಗೆಹಳ್ಳಿ ಮೊದಲಾದ ಊರುಗಳಲ್ಲಿ ಎಲಹಕ್ಕನಾಡನ್ನು ಉಲ್ಲೇಖಿಸುವ ಶಾಸನಗಳಿವೆ. ಈ ನಾಡಿನ ಕೇಂದ್ರಸ್ಥಾನ ಬೆಂಗಳೂರು ಉತ್ತರಕ್ಕಿರುವ ಈಗಿನ ಯಲಹಂಕವಾಗಿದೆ. ಇದು ವಿಜಯನಗರ ಕಾಲದಲ್ಲಿ ಕೆಂಪೇಗೌಡನ ವಂಶೀಕರ ರಾಜಧಾನಿಯಾಗಿತ್ತು. ಇಂದಿನ ಬೆಂಗಳೂರು ತಾಲೂಕುಗಳ ಪೂರ್ವಭಾಗ ಹೊಸಕೋಟೆ ತಾಲೂಕಿನ ಪಶ್ಚಿಮಭಾಗ ಸ್ವಲ್ಪ ಹೆಚ್ಚು ಕಡಿಮೆ ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲೂಕುಗಳನ್ನು ಒಳಗೊಂಡಂತಹ ಒಂದು ದೊಡ್ಡನಾಡು ಇದಾಗಿದ್ದಿತು.[161]

**ಅಂಜದ ನಾಡು**: ದೇವನಹಳ್ಳಿ ತಾಲೂಕಿನ ವಡಿಗೇನಹಳ್ಳಿ ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ಒಳಗೊಂಡ ನಾಡಾಗಿತ್ತು. ಈ ನಾಡಿನ ಬಗ್ಗೆ ದೇವನಹಳ್ಳಿ ತಾಲೂಕಿನ ಕ್ರಿ.ಶ. 1352ರ ವಡಿಗೇನಹಳ್ಳಿ ಮತ್ತು ಕ್ರಿ.ಶ.1407ರ ಮಂಗಸಂದ್ರ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.[162]

## ಅಡಿ ಟಿಪ್ಪಣಿಗಳು

1. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪುಟ ಸಂಖ್ಯೆ 40–41, 1989.

2. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪು.ಸಂ.307, 2009.

3. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ. 41, 1989.

4. ಅದೇ, ಪು.ಸಂ. 41.

5. ಅದೇ, ಪು.ಸಂ.42.

6. ಎ.ಕ.ಸಂ.9, ಎಚ್.ಟಿ, 86, ಮಾರೇನಹಳ್ಳಿ, ಪು.ಸಂ.217, ಕ್ರಿ.ಶ.720.

7. ಎ.ಕ.ಸಂ.9, ಡಿ.ವಿ.74, ಕ್ರಿ.ಶ.780, ಗಂಗವಾರ, ಪು.ಸಂ.190.

7.ಎ. ಎ.ಕ.ಸಂ.9, ಡಿ.ವಿ.67, ದಾಖಲೆ ಚಂದಪ್ಪನಹಳ್ಳಿ (ಚೌಡಪ್ಪನಹಳ್ಳಿ) ಗಂಗವಾರ, ಪು.ಸಂ.187, ಕ್ರಿ.ಶ.780.

8. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.43

9. ಅದೇ, 44, 1989.

10. ಅದೇ, ಪು.ಸಂ.44.

11. ಅದೇ, ಪು.ಸಂ.44.

12. ಅದೇ, ಪು.ಸಂ.44.

13. ಅದೇ, ಪು.ಸಂ.45.

14. ಜಯಮ್ಮ ಕರಿಯಣ್ಣ, ಹೆಚ್. ನೊಳಂಬ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ.11, 2008.

15. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪುಟ ಸಂಖ್ಯೆ–48, 1989.

16. ಅದೇ, ಪು.ಸಂ.48.

17. ಎ.ಕ.ಸಂ.9. ಬಿ.ಎನ್.83, ಕ್ರಿ.ಶ.890, ಬೇಗೂರು, ಪು.ಸಂ.30.

18. ಎ.ಕ.ಸಂ.9,ಡಿ.ವಿ,10, ಕ್ರಿ.ಶ.948, ಕೊಯಿರಾ–ಸತೇನಹಳ್ಳಿ, ಪು.ಸಂ.162.

19. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ. 49, 1989.

20. ಅದೇ, ಪು.ಸಂ.50.

21. ಎ.ಕ.ಸಂ.9.ಎಚ್.ಟಿ.111, ಕಮ್ಮಸಂದ್ರ, ಕ್ರಿ.ಶ.997, ಪು.ಸಂ.224.

22. ಎ.ಕ.ಸಂ.9, ಡಿ.ವಿ.75, ಗಂಗವಾರ, ಕ್ರಿ.ಶ.1046, ಪು.ಸಂ.190.

23. ಎ.ಕ.ಸಂ.9, ಡಿ.ವಿ.14, ಕ್ರಿ.ಶ.1067, ಬ್ಯಾಡರಹಳ್ಳಿ, ಪು.ಸಂ.163.

24. ಎ.ಕ.ಸಂ.9,ಬಿ.ಎನ್.32,ಕ್ರಿ.ಶ.1080, ಕೆಂಪಾಪುರ, ಪು.ಸಂ.17.

25. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.422. 2009.

26. ಅದೇ, ಪು.ಸಂ.878.

27. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪುಟ ಸಂಖ್ಯೆ-52, 1989.

28. ಎ.ಕ.ಸಂ.9, ಡಿ.ವಿ.42, ಕ್ರಿ.ಶ.900, ಅರದೇಶಹಳ್ಳಿ, ಪು.ಸಂ.176.

29. ಎ.ಕ.ಸಂ.9, ಡಿ.ವಿ.43, ಕ್ರಿ.ಶ.900, ಅರದೇಶಹಳ್ಳಿ, ಪು.ಸಂ.177.

30. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪುಟ ಸಂಖ್ಯೆ-53, 1989.

31. ಅದೇ, ಪು.ಸಂ.53-54.

32. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.54-55, 1989.

33. ಎ.ಕ.9, ಡಿ.ವಿ.20, ಕ್ರಿ.ಶ.1133, ಆವತಿ, ಪು.ಸಂ.167.

34. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.56, 1989.

35. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.1144, 2009.

36. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.56, 57) 1989.

37. ಎ.ಕ.ಸಂ.9, ಡಿ.ವಿ.24, ಕ್ರಿ.ಶ.1288, ಯಂಬ್ರಹಳ್ಳಿ, ಪು.ಸಂ.164.

38. ಎ.ಕ.ಸಂ.9. ಡಿ.ವಿ.54, ಕ್ರಿ.ಶ.1340, ಕಾಡಿಗಾನಹಳ್ಳಿ, ಪು.ಸಂ.182.

39. ಎಸ್.ಪಿ.9, ಡಿ.ವಿ.92, ಜೋಡಿ ಅರದೇಶಹಳ್ಳಿ, ಪು.ಸಂ.66.

40. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.58, 1989.

41. ಅದೇ, ಪು.ಸಂ.60, 61.

42. ಎ.ಕ.ಸಂ.9. ಡಿ.ವಿ.50, ಕಟ್ಟಿಗೇನಹಳ್ಳಿ, ಕ್ರಿ.ಶ.1348, ಪು.ಸಂ.181 ಮತ್ತು ಎ.ಕ.ಸಂ.9. ಬಿ.ಎನ್.59, ಕ್ರಿ.ಶ.1346, ಸಾದರಮಂಗಲ, ಪು.ಸಂ.24.

43. ಎ.ಕ.ಸಂ.9, ಬಿ.ಎನ್.47, ಕ್ರಿ.ಶ.1346, ದೊಡ್ಡಕನ್ನಲ್ಲೆ, ಪು.ಸಂ.21.

44. ಎ.ಕ.ಸಂ.9, ಡಿ.ವಿ.50, ಕ್ರಿ.ಶ.1348, ಕಟ್ಟಿಗೇನಹಳ್ಳಿ, ಪು.ಸಂ.181.

45. ಎ.ಕ.ಸಂ.9, ಡಿ.ವಿ.29, ಕ್ರಿ.ಶ.1352, ವಡಿಗೇನಹಳ್ಳಿ, ಪು.ಸಂ.169-170.

46. ಎ.ಕ.ಸಂ.9, ಡಿ.ವಿ.50, ಕ್ರಿ.ಶ.1348, ಕಟ್ಟಿಗೇನಹಳ್ಳಿ, ಪು.ಸಂ.181 ಮತ್ತು ಎ.ಕ.ಸಂ.9, ಎಚ್.ಟಿ.117, ಕ್ರಿ.ಶ.1367, ಕಿತ್ತಗನೂರು, ಪು.ಸಂ.226.

46.ಎ. ಎ.ಕ.ಸಂ.9, ಎಂ.ಎ.18, ಕ್ರಿ.ಶ.1348, ಕಲ್ಯ, ಪು.ಸಂ.105.

47. ಎ.ಕ.ಸಂ.3, ಬಿ.ಎಲ್.ರೈಸ್, ಶ್ರವಣಬೆಳಗೊಳ, ಪು.ಸಂ.136.

48. ಎ.ಕ.ಸಂ.9, ಡಿ.ವಿ.27, ಕ್ರಿ.ಶ.1358, ಬುಳ್ಳಹಳ್ಳಿ, ಪು.ಸಂ.26.

49. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, 1989, ಪು.ಸಂ.61-62.

50. ಎ.ಕ.ಸಂ.9, ಡಿ.ವಿ.32, ಕ್ರಿ.ಶ.1407, ಮಂಗಸಂದ್ರ, ಪು.ಸಂ.171-172.

51. ಎ.ಕ.ಸಂ.9, ಡಿ.ವಿ.12, ಕ್ರಿ.ಶ.1410, ಸೋಲೂರು, ಪು.ಸಂ.163.

52. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.962. 2009.

53. ಎ.ಕ.ಸಂ.9, ಡಿ.ವಿ.81, ಜೋಡಿಸಾದಹಳ್ಳಿ, ಕ್ರಿ.ಶ.1425, ಪು.ಸಂ.191-192.

54. ಎ.ಕ.ಸಂ.9. ಡಿ.ವಿ.56, ಕ್ರಿ.ಶ.1467, ಜಾಲ, ಪು.ಸಂ.183.

55. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.65-66, 1989.

56. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ,ಪು.ಸಂ. 65-66, 1989.

57. ಅದೇ, ಪು.ಸಂ.67.

58. ಅದೇ, ಪು.ಸಂ.67-68.

59. ಎ.ಕ.ಸಂ.9, ಡಿ.ಬಿ.49, ನಾಗೇನಹಳ್ಳಿ, ಕ್ರಿ.ಶ.1610, ಪು.ಸಂ.152.

60. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.69,1989.

61. ಕೃಷ್ಣಮೂರ್ತಿ, ಪಿ.ವಿ.ಶಾಸನ, ಇತಿಹಾಸ ಮಂಥನ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, ಪು.ಸಂ.131, 2011.

62. ಅದೇ, ಪು.ಸಂ.134, 2011.

63. ಅದೇ, ಪು.ಸಂ.131.

64. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ,ಪು.ಸಂ.69, 1989.

65. ಅದೇ, ಪು.ಸಂ.69.

66. ಎ.ಕ.9, ಡಿ.ವಿ.24, ಯಂಬ್ರಹಳ್ಳಿ, ಕ್ರಿ.ಶ.1288, ಪು.ಸಂ.163 ಮತ್ತು ಡಿ.ವಿ.53, ಕ್ರಿ.ಶ.1287,ಬಯನಹಳ್ಳಿ (ಜಾಲ ಹೋಬಳಿ) ಪು.ಸಂ.182.

67. ಎ.ಕ.9, ಡಿ.ವಿ., 54, ಕಾಡಿಗಾನಹಳ್ಳಿ, ಕ್ರಿ.ಶ.1340, ಪು.ಸಂ.182 ಮತ್ತು ಡಿ.ವಿ.60, ಚಿಕ್ಕಜಾಲ ಕ್ರಿ.ಶ.1328, ಪು.ಸಂ.184.

68. ಎಸ್.ಪಿ. ಎ.ಕ.ಸಂ.9 ಡಿ.ವಿ.92, ಜೋಡಿ ಅರದೇಶಹಳ್ಳಿ, ಪು.ಸಂ.66.

69. ಎ.ಕ.ಸಂ.9, ಡಿ.ವಿ.3, ಕ್ರಿ.ಶ.1345, ಜಾಲಿಗೆ, ಪು.ಸಂ.160-161.

70. ಎ.ಕ.9, ಡಿ.ವಿ.50, ಕಟ್ಟಿಗೇನಹಳ್ಳಿ, ಕ್ರಿ.ಶ.1348. ಪು.ಸಂ.181 ಮತ್ತು ಎಚ್.ಟಿ.117, ಕ್ರಿ.ಶ.1367, ಕಿತ್ತಗನೂರು, ಪು.ಸಂ.225-226.

71. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.70, 1989.

72. ಎ.ಕ.9, ಡಿ.ವಿ.58, ಕ್ರಿ.ಶ.1382, ಚಿಕ್ಕಜಾಲ, ಪು.ಸಂ.183 ಮತ್ತು 184

73. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.70, 1989.

74. ಅದೇ, ಪು.ಸಂ.74.

75. ಅದೇ, ಪು.ಸಂ.71-72.

76. ಅದೇ, ಪು.ಸಂ.72, 73.

77.ಬೆಂಗಳೂರು ಡಿಸ್ಟ್ರಿಕ್ಟ್ ಹ್ಯಾಂಡ್ ಬುಕ್, ಪು.ಸಂ.295. 1930,

78. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕು.ಕ.ಅ.ಸಂ. ಮೈ.ವಿ. ಪು.ಸಂ.590, 2009.

79. ಅದೇ, ಪು.ಸಂ.590.

80. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.75, 1989.

81. ಪುಟ್ಟಸ್ವಾಮಿ,ಬಿ.ಎಸ್.ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು, ಪು.ಸಂ.19, 2011.

82. ಅದೇ, ಪು.ಸಂ.17,

83. ಕೃಷ್ಣಮೂರ್ತಿ, ಪಿ.ವಿ.ಆವತಿನಾಡ ಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು,ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.323.

84. ಅದೇ, ಪು.ಸಂ.323.

85. ಅದೇ, ಪು.ಸಂ.324.

86. ಬೋರಯ್ಯ, ಎಚ್.ಎಂ, ಆವತಿ ನಾಡಪ್ರಭುಗಳು, ಪು.ಸಂ.10-11. 2017.

87. ಕೃಷ್ಣಮೂರ್ತಿ, ಪಿ.ವಿ.ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಆವತಿನಾಡ ಪ್ರಭುಗಳು,ಪು.ಸಂ.325.

88. ಬೋರಯ್ಯ, ಎಚ್.ಎಂ. ಆವತಿನಾಡ ಪ್ರಭುಗಳು. 2017, ಪು.ಸಂ.39.

89. ಅದೇ, ಪು.ಸಂ.14, 40.

90. ಎ.ಕ.ಸಂ.10.ಸಿ.ಬಿ.40, ಕ್ರಿ.ಶ.1428, ಕುಡುವತಿ, ಪು.ಸಂ.15.

91. ಕೃಷ್ಣಮೂರ್ತಿ,ಪಿ.ವಿ. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಕ.ವಿ.ವಿ.ಹಂಪಿ, ಆವತಿ ನಾಡಪ್ರಭುಗಳು. ಪು.ಸಂ.325.

92. ಎ.ಕ.ಸಂ.9, ಡಿ.ವಿ.55, ಕಾಡಿಗಾನಹಳ್ಳಿ, ಕ್ರಿ.ಶ.1518, ಪು.ಸಂ.182.

93. ಎ.ಕ.10, ಗೌರಿಬಿದನೂರು 52 ಕ್ರಿ.ಶ.1565 ಮುದಿಗೆರೆ ಪು.ಸಂ.24.

94. ಎ.ಕ.10, ಸಿ.ಬಿ.27. ನಂದಿ, ಕ್ರಿ.ಶ.1575, ಪು.ಸಂ.212.

95. ಎ.ಕ.10.ಸಿ.ಬಿ.27, 1575, ನಂದಿ, ಪು.ಸಂ.212.

96. ಎಸ್.ಪಿ. ಎ.ಕ.ಸಂ.9. ಡಿ.ವಿ. 82, ಕ್ರಿ.ಶ.1584. ಪು.ಸಂ.57-62.

97. ಎ.ಕ.ಸಂ.9, ಡಿ.ಬಿ.5. ಕ್ರಿ.ಶ.1586, ತಿಪ್ಪೂರು. ಪು.ಸಂ.134.

98. ಎ.ಕ.ಸಂ.9. ಡಿ.ಬಿ.7, ಕ್ರಿ.ಶ.1596, ಅಂತ್ರಹಳ್ಳಿ, ಪು.ಸಂ.135.

99. ಎ.ಕ.ಸಂ.9, ಡಿ.ಬಿ.69, ಮತ್ತು ಡಿ.ವಿ.91 ಕ್ರಿ.ಶ.1598. ಕೊಯಿರಾ, ಪು.ಸಂ. 65.

100. ಎ.ಕ.ಸಂ.9 ಡಿ.ಬಿ.49. ಕ್ರಿ.ಶ.1610, ನಾಗೇನಹಳ್ಳಿ, ಪು.ಸಂ.151-152.

101. ಎ.ಕ.ಸಂ.10, ಬಾಗೇಪಲ್ಲಿ 40, ಕ್ರಿ.ಶ.1617. ವೊಕ್ಕವಾರಪಲ್ಲಿ.

102. ಎ.ಕ.9.ಡಿ.ವಿ.71, ಕ್ರಿ.ಶ.1697, ಸಿಂಗರಹಳ್ಳಿ, ಪು.ಸಂ.188.

103. ಎ.ಕ.ಸಂ.10, ಎಸ್.ಡಿ.31, ಕ್ರಿ.ಶ.1640, ಬೂದಿಹಾಳು, ಪು.ಸಂ.183.

104. ಕೃಷ್ಣಮೂರ್ತಿ, ಪಿ.ವಿ.ಆವತಿ ನಾಡಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆಗಳು, ಕ.ವಿ.ಹಂಪಿ, ಪು.ಸಂ.327 ಮತ್ತು 328.

105. ಎ.ಕ.ಸಂ. 9, ಡಿ.ವಿ.51, ಕ್ರಿ.ಶ.1697, ಬೇಗೂರು, ಪು.ಸಂ.181.

106. ಎ.ಕ.ಸಂ. 9,ಡಿ.ಬಿ.63, ಕ್ರಿ.ಶ.1716, ಮಾವಳಪುರ, ಪು.ಸಂ.157.

107. ಎ.ಕ.ಸಂ.9. ಡಿ.ಬಿ.30, ಕ್ರಿ.ಶ.1729, ವಡಿಗೇನಹಳ್ಳಿ, ಪು.ಸಂ.170-171.

108. ಎ.ಕ.ಸಂ.9.ಡಿ.ಬಿ.63, ಕ್ರಿ.ಶ.1716, ಮಾವಳಪುರ, ಪು.ಸಂ.157.

109. ಎ.ಕ.ಸಂ.10.ಚಿಂತಾಮಣಿ, 14, ಕ್ರಿ.ಶ.1748, ಬೋಡಂಪಲ್ಲಿ, ಪು.ಸಂ.303.

110. ಬೋರಯ್ಯ.ಎಚ್.ಎಂ. ಆವತಿ ನಾಡಪ್ರಭುಗಳು, 2017, ಪು.ಸಂ.63-64.

111. ಎ.ಕ.ಸಂ.10. ಎಸ್.ಡಿ.95, ಕ್ರಿ.ಶ.1792, ಸಾದಲಿ, ಪು.ಸಂ.20.

112. ಎ.ಕ.ಸಂ.10. ಎಸ್.ಡಿ.95, ಸಾದಲಿ, ಕ್ರಿ.ಶ.1792, ಪು.ಸಂ.20.

113. ಕಲಬುರ್ಗಿ,ಎಂ.ಎಂ. ಸಂಪಾದಕರು, ಕರ್ನಾಟಕದ ಕೈಫಿಯತ್ತುಗಳು, ಕ.ವಿ.ವಿ. ಹಂಪಿ, ಪು.ಸಂ.69-74, 1994.

114. ಮೈಸೂರು ಗ್ಯಾಸೆಟಿಯರ್, ಪು.ಸಂ.157, 158.

115. ಆದೆಪ್ಪ ಪಾಸೋಡಿ, ಪುರಾವಸ್ತು, ಬೆಂಗಳೂರು 2016, ಪು.ಸಂ.145.

116. ಅದೇ, ಪು.ಸಂ.160.

117.ಅದೇ, ಪು.ಸಂ.163.

118. ಎ.ಕ.ಸಂ.9, ಡಿ.ವಿ.45, ಕ್ರಿ.ಶ.1291, ಸುರದೇನಪುರ, ಪು.ಸಂ.180.

119. ಎ.ಕ.ಸಂ.9, ಡಿ.ವಿ.72, ಕ್ರಿ.ಶ.1338, ಬಂಡಿಕೊಡಿಗೇನಹಳ್ಳಿ, ಪು.ಸಂ.189.

120. ಎ.ಕ.ಸಂ.9, ಡಿ.ವಿ. 73, ಗಂಗವಾರ, ಕ್ರಿ.ಶ. 1371, ಪು.ಸಂ.189.

121. ಎ.ಕ.ಸಂ.9, ಡಿ.ವಿ.40, ನಲ್ಲೂರು, ಕ್ರಿ.ಶ.1386, ಪು.ಸಂ.176.

122. ಎ.ಕ.ಸಂ.9, ಡಿ.ವಿ.59, ಕ್ರಿ.ಶ.1412, ಚಿಕ್ಕಜಾಲ, ಪು.ಸಂ.184.

123. ಎ.ಕ.ಸಂ.9 ಡಿ.ವಿ.38, ಕ್ರಿ.ಶ.1447, ಧರ್ಮಪುರ, ಪು.ಸಂ.175.

124. ಎ.ಕ.ಸ.ಂ.10. ಶಿಡ್ಲಘಟ್ಟ 10, ಕ್ರಿ.ಶ.1522, ಸುಗಟೂರು.

125. ಎ.ಕ.ಸಂ.9, ಹೆಚ್.ಟಿ. 28. ಕ್ರಿ.ಶ.1530, ವೊಡ್ಡರಹಳ್ಳಿ, ಪು.ಸಂ.202.

126. ಎ.ಕ.ಸಂ.10, ಶಿಡ್ಲಘಟ್ಟ, 18, ಕ್ರಿ.ಶ.1530. ದೊಡ್ಡ ಚೊಕ್ಕೊಂಡಹಳ್ಳಿ.

127. ಎ.ಕ.ಸಂ.10, ಶಿಡ್ಲಘಟ್ಟ, 22, ಕ್ರಿ.ಶ.1531, ಬಸವಾಪಟ್ಟಣ.

128. ಎ.ಕ.ಸಂ.10, ಶಿಡ್ಲಘಟ್ಟ, 79, ಕ್ರಿ.ಶ.1523, ಕುಂದಲಗುರಿಕೆ.

129. ಆದಪ್ಪ ಪಾಸೋಡಿ, ಪುರಾವಸ್ತು, ಬೆಂಗಳೂರು 2016, ಪು.ಸಂ.165.

130. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.76-77.

131. ಅದೇ, ಪು.ಸಂ.78.

132. ಅದೇ, ಪು.ಸಂ.79.

133. ಅದೇ, ಪು.ಸಂ.81.

134. ಶಾಮಶಾಸ್ತ್ರಿ, ಆರ್.ಸಂ. ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ, ಕನ್ನಡಅಧ್ಯಯನ ಸಂಸ್ಥೆ, ಮೈಸೂರು ವಿ.ವಿ, ಪು.ಸಂ.211. 1971.

135. ಅದೇ, ಪು.ಸಂ.212.

136. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.82. 1989.

137. ಅದೇ, ಪು.ಸಂ.83, 84, 85.

138. ಎ.ಎಸ್.ಎಂ.ಆರ್.1914, 1749, ದೇವನಹಳ್ಳಿ ತಾಲೂಕು, ಜಾಲಿಗೆ, ಪು.ಸಂ.50.

139. ಎ.ಕ.ಸಂ.9. ಡಿ.ವಿ.69, 1751, ಬಾಗಲೂರು, ಪು.ಸಂ.187-88.

140. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.85.

141. ಅದೇ, ಪು.ಸಂ.85.

142. ಅದೇ, ಪು.ಸಂ.86.

143. ಅದೇ, ಪು.ಸಂ.87-88.

144. ಎಸ್.ಪಿ, ಎ.ಕ.ಸಂ.9, ಡಿ.ವಿ.83. ಪು.ಸಂ.62.

145. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.453. 2009.

146. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.89. 1989.

147. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.453. 2009.

148. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, ಪು.ಸಂ.92, 1989.

149. ಎ.ಕ.ಸಂ.9,ಬಿ.ಎನ್.83, ಕ್ರಿ.ಶ.890 ಬೇಗೂರು, ಪು.ಸಂ.30.

150. ಕೃಷ್ಣಮೂರ್ತಿ,ಪಿ.ವಿ, ಶಾಸನ ಇತಿಹಾಸ ಮಂಥನ, ತುಮಕೂರು ವಿಶ್ವವಿದ್ಯಾಲಯ, ತುಮಕೂರು, 2011, ಪು.ಸಂ.82.

151. ಎ.ಕ.ಸಂ.9, ಡಿ.ವಿ.41, ಕ್ರಿ.ಶ.900, ಅರದೇಶಹಳ್ಳಿ, ಪು.ಸಂ.176 ಮತ್ತು ಎ.ಕ.ಸಂ.9, ಡಿ.ವಿ, 43, ಕ್ರಿ.ಶ.900, ಅರದೇಶಹಳ್ಳಿ, ಪು.ಸಂ.177.

152. ಎ.ಕ.ಸಂ.9, ಡಿ.ಬಿ.38, ಶಿವಪುರ, ಕ್ರಿ.ಶ.1328, ಪು.ಸಂ.147.

153. ಎ.ಕ.ಸಂ.9, ಡಿ.ವಿ.42, ಅರದೇಶಹಳ್ಳಿ, ಕ್ರಿ.ಶ.900, ಪು.ಸಂ.176.

154. ಎ.ಕ.ಸಂ.9. ಡಿ.ವಿ.14, ಕ್ರಿ.ಶ.1067, ಬ್ಯಾಡರಹಳ್ಳಿ, ಪು.ಸಂ.163.

155. ಎ.ಕ.ಸಂ.9, ಡಿ.ವಿ.20, ಕ್ರಿ.ಶ.1133, ಆವತಿ, ಪು.ಸಂ.167 ಮತ್ತು ಡಿ.ವಿ.75, ಕ್ರಿ.ಶ.1046, ಗಂಗವಾರ, ಪು.ಸಂ.190.

156. ಎ.ಕ.ಸಂ.9, ಡಿ.ವಿ.76, ಕ್ರಿ.ಶ.1050, ಗಂಗವಾರ, ಪು.ಸಂ.190.

157. ಎ.ಕ.ಸಂ.9. ಡಿ.ವಿ.28, ಕ್ರಿ.ಶ.1283, ಕಾರಹಳ್ಳಿ, ಪು.ಸಂ.169.

158. ಎ.ಕ.9, ಡಿ.ವಿ.42, ಕ್ರಿ.ಶ.900, ಅರದೇಶಹಳ್ಳಿ, ಪು.ಸಂ.176.

159. ಎ.ಕ.ಸಂ.9, ಡಿ.ವಿ.76, ಕ್ರಿ.ಶ.1050, ಗಂಗವಾರ, ಪು.ಸಂ.190 ಮತ್ತು ಎ.ಕ.ಸಂ.9, ಡಿ.ವಿ.14, ಕ್ರಿ.ಶ.1067, ಬ್ಯಾಡರಹಳ್ಳಿ, ಪು.ಸಂ.163.

160. ಎ.ಕ.ಸಂ.9, ಡಿ.ವಿ.28, ಕ್ರಿ.ಶ.1283, ಕಾರಹಳ್ಳಿ, ಪು.ಸಂ.169.

161. ಕೃಷ್ಣಮೂರ್ತಿ, ಪಿ.ವಿ.ಶಾಸನ, ಇತಿಹಾಸ ಮಂಥನ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, 2011, ಪು.ಸಂ.88, 89.

162. ಎ.ಕ.ಸಂ.9, ಡಿ.ವಿ,29, ಕ್ರಿ.ಶ.1352, ವಡಿಗೇನಹಳ್ಳಿ, ಪು.ಸಂ.169–170 ಮತ್ತು ಡಿ.ವಿ. 32, ಕ್ರಿ.ಶ.1407, ಮಂಗಸಂದ್ರ, ಪು.ಸಂ.171–172.

## ಅಧ್ಯಾಯ-ಐದು

# ದೇವಾಲಯಗಳು, ಜೈನಬಸದಿಗಳು, ಮಸೀದಿ-ದರ್ಗಾಗಳು ಮತ್ತು ಚರ್ಚ್‌ಗಳ ಕಲೆ ಮತ್ತು ವಾಸ್ತುಶಿಲ್ಪ

**ಪೀಠಿಕೆ**: ಬೆಂಗಳೂರುಗ್ರಾಮಾಂತರಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳು ಮತ್ತು ಸಾಮಂತರ ಕಾಲದಲ್ಲಿಹಲವಾರು ದೇವಾಲಯಗಳು ನಿರ್ಮಾಣಗೊಂಡಿದ್ದುದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿರದೇ ಸಂಪತ್ತಿನ, ಸಾಂಸ್ಕೃತಿಕ ಚಟುವಟಿಕೆಗಳ ಕಲೆ ಮತ್ತು ವಾಸ್ತುಶಿಲ್ಪದ ಕೇಂದ್ರಗಳಾಗಿದ್ದವು. ದೇವಾಲಯಗಳು ತಮ್ಮ ಸಂಪತ್ತುಗಳಿಂದಾಗಿ ವಿದ್ಯೆ ಮತ್ತು ಅನ್ನದಾನ ಮುಂತಾದ ಕಾರ್ಯಗಳನ್ನು ಕೈಗೊಂಡಿದ್ದವು.ಇವು ಸ್ಥಳೀಯ ಆಡಳಿತವನ್ನು ನಿಯಂತ್ರಿಸುತ್ತಿದ್ದುದಲ್ಲದೇ ಪಂಚಾಯಿತಿ-ನ್ಯಾಯ ತೀರ್ಮಾನ ಕಾರ್ಯವನ್ನು ಮಾಡುತ್ತಿದ್ದವು.ದೇವಾಲಯಗಳಿಗೆ ಸೇರಿದ ದತ್ತಿ ಭೂಮಿಯಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದರು.ಈ ಮೂಲಕ ಸ್ಥಳೀಯರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುತ್ತಿದ್ದವು.ಜನರು ದೇವಾಲಯಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದು ದೇವಾಲಯದಲ್ಲಿ ನಡೆಯುತ್ತಿದ್ದ ಪೂಜೆ, ನೃತ್ಯ, ಜಾತ್ರೆ, ಉತ್ಸವಗಳು ಮುಂತಾದ ಕಾರ್ಯಕ್ರಮಗಳು ಜನರ ಲೌಕಿಕ ಮತ್ತು ಅಲೌಕಿಕ ಬದುಕಿನ ಮೇಲೆ ಪ್ರಭಾವವನ್ನು ಬೀರಿವೆ.

ಜಿಲ್ಲೆಯಲ್ಲಿ 8 ಮತ್ತು 9ನೇ ಶತಮಾನಗಳ ನಂತರ ದೇವಾಲಯಗಳ ನಿರ್ಮಾಣದ ವಿಷಯದಲ್ಲಿ ಹೆಚ್ಚು ಹುರುಪು ಕಂಡುಬಂದಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ.ಗಂಗರ ಕಾಲದಲ್ಲಿ ಈ ಭಾಗದಲ್ಲಿ ಗಂಗವಾರ, ಚೌಡಪ್ಪನಹಳ್ಳಿ ಮುಂತಾದ ಕಡೆ ದೇವಾಲಯಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ.ಸಾಮಾನ್ಯವಾಗಿ ದೇವಾಲಯಗಳ ನಿರ್ಮಾಣದ ನಂತರ ಗರ್ಭಗುಡಿಗಳಲ್ಲಿ ದೇವರನ್ನು ಪ್ರತಿಷ್ಠಾಪಿಸಲಾಗುತ್ತಿತ್ತು.ರಾಜ ಮಹಾರಾಜರು, ಸಾಮಂತರು, ವರ್ತಕರು, ಭಕ್ತಾಧಿಗಳು ಮುಂತಾದವರು ದೇವಾಲಯಗಳ ನಿರ್ಮಾಣಕ್ಕೆ ಸಹಕರಿಸುತ್ತಿದ್ದರು. ದೇವಾಲಯಗಳು ಶಿಥಿಲಗೊಂಡರೆ ಜೀರ್ಣೋದ್ಧಾರ ಮಾಡಲಾಗುತ್ತಿತ್ತು.ದೇವನಹಳ್ಳಿ ತಾಲೂಕಿನ ಕ್ರಿ.ಶ.1300ರ ಶಾಸನಗಳಲ್ಲಿ ದೇವಾಲಯದ ಶಿಲ್ಪಕ್ಕೆ ಸಂಬಂಧಿಸಿದ ದುಗ್ಗೈಪಟ್ಟಿ (ದುರ್ಗಾದೇವಿಯ ಶಿಲ್ಪ) ಮತ್ತು ಪಿಡಾರಿಪಟ್ಟಿ (ಸಪ್ತ ಮಾತೃಕೆಯರ ಶಿಲ್ಪಗಳುಳ್ಳ ಪಟ್ಟಿ) ಗಳ ಉಲ್ಲೇಖಗಳು ಕಂಡುಬಂದಿವೆ. [1]ಈ ಭಾಗದಲ್ಲಿ ದೇವಾಲಯಗಳಿಗೆ ರಾಜರು, ಸಾಮಂತರು, ಮತ್ತು ಇತರರು ದಾನದತ್ತಿಗಳನ್ನು ನೀಡಿದ್ದಾರೆ.ರಾಮನಾಥ ದೇವ ಚತುರ್ವೇದಿಮಂಗಲ[2]ಚಿಕ್ಕಜಾಲ ವಿಷ್ಣುವರ್ಧನ

ಚತುರ್ವೇದಿಮಂಗಲಂ ಮುಂತಾದ ಅಗ್ರಹಾರಗಳು ಹೊಯ್ಸಳರ ಕಾಲದಲ್ಲಿನಿರ್ಮಾಣವಾದ ಬಗ್ಗೆ ಶಾಸನೋಕ್ತವಾಗಿದೆ.ಕ್ರಿ.ಶ.1329ರಲ್ಲಿ ಹೊಯದಣ್ಣಾನಾಯಕನು ಜಾಲದ ಶ್ರೀ ಚೆನ್ನಕೇಶವ ದೇವರಿಗೆ ಜಾಲತರಬನಹಳ್ಳಿ ಮತ್ತು ಅನೂಡಳವೆಂಬ ಎರಡು ಗ್ರಾಮಗಳನ್ನು ದತ್ತಿ ನೀಡಿದನು.[3]ಯಲಹಂಕ ನಾಡಿನ ಶಿವನಸಮುದ್ರ ಸೀಮೆಯದೇವನಹಳ್ಳಿ ತಾಲೂಕಿನ ಯಿಲತೊರೆ ಗ್ರಾಮವನ್ನು ವಿಜಯನಗರದ ಅರಸ ದೇವರಾಯನು ಕ್ರಿ.ಶ.1425ರಲ್ಲಿ ಕೇಶವ ಪಂಡಿತನಿಗೆಏಕಭೋಗ ಅಗ್ರಹಾರವನ್ನಾಗಿ ದತ್ತಿ ನೀಡಿದನು.[4]ಕ್ರಿ.ಶ.1698ರಲ್ಲಿಆವತಿಯ ನಾಡಪ್ರಭು ಗೋಪಾಲಗೌಡನು ದೇವನಹಳ್ಳಿಯ ಮದನಗೋಪಾಲ/ರುಕ್ಮಿಣಿ ಸತ್ಯಭಾಮ ಸಮೇತ ವೇಣುಗೋಪಾಲ ಸ್ವಾಮಿ ದೇವಾಲಯಕ್ಕೆ ದತ್ತಿ ನೀಡಿದನು[5]ಗೋಪಾಲಗೌಡನ ಉತ್ತರಾಧಿಕಾರಿ ಮತ್ತು ಮಗನಾದ ದೊಡ್ಡಭೈರಪ್ಪಗೌಡ ಎಂಬುವನು ಕ್ರಿ.ಶ.1729ರಲ್ಲಿ ವಡಿಗೇನಹಳ್ಳಿ (ವಿಜಯಪುರ) ಯ ಚನ್ನಕೇಶವ ದೇವಾಲಯಕ್ಕೆ ಪೂಜಾಕೈಂಕರ್ಯಗಳಗಾಗಿ ಸೆಟ್ಟಿಹಳ್ಳಿ ಮತ್ತು ಅಂಗಟ್ಟ ಗ್ರಾಮಗಳನ್ನು ದತ್ತಿ ನೀಡಿದನು ಎಂಬ ಅಂಶಗಳು ಶಾಸನೋಕ್ತವಾಗಿವೆ.[6]

ದೇವಾಲಯಗಳಿಗೆ ಗರುಡಗಂಬಗಳು, ದೀಪಸ್ತಂಭಗಳು, ಧ್ವಜಸ್ತಂಭಗಳು, ಉಯ್ಯಾಲೆ ಮಂಟಪದ ಸ್ತಂಭಗಳು ಮುಂತಾದ ದಾನಗಳನ್ನು ನೀಡಿರುವುದು ಕಂಡುಬರುತ್ತದೆ.ಕ್ರಿ.ಶ.1386ರಲ್ಲಿ ಒಡೆಯಪ್ಪನು ನಲ್ಲೂರಿನ ರಾಮಸ್ವಾಮಿ/ತಿರುಮಲೆನಾಥ ದೇವಾಲಯಕ್ಕೆ ದೀಪಮಾಲೆಯ ಕಂಬವನ್ನು ಪ್ರತಿಷ್ಠಾಪಿಸಿದನು.[7]

ದೇವಾಲಯಗಳಿಗೆ ವಿವಿಧ ಮೂಲಗಳಿಂದ ಆದಾಯ ಬರುತ್ತಿತ್ತು, ದೇವಾಲಯಗಳ ನಿರ್ವಹಣೆಗೆ ಗ್ರಾಮಗಳ ಸುಂಕಗಳನ್ನು ಬಿಟ್ಟುಕೊಡಲಾಗುತ್ತಿತ್ತು.ಅವು ತೆರಿಗೆ ಪಾವತಿಯಿಂದ ವಿನಾಯಿತಿ ಪಡೆದಿದ್ದವು. ಕ್ರಿ.ಶ.1382ರಲ್ಲಿ ಯಲಹಂಕನಾಡಿನ ಸುಂಕಾಧಿಕಾರಿ ದೇವರಸನು ಜಾಲದ ಕೇಶವ ದೇವರ ನಂದಾದೀಪಕ್ಕಾಗಿ 3 ಹೊನ್ನನ್ನು ದಾನ ನೀಡಿದನು.[8]

ದೇವಾಲಯಗಳು ದೈನಂದಿನ ಕಾರ್ಯಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಧರ್ಮದರ್ಶಿ ಮಂಡಳ ಮತ್ತು ಅಗತ್ಯ ಸಿಬ್ಬಂದಿ ವರ್ಗವನ್ನು ಹೊಂದಿದ್ದವು.ಅರ್ಚಕ, ಸ್ಥಾನಿಕ, ಧರ್ಮದರ್ಶಿಗಳು ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಕ್ರಿ.ಶ.1574ರಲ್ಲಿ ಚನ್ನಪ್ಪನ ಮಗ ರಾಮಪ್ಪಯ್ಯನು ವಡಿಗೇನಹಳ್ಳಿಯ ಚನ್ನೇಯ ದೇವರ ಗುಡಿಯಲ್ಲಿ ಸ್ಥಾನಿಕನಾಗಿ ಸೇವೆ ಸಲ್ಲಿಸಿರುವುದು ಶಾಸನೋಕ್ತವಾಗಿದೆ.[9]ದೇವಾಲಯಗಳಲ್ಲಿ ದೇವರ ಸೇವೆಗಾಗಿ ದೇವದಾಸಿಯರು ನಗಾರಿ ಬಾರಿಸುವವರು, ಪಲ್ಲಕ್ಕಿ ಹೊರುವವರು, ಬೀಸಣಿಗೆಯವರು[10]ಕತ್ತಿ ಮತ್ತು ಛತ್ರಿ

ಹಿಡಿಯುವವರು ಮುಂತಾದ ಪರಿಚಾರಕರಿರುತ್ತಿದ್ದರು. ದೇವಸ್ಥಾನಕ್ಕೆ ಹೊಂದಿಕೊಂಡಂತೆ ಮಠಗಳು ಇರುತ್ತಿದ್ದವು.ದೇವಸ್ಥಾನ ಮತ್ತು ಮಠದ ಆಸ್ತಿಯು ಒಂದೇ ಆಗಿರುತ್ತಿತ್ತು.

ದೇವನಹಳ್ಳಿ ತಾಲೂಕಿನಲ್ಲಿ ಹಲವಾರು ದೇವಾಲಯಗಳು (ಶೈವ, ವೈಷ್ಣವ ಮುಂತಾದವು) ಮಸೀದಿ-ದರ್ಗಾ, ಚರ್ಚು, ಜೈನ ಬಸದಿ ಮುಂತಾದ ಧಾರ್ಮಿಕ ಮಂದಿರಗಳುಕಂಡುಬಂದಿದ್ದು ಇವು ಧಾರ್ಮಿಕ ಶ್ರದ್ಧೆ ಮತ್ತು ಕೋಮು ಸೌಹಾರ್ದತೆಗೆ ಹೆಸರಾಗಿವೆ. ದೇವನಹಳ್ಳಿಯು ಐತಿಹಾಸಿಕವಾಗಿ ಬಹಳ ಪ್ರಮುಖವಾದ ಸ್ಥಳವಾಗಿದ್ದು ಇತ್ತೀಚಿನ ದಿನಗಳಲ್ಲಿ ದೇವನಹಳ್ಳಿಯು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವನ್ನು ಹೊಂದಿದ ಮೇಲೆ ನಗರೀಕರಣ ಬೆಳವಣಿಗೆ, ವ್ಯಾವಹಾರಿಕ ಜ್ಞಾನಗಳು ಹೆಚ್ಚಾಗಿ ಸಾಂಸ್ಕೃತಿಕವಾಗಿ ಎಷ್ಟು ಪ್ರಗತಿದಾಯಕವಾಗಿತ್ತೋ ಅಷ್ಟು ಪ್ರಗತಿ ಹಾಗೆಯೇ ಮುಂದುವರಿದಂತೆ ಕಂಡುಬರುವುದಿಲ್ಲ. ಆದರೂ ಕೂಡ ಸಾಂಸ್ಕೃತಿಕವಾಗಿ ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ದೇವನಹಳ್ಳಿಯು ಪ್ರಸಿದ್ಧವಾಗಿರುವುದಕ್ಕೆ ಅನೇಕ ದೇವಾಲಯಗಳು, ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಕಾಲದ ಕೋಟೆ ಮುಂತಾದವುಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.ದೇವನಹಳ್ಳಿ ತಾಲೂಕಿನಲ್ಲಿ ಮುಜರಾಯಿ ಇಲಾಖೆ ಮತ್ತು ಖಾಸಗಿ ಧರ್ಮದರ್ಶಿ ಮಂಡಳಿಗೆ ಸೇರಿದ ಹಲವಾರು ದೇವಾಲಯಗಳು ಕಂಡುಬಂದಿವೆ. ಇವುಗಳಲ್ಲಿ ಹೆಚ್ಚಿನ ದೇವಾಲಯಗಳು ಜೀರ್ಣೋದ್ಧಾರಗೊಂಡಿವೆ. ದೇವನಹಳ್ಳಿ ತಾಲೂಕಿನಲ್ಲಿ ರಾಜಮಹಾರಾಜರು, ಸಾಮಂತರು ಮುಂತಾದವರು ವಿಜಯದ ಸ್ಮರಣೆಗಾಗಿ, ಪೂರ್ವಜರ ಸ್ಮರಣೆಗಾಗಿ, ಕುಲದೈವೋಪಾಸನೆಗಾಗಿ ಪ್ರತಿಷ್ಟೆಗೋಸ್ಕರ, ಮೋಕ್ಷಪ್ರಾಪ್ತಿಗಾಗಿ ಸಮಾಜ ಸೇವೆಗಾಗಿ ಧಾರ್ಮಿಕ ಉದ್ದೇಶದಿಂದ ಹೀಗೆ ವಿವಿದೋದೇಶಕ್ಕಾಗಿ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ವೈವಿದ್ಯಪೂರ್ಣವಾದ ಅಸಂಖ್ಯಾತ ದೇವಾಲಯಗಳು ಆಯಾಕಾಲಘಟ್ಟಕ್ಕೆ ನಿರ್ಮಾಣವಾಗುತ್ತ ಬಂದವು, ಆದರೆ ರಾಜಮಹಾರಾಜರ, ಸಾಮಂತರ ಹೋರಾಟಗಳಿಂದ ಮತ್ತು ಜನತೆಯ ನಿರ್ಲಕ್ಷದಿಂದ ಕಾಲಪುರುಷನ ತುಳಿತಕ್ಕೆ ಸಿಲುಕಿ ಅದೆಷ್ಟೊ ದೇವಾಲಯಗಳು ನೆಲಸಮ ಮತ್ತು ಭಗ್ನಗೊಂಡಿವೆ. ಆದರೂ ಕೂಡ ಅಳಿದುಳಿದಿರುವ ಅವಶೇಷಗಳ ಆಧಾರದ ಮೇಲೆ ಈ ತಾಲೂಕಿನ ವಾಸ್ತುಶಿಲ್ಪದ ವೈಭವವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.ದೇವನಹಳ್ಳಿ ತಾಲೂಕಿನ ದೇವಾಲಯಗಳನ್ನು ಶೈವ, ವೈಷ್ಣವ, ಶಾಕ್ತ ದೇವತೆಗಳೆಂದು ವರ್ಗೀಕರಿಸಿದ್ದು ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

## ಶೈವ ಧರ್ಮದ ದೇವಾಲಯಗಳು

ಶೈವಧರ್ಮವು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು ಪೂರ್ವ ವೈದಿಕ ಕಾಲದ್ದಾಗಿದೆ. ಹರಪ್ಪ ಸಂಸ್ಕೃತಿಯಲ್ಲಿ ಶಿವೋಪಾಸನೆ ಅಸ್ಥಿತ್ವದಲ್ಲಿರುವುದಕ್ಕೆ ಮುದ್ರೆಗಳ ಮೇಲಿರುವ ಚಿಹ್ನೆಗಳ ಮೂಲಕ ತಿಳಿಯಬಹುದಾಗಿದೆ. ಸಿಂಧೂ ನಾಗರೀಕತೆ ಜನರು ಶಿವನನ್ನು ಪಶುಪತಿ ಎಂದು ಪೂಜಿಸುತ್ತಿದ್ದರು.ಕಾಲನಂತರ ಲಿಂಗ (ಶಿವ/ರುದ್ರ) ಆರಾಧಿಸುವ ತತ್ವ ಸಿದ್ಧಾಂತಗಳು ಆಚಾರ ವಿಚಾರಗಳು ಮೂಡಿಬಂದು ಶೈವ ಧರ್ಮ ಎನಿಸಿತು ಇದನ್ನು ಅನುಸರಿಸುವವರು ಶೈವರೆನಿಸಿದರು.ಕರ್ನಾಟಕದಲ್ಲಿ ಶಿವನ ಆರಾಧನೆಯು ಲಿಂಗ ರೂಪದಲ್ಲಿ ಹಲವು ಕಡೆ ಭೈರವ, ನಟರಾಜ ಮತ್ತು ವೀರಭದ್ರನ ರೂಪದಲ್ಲಿ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ.[11]

**ಸೋಮೇಶ್ವರ ದೇವಾಲಯ-ಗಂಗವಾರ:**

ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಗಂಗರು ತಮ್ಮ ರಾಜಧಾನಿಗಳನ್ನು ತಲಕಾಡು, ಕೋಲಾರ ಮತ್ತು ಮನ್ನೆಗಳಲ್ಲಿ ಹೊಂದಿದ್ದು ಸಹಜವಾಗಿ ಈ ಭಾಗದ ಪ್ರದೇಶವು ಗಂಗರ ಆಳ್ವಿಕೆಗೆ ಒಳಪಟ್ಟಿತ್ತು.ಗಂಗರ ಆಳ್ವಿಕೆಯಲ್ಲಿ ದೇವನಹಳ್ಳಿ ತಾಲೂಕಿನಲ್ಲಿ ಹಲವಾರು ದೇವಾಲಯಗಳು ನಿರ್ಮಾಣಗೊಂಡಿದ್ದು ಹೆಚ್ಚಿನ ದೇವಾಲಯಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡು ಜೀರ್ಣೋದ್ಧಾರಗೊಂಡಿದೆ.ಮತ್ತೆ ಕೆಲವು ದೇವಾಲಯಗಳು ಸೂಕ್ತ ನಿರ್ವಹಣೆ ಇಲ್ಲದೆ ಸೊರಗಿವೆ. ಗಂಗರನ್ನು ಸೋಲಿಸಿದ ಚೋಳರು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ ಅವುಗಳ ವಿಸ್ತರಣೆ ಮತ್ತು ಸಂರಕ್ಷಣೆಯನ್ನು ಮಾಡಿದರು.ಸಾಮಾನ್ಯವಾಗಿ ಗಂಗರ ಕಾಲದ ದೇವಾಲಯಗಳಲ್ಲಿ ಒಂದೇ ರೀತಿಯ ಅಳತೆಯಲ್ಲಿ ಚಿಕ್ಕದಾಗಿರುವ ಕಂಬಗಳು ಕಂಡುಬರುತ್ತವೆ. ದೇವನಹಳ್ಳಿ ತಾಲೂಕಿನ ಗಂಗರ ಕಾಲದ ದೇವಾಲಯಗಳಿಗೆ ಸ್ಪಷ್ಟ ಉದಾಹರಣೆಗಳೆಂದರೆ ಗಂಗವಾರದ ಸೋಮೇಶ್ವರ ಮತ್ತು ಚೌಡಪ್ಪನಹಳ್ಳಿಯ ತಬ್ಬಲಿಂಗೇಶ್ವರ ದೇವಾಲಯಗಳು.

ಗಂಗವಾರವು ದೇವನಹಳ್ಳಿ ತಾಲೂಕು, ಚನ್ನರಾಯಪಟ್ಟಣ ಹೋಬಳಿಯ ಒಂದು ಗ್ರಾಮವಾಗಿದ್ದು, ದೇವನಹಳ್ಳಿಯಿಂದ ಸುಮಾರು 16 ಕಿ.ಮೀ ದೂರದಲ್ಲಿದ್ದು, ಬೂದಿಗೆರೆ ಸಮೀಪದಲ್ಲಿದೆ. ಶಾಸನಗಳು ಗಂಗವಾರವನ್ನು ಗಂಗಪುರ ಎಂದು ಕರೆದಿವೆ.[12]ಹೀಗಾಗಿ ಈ ಗ್ರಾಮದ/ಗಂಗವಾರದ ಪೂರ್ಣ ಇತಿಹಾಸವನ್ನು ಕ್ರಿ.ಶ.೮ನೇ ಶತಮಾನದ ಹಿಂದಕ್ಕೆ ಒಯ್ಯಬಹುದು.

ಗಂಗವಾರವು ಗಂಗರ ಕಾಲದಲ್ಲಿ ಪ್ರಾಮುಖ್ಯತೆ ಪಡೆದ ಒಂದು ಗ್ರಾಮವು ಕಂಡುಬರುತ್ತದೆ.ಈ ಗ್ರಾಮವು ಹೊಸಕೋಟೆ ತಾಲೂಕಿನ ಗಡಿಭಾಗದ ದಕ್ಷಿಣ ಪಿನಾಕಿನಿ ನದಿಯ ಬಲದಂಡೆ ಮೇಲಿದೆ.[13]ಶಾಸನಗಳು ಮತ್ತು ಅವಶೇಷಗಳಲ್ಲಿ ಕಂಡುಬರುವಂತೆ ಈ ಗ್ರಾಮವು ಗಂಗರು ಮತ್ತು ಚೋಳರ ಕಾಲದಲ್ಲಿ 8ನೇ ಶತಮಾನದಲ್ಲಿ ಮಹತ್ವವನ್ನು ಪಡೆದಿತ್ತು.ಈ ಗ್ರಾಮದ ದಕ್ಷಿಣ ಭಾಗದಲ್ಲಿ ಶಿವ ದೇವಾಲಯವಿದ್ದು, ಸೋಮೇಶ್ವರ ದೇವಾಲಯವೆಂದು ಹೆಸರಾಗಿದ್ದು ಈ ದೇವಾಲಯವು ಉತ್ತರಕ್ಕೆ ಮಹಾದ್ವಾರವನ್ನು ಹೊಂದಿದ್ದು ದ್ವಾರವು ಗ್ರಾನೈಟ್ ಶಿಲೆಯಲ್ಲಿ ದೋಣಿ ಆಕಾರದ ಚೋಳ ಗೋಪುರವನ್ನು ಹೊಂದಿದೆ. ಪ್ರಮುಖ ವಿಶೇಷವೇನೆಂದರೆ ಈ ದೇವಾಲಯದ ಪ್ರಾಂಗಾಣದಲ್ಲಿರುವ ಎರಡು ಸಿಲಿಂಡರ್ ಆಕೃತಿಯ ಸಿಂಹಪೀಠ ಕಂಬಗಳು ಕಂಚಿಯಲ್ಲಿನ ಪಲ್ಲವರ ದೇವಾಲಯದ ಕಂಬಗಳು ಮತ್ತು ಇತರೆ ಕಡೆ ಇರುವ ಕಂಬಗಳು ಹಾಗೂ ಮಹಾಬಲಿಪುರಂನಲ್ಲಿರುವ ರಥಗಳಲ್ಲಿರುವ ಕಂಬಗಳನ್ನು ಹೋಲುತ್ತವೆ.[14]

**ನಿರ್ಮಾಣ ಕಾಲ:**ಈ ದೇವಾಲಯವನ್ನು ಅದರಲ್ಲಿ ಬಳಸಿರುವ ಚಿಕ್ಕದಾಗಿರುವ ಕಂಬಗಳು ಮತ್ತು ಅವುಗಳು ಕಡಿಮೆ ಅಲಂಕಾರ ಹೊಂದಿರುವುದನ್ನು ಗಮನಿಸಿ ಈ ದೇವಾಲಯವು 10ನೇ ಶತಮಾನದ ದ್ರಾವಿಡ ರೀತಿಯ ಕಟ್ಟಡವೆಂದು ಕರೆಯಲಾಗುತ್ತದೆ.[15]ಈ ದೇವಾಲಯದ ಗೋಪುರ ಮಂಟಪದ ಒಳಭಾಗದಲ್ಲಿ ಎರಡು ಸಿಂಹಪೀಠ ಸ್ತಂಭಗಳಿದ್ದು ಅವು ಪಲ್ಲವ ಪ್ರಭಾವದ ಶಿಲ್ಪಕ್ಕೆ ನಿದರ್ಶನಗಳಾಗಿವೆ, ಹೀಗಾಗಿ ಈ ದೇವಾಲಯದ ಕಾಲವನ್ನು ಪಲ್ಲವರ ಸಮಕಾಲೀನ ಕಾಲಕ್ಕೆ ಒಯ್ಯಬಹುದಾಗಿದೆ.

**ಶಾಸನಗಳಲ್ಲಿ ಉಲ್ಲೇಖ:** ಈ ದೇವಾಲಯದ ನಿರ್ಮಾಣ, ವಿಸ್ತರಣೆ,ಜೀರ್ಣೋದ್ಧಾರ ಮತ್ತು ದಾನದತ್ತಿಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

ಕ್ರಿ.ಶ.1046ರ ಶಾಸನವು ರಾಜಾಧಿರಾಜನು ತನ್ನ 29ವರ್ಷದ ಆಳ್ವಿಕೆಯಲ್ಲಿ ಅಶ್ವಮೇಧ ಯಾಗವನ್ನು ಮಾಡಿದ ಈ ದೇವಾಲಯಕ್ಕೆ ನೀಡಿದ ಕೆಲವು ದತ್ತಿಗಳ ಬಗ್ಗೆ ತಿಳಿಸುತ್ತದೆ.[16]

ಕ್ರಿ.ಶ.1050ರ ಶಾಸನವು ರಾಜೇಂದ್ರ ಚೋಳನು ತನ್ನ ದಂಡನಾಯಕನಾದ ರಾಜೇಂದ್ರ ಚೋಳನಿಗೆ ದತ್ತಿ ನೀಡಿದ್ದು ಅದರ ಪ್ರಕಾರ ತಡಿಗೈವಳಿ ಎಂದು ಕರೆಯಲ್ಪಡುವ ವಿಕ್ರಮಚೋಳ ಮಂಡಲಂನಲ್ಲಿರುವ ಸಣ್ಣೆನಾಡಿನ ಉತ್ಪನ್ನದಲ್ಲಿ ಅರ್ಧಭಾಗವನ್ನು ತನ್ನ ಜೀವಿತ ಅವಧಿಯವರೆಗೂ ಅಧಿಕೃತಗೊಳಿಸಿದ ಬಗ್ಗೆ ತಿಳಿಸುತ್ತದೆ.[17]

ಕ್ರಿ.ಶ.1100ರಲ್ಲಿ ಈ ದೇವಾಲಯವು ಜೀರ್ಣೋದ್ದಾರವಾಗಿರುವಂತೆ ತಿಳಿಯುತ್ತದೆ. ಕ್ರಿ.ಶ.1100ರ ಶಾಸನಗಳು ಬಾಗಿಲುದ್ವಾರ ನಿರ್ಮಾಣದಲ್ಲಿ ಕಣ್ಣನ್ ಮತ್ತು ವಾಮನನ್ ಎಂಬುವರ ಸೇವೆಯನ್ನು ಉಲ್ಲೆಖಿಸುತ್ತದೆ.[18]

ಕ್ರಿ.ಶ.1267ರಲ್ಲಿ ನಂದಿಗಿರಿಯ ಒಡೆಯನೆಂದು ಕರೆದುಕೊಂಡಿರುವ ವೆಂಬಿದೇವನೆಂಬುವನು ಬೈಯಪೆಪಲ್ಲಿ ಎಂಬ ಗ್ರಾಮವನ್ನು ಗಂಗಪುರಂ ಅರ್ಚಕರಿಗೆ ದಾನ ನೀಡಿದನು.[19]

**ದೇವಾಲಯದ ಜೀರ್ಣೋದ್ಧಾರ:** ಈ ದೇವಾಲಯದ ಅರ್ಚಕರಾದ ಜಿ.ಎಸ್.ಮಂಜುನಾಥ್ ಅವರು ನೀಡಿದ ಮಾಹಿತಿಯಂತೆ ಈ ದೇವಾಲಯವು ಶಿಥಿಲಾವಸ್ಥೆ ತಲುಪಿದಾಗ, ಕರ್ನಾಟಕ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಮೈಸೂರು ಅವರು ವಿಶೇಷ ಕಾಳಜಿಯನ್ನು ವಹಿಸಿ ಈ ದೇವಾಲಯವನ್ನು 2012-13ನೇ ಸಾಲಿನಲ್ಲಿ ಜೀರ್ಣೋದ್ಧಾರ ಮಾಡಿದ್ದಾರೆ ಮತ್ತು ಸ್ಥಳೀಯರ ಒತ್ತಾಯಕ್ಕೆ ಮಣಿದು ದೇವಾಲಯದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿರುವುದು ಕಂಡುಬರುತ್ತದೆ. ಆದರೂ ಗರ್ಭಗೃಹ ಮತ್ತು ಮೂಲಕಂಬಗಳ ಸ್ವರೂಪವನ್ನು ಉಳಿಸಿಕೊಂಡು ಕಂಬಗಳ ಕೆಳಭಾಗದಲ್ಲಿ ಸುಮಾರು 9 ಇಂಚು ಎತ್ತರದ ಚೌಕಕಾರದ ಪೀಠಗಳನ್ನು ಸೇರಿಸಿ ದೇವಾಲಯದ ಮೇಲ್ಛಾವಣಿಯನ್ನು ಎತ್ತರಿಸಿ ಮೂಲದ್ವಾರವನ್ನು ಬದಲಿಸಿ ನೆಲಹಾಸಿಗೆಗೆ ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಕಲ್ಲುಗಳನ್ನು ಹಾಕಿ ಸಂರಕ್ಷಣೆ ಮಾಡಿದ್ದಾರೆ.ದೇವಾಲಯದ ಗರ್ಭಗೃಹದ ಶಿಖರವನ್ನು ಸಹ ಬದಲಿಸಿ ಅದರ ಎತ್ತರವನ್ನು ಸಹ ಹೆಚ್ಚಿಸಿ ಕಳಶವನ್ನು ಸೇರಿಸಿದ್ದಾರೆ.ದೇವಾಲಯದ ಪುನರ್ ನಿರ್ಮಾಣದಲ್ಲಿ ಸಿಮೆಂಟ್ ಬಳಕೆ ನಿಷೇದವಾಗಿದ್ದರೂ, ಈ ದೇವಾಲಯದ ಪುನರ್ ನಿರ್ಮಾಣದಲ್ಲಿ ಕಲ್ಲುಗಳ ಮಧ್ಯೆ ಸಿಮೆಂಟ್‌ನ್ನು ಹೇರಳವಾಗಿ ಬಳಸಿರುವುದು ಕಂಡುಬರುತ್ತದೆ.

ಈ ದೇವಾಲಯದಲ್ಲಿ ಪೂರ್ವಾಭಿಮುಖವಾಗಿರುವ ಮತ್ತು ಲಿಂಗ ಹೊಂದಿರುವ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗವಿದೆ.ಈ ದೇವಾಲಯದ ದಕ್ಷಿಣ ವಿಸ್ತರಣೆಯ ಹೊರಭಿತ್ತಿಯಲ್ಲಿರುವ ಶಾಸನಗಳು ತಿಳಿಸುವಂತೆ ಚೋಳರ ರಚನೆಯಾಗಿದೆ ಎಂದು ಉಲ್ಲೇಖಿಸಿದೆ.ಬಹುಶಃ ಈ ದೇವಾಲಯದ ಗರ್ಭಗೃಹ ಮತ್ತು ಅರ್ಧಮಂಟಪಗಳನ್ನು ಗಂಗರು ನಿರ್ಮಿಸಿದ್ದು ಅನಂತರ ಚೋಳರು ವಿಸ್ತರಣೆ ಮಾಡಿದ್ದಾರೆ.[20]

**ಗರ್ಭಗೃಹ:** ಗರ್ಭಗೃಹವು ಆಯಾತಕಾರದಲ್ಲಿದ್ದು ಉದ್ದ 8.2 ಅಡಿ ಮತ್ತು ಅಗಲ 9.5 ಅಡಿಗಳಾಗಿರುತ್ತದೆ.ಗರ್ಭಗುಡಿಯ ಮಧ್ಯಭಾಗದಲ್ಲಿ ಸುಮಾರು 1.8 ಅಡಿ ಎತ್ತರದ ಪಾಣಿಪೀಠದ

ಮೇಲೆ ಸುಮಾರು 1.5 ಅಡಿ ಎತ್ತರದ ಮತ್ತು ಸುಮಾರು 3 ಅಡಿ ಸುತ್ತಳತೆಯನ್ನು ಹೊಂದಿರುವ ಕಡುಕಪ್ಪು ಗ್ರಾನೈಟ್ ಶಿಲೆಯಲ್ಲಿ ಕೆತ್ತಲ್ಪಟ್ಟಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ.ಸಂ.20) ಸೋಮಸೂತ್ರವನ್ನು ಆಧರಿಸಿ ಈ ಶಿವಲಿಂಗವನ್ನು ಕೆತ್ತಲಾಗಿದ್ದು ಶಿವಾದಿಕ ಲಿಂಗವಾಗಿದೆ.ಈ ಶಿವಲಿಂಗವು ಗಂಗರ ಕಾಲದ ಅಪರೂಪದ ಶಿವಲಿಂಗವೆನಿಸಿದ್ದು ಶಿವಲಿಂಗಗಳ ಬಗ್ಗೆಯೇ ಸಂಶೋಧನೆ ಮಾಡಿರುವ ಮೈಸೂರು ನಾಗರಾಜ ಶರ್ಮರವರ ಪ್ರೌಢಪ್ರಬಂಧ ಹೊಯ್ಸಳ ಶಿಲ್ಪದಲ್ಲಿ ಸಹ ಇದರ ಬಗ್ಗೆ ಉಲ್ಲೇಖವಿಲ್ಲ ಎಂಬ ವಿಚಾರವು ಗಮನಾರ್ಹವಾಗಿದೆ. ತಿರುಪತಿ ಹತ್ತಿರದ ಗುಡಿಬಂಡೆ ಎಂಬಲ್ಲಿ ಚೋಳರ ಕಾಲದಲ್ಲಿ ನಿರ್ಮಿಸಿರುವ ಅಪರೂಪದ ಶಿವಲಿಂಗವಿದ್ದು ಅದರ ಮಧ್ಯಭಾಗದಲ್ಲಿ ಯೋನಿಯನ್ನು ಅದರ ಒಳಭಾಗದಲ್ಲಿ ಶಿವಲಿಂಗವನ್ನು ಕೆತ್ತಿದ್ದು ಅದೇ ಕಾಲದಲ್ಲಿ ನಿರ್ಮಿಸಿರುವ ಈ ದೇವಾಲಯದ ಶಿವಲಿಂಗವು ಸಹ ಸೋಮಸೂತ್ರವನ್ನು ಅಳವಡಿಸಿಕೊಂಡಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಗರ್ಭಗೃಹದ ಒಳಭಾಗವನ್ನು ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯವರು ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ ಭಿತ್ತಿಗೆ ಚದರ ಬಿಲ್ಲೆಗಳನ್ನು ಹಾಕಿದ್ದಾರೆ.ಗರ್ಭಗೃಹದ ಮೇಲ್ಛಾವಣಿಯಲ್ಲಿ ಭುವನೇಶ್ವರಿ ಕಂಡುಬರದೆ ಸರಳವಾಗಿದೆ.ಗರ್ಭಗುಡಿಯ ದ್ವಾರವು ಸುಮಾರು 5 ಅಡಿ ಎತ್ತರ ಮತ್ತು 2.9 ಅಡಿ ಅಗಲ ಹೊಂದಿದ್ದು ಯಾವುದೇ ಅಲಂಕಾರಿಕ ಪಟ್ಟಿಕೆಗಳು ಕಂಡುಬರುವುದಿಲ್ಲ. ಗರ್ಭಗುಡಿಯ ದ್ವಾರವು ಸರಳವಾಗಿದೆ.

**ಸುಖನಾಸಿ:** ಸುಖನಾಸಿಯು ಆಯತಾಕಾರದಲ್ಲಿದ್ದು 4 ಅಡಿ ಉದ್ದ ಮತ್ತು ಅಗಲ 5.5 ಅಡಿಗಳಾಗಿರುತ್ತದೆ. ಗರ್ಭಗೃಹದ ಮುಂಭಾಗದಲ್ಲಿ ಸುಖನಾಸಿ ಹೋಲುವಂತಹ ತೆರೆದ ಅಂತರಾಳವಿದೆ.ಸುಖನಾಸಿಯ ದ್ವಾರವು ಸುಮಾರು ಆರುವರೆ ಅಡಿ ಎತ್ತರವಾಗಿದ್ದು ದ್ವಾರದ ಎರಡು ಪಾರ್ಶ್ವಗಳಲ್ಲಿ ಗಂಗರ ಕಾಲದ ರಾಜಲಾಂಛನವಾದ ಆನೆಮುಖಗಳನ್ನು ರಾಜಪುರಾತತ್ವ ಇಲಾಖೆಯವರು ದೇವಾಲಯ ಜೀರ್ಣೋದ್ಧಾರ ಸಂದರ್ಭದಲ್ಲಿ ನಯವಾಗಿ ಕೆತ್ತಿರುವುದು ಕಂಡುಬರುತ್ತದೆ.

**ದಕ್ಷಿಣ ದಿಕ್ಕಿನ ಗರ್ಭಗೃಹ-ಪಾರ್ವತಿ ದೇವಿ ಗರ್ಭಗೃಹ:** ನವರಂಗದ ದಕ್ಷಿಣದ್ವಾರವು ಮತ್ತೊಂದು ಕೋಣೆಗೆ ಪ್ರವೇಶವನ್ನು ಕಲ್ಪಿಸುತ್ತದೆ. ಈ ಗರ್ಭಗೃಹವು 6 ಅಡಿಗಳು ಉದ್ದ ಮತ್ತು ಅಗಲ 6 ಅಡಿಗಳನ್ನು ಹೊಂದಿದ್ದು ಚೌಕಾಕಾರವಾಗಿದ್ದು ಗರ್ಭಗುಡಿಯಲ್ಲಿ 2 ಅಡಿ ಪದ್ಮಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿರುವ ಪಾರ್ವತಿ ದೇವಿಯನ್ನು ಪ್ರತಿಷ್ಠಾಪಿಸಲಾಗಿದೆ.(ಚಿ.ಸಂ.21)ಪಾರ್ವತಿಯು 4 ಕೈಗಳನ್ನು ಹೊಂದಿದ್ದು ಹಿಂದಿನ 2 ಕೈಗಳಲ್ಲಿ ಹೂವಿನ ಮೊಗ್ಗುಗಳು ಬಲಭಾಗದ ಕೈಯಲ್ಲಿ ಅಭಯಹಸ್ತವಾಗಿದ್ದು ಇನ್ನೊಂದು ಕೈಯನ್ನು

ಸೊಂಟದ ಮೇಲೆ ಬರುವಂತೆ ಕೆತ್ತಲಾಗಿದೆ.ಪಾರ್ವತಿಯ ಕೊರಳಲ್ಲಿ ಮಣಿಸರ ಕರ್ಣಕುಂಡಲ ಮತ್ತು ಶಿರದ ಮೇಲೆ ಕಿರೀಟವಿದೆ.ಇತ್ತೀಚೆಗೆ ಈ ಗರ್ಭಗೃಹಕ್ಕೆ ಚದರಬಿಲ್ಲೆ ಹಾಕಿ ಜೀರ್ಣೋದ್ಧಾರ ಮಾಡಲಾಗಿದೆ.ಗರ್ಭಗೃಹದಲ್ಲಿ ಭುವನೇಶ್ವರಿ ಕಂಡುಬರುವುದಿಲ್ಲ ಮತ್ತು ಪಾರ್ವತಿ ಶಿಲ್ಪವು 18ನೇ ಶತಮಾನದ ಕೆತ್ತನೆಯಾಗಿದೆ.[21]

ಪಾರ್ವತಿ ದೇವಿಯ ಗರ್ಭಗುಡಿಯ ಮುಂಭಾಗದಲ್ಲಿ ಒಂದು ಚಿಕ್ಕದಾದ ಸಿಂಹದ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.ಇದು ಸುಮಾರು 1.5 ಅಡಿ ಉದ್ದ ಮತ್ತು 1 ಅಡಿ ಎತ್ತರವನ್ನು ಹೊಂದಿದೆ.ನಯವಾದ ಕೆತ್ತನೆಗಳಿಂದ ಕೂಡಿದ್ದು, ಚೌಕಕಾರದ ಪಾಣಿಪೀಠದ ಮೇಲಿದೆ.ಸಿಂಹವು ಪಲ್ಲವ ಶೈಲಿಯಲ್ಲಿದೆ.ಸಾಮಾನ್ಯವಾಗಿ ಶೈವ ದೇವಾಲಯಗಳಲ್ಲಿ ಶಿವನ ವಾಹನವಾದ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿರುತ್ತದೆ.ಆದರೆ ಈ ದೇವಾಲಯದಲ್ಲಿ ಪಾರ್ವತಿ ದೇವಿಗೆ ಎದುರಾಗಿ ಸಿಂಹವನ್ನು ಪ್ರತಿಷ್ಠಾಪಿಸಿರುವುದು ವಿಶೇಷವಾಗಿದ್ದು ಪಲ್ಲವ ಕಲೆಯ ಪ್ರಭಾವ ಎಂದು ಕಂಡುಬರುತ್ತದೆ.ಸಿಂಹದ ಹಿಂಭಾಗದಲ್ಲಿ ಚಿಕ್ಕದಾದ ಬಲಿಪೀಠವಿದೆ.ಗರ್ಭಗುಡಿಯ ದ್ವಾರವು 5 ಅಡಿ ಎತ್ತರ ಮತ್ತು 2.5 ಅಡಿ ಅಗಲವನ್ನು ಹೊಂದಿದೆ.ದ್ವಾರಶಾಖೆಯಲ್ಲಿ ಹೂಬಳ್ಳಿ ಕೆತ್ತನೆಗಳಿದ್ದು ಪಾರ್ವತಿ ದೇವಿಯ ಗರ್ಭಗೃಹದ ಇಕ್ಕೆಲಗಳಲ್ಲಿ 2 ಖಾಲಿ ಕೋಣೆಗಳಿವೆ. ಈ ಗರ್ಭಗೃಹದ ಮುಂಭಾಗದಲ್ಲಿ ಮುಖಮಂಟಪವಿದ್ದು ಅದರ ವಿಸ್ತೀರ್ಣವು ಉದ್ದ 11 ಅಡಿಗಳು ಮತ್ತು ಅಗಲ 22 ಅಡಿಗಳಾಗಿರುತ್ತದೆ. ಈ ಮುಖಮಂಟಪದಲ್ಲಿ 2 ಪ್ರಧಾನ ಕಂಬಗಳಿದ್ದು ಅವು ಚೌಕ, ಅಷ್ಟ, ಚೌಕ ವಿನ್ಯಾಸವನ್ನು ಹೊಂದಿವೆ. ಸರಳ ಪೀಠದ ಮೇಲೆ ನಿಂತಿದ್ದು ಅವುಗಳ ಎತ್ತರ 6.5 ಅಡಿಗಳಾಗಿದ್ದು ಸರಳ ಬೋಧಿಗೆಯನ್ನು ಹೊಂದಿವೆ. ಈ ಎರಡು ಪ್ರಧಾನ ಕಂಬಗಳ ಹೊರತಾಗಿ 3 ಅರೆಗಂಬಗಳು ಮತ್ತು ಚೌಕ, ಅಷ್ಟ ವಿನ್ಯಾಸದ ಒಂದು ಸಾಧಾರಣ ಕಂಬವು ಸಹ ಕಂಡುಬರುತ್ತದೆ. ಮುಖಮಂಟಪವು ಕಲ್ಲು ಚಪ್ಪಡಿಗಳಿಂದ ನಿರ್ಮಾಣವಾಗಿದ್ದು ಯಾವುದೇ ಭುವನೇಶ್ವರಿ ಕಂಡುಬರುವುದಿಲ್ಲ. ಮುಖಮಂಟಪ ದ್ವಾರದ ಎತ್ತರ 5 ಅಡಿಗಳಾಗಿದ್ದು ಅಗಲ 2.5 ಅಡಿಗಳಾಗಿರುತ್ತದೆ.ಇತ್ತೀಚೆಗೆ ಜೀರ್ಣೋದ್ಧಾರಗೊಂಡ ದ್ವಾರಶಾಖೆಯಲ್ಲಿ ಹೂಬಳ್ಳಿಗಳ ಕೆತ್ತನೆ, ಕೆಳಭಾಗದಲ್ಲಿ ಪದ್ಮಕೆತ್ತನೆ ಮತ್ತು ಲಲಾಟಬಿಂಬದಲ್ಲಿ ಶಿವಲಿಂಗದ ಕೆತ್ತನೆ ಕಂಡುಬರುತ್ತದೆ.

**ನವರಂಗ**: ಇದರ ವಿಸ್ತೀರ್ಣವು ಉದ್ದ 22.5 ಅಡಿಗಳು ಮತ್ತು ಅಗಲ 17.5 ಅಡಿಗಳಾಗಿದ್ದು ನವರಂಗದಲ್ಲಿ 12 ಕಂಬಗಳಿದ್ದು 3 ರೀತಿಯ ಕಂಬಗಳನ್ನು ಕಾಣಬಹುದಾಗಿದೆ. (ಚಿ.ಸಂ.22) ಅವುಗಳಲ್ಲಿಗಂಗರಕಾಲದ ರುದ್ರಕಾಂತ ಕಂಬಗಳು, ಮತ್ತು ಚೌಕ, ಅಷ್ಟ, ಚೌಕ ಮೂಲೆಯ ನಿರಾಲಾಂಕೃತ ಕಂಬಗಳು ಹಾಗೂ ಇನ್ನೊಂದು ಬಗೆಯ ಕಂಬಗಳು ಬ್ರಹ್ಮಕಾಂತ ರೀತಿಯಲ್ಲಿದ್ದು ತಳಭಾಗವು ಚೌಕಾಕಾರ ಅಷ್ಟಕೋನಾಕೃತಿ ಚೌಕರೀತಿಯಲ್ಲಿದ್ದು ಸರಳ ಬೋಧಿಗೆ ಹೊಂದಿದೆ.[22]

ಈ ದೇವಾಲಯದ ಜೀರ್ಣೋದ್ಧಾರದ ನಂತರ ನವರಂಗದಲ್ಲಿ ಆಗಿರುವ ಬದಲಾವಣೆಗಳನ್ನು ಗಮನಿಸಿದಾಗ, ಗಂಗರಕಾಲದ ನಾಲ್ಕು ಕಂಬಗಳು ಮತ್ತು ನಂತರ ಕಾಲದ ಎಂಟು ಕಂಬಗಳು ಕಂಡುಬಂದಿದ್ದು ಗಂಗರಕಾಲದ ನಾಲ್ಕು ಕಂಬಗಳು ಬಹಳ ಪ್ರಮುಖವಾಗಿದ್ದು ಸಿಲಿಂಡರ್ ಮಾದರಿಯಲ್ಲಿದ್ದು, ಹೊಸದಾಗಿ ಸೇರಿಸಿರುವ ಅರ್ಧ ಅಡಿ ಪೀಠದ ಮೇಲೆ ನಿಂತಿದ್ದು ಚೌಕ, ಸಿಲಿಂಡರ್, ಅದರ ಮೇಲೆ ಕುಷನ್ ಮಾದರಿ ಮತ್ತು ಸರಳ ಬೋಧಿಗೆಯನ್ನು ಹೊಂದಿವೆ. ಕಂಬಗಳು ಬಿಳಿಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಅವುಗಳ ಎತ್ತರ 5.5 ಅಡಿಗಳಾಗಿದ್ದು, ಇವುಗಳು ಒಂದು ಕಂಬದಿಂದ ಮತ್ತೊಂದು ಕಂಬಕ್ಕೆ ಸಮಾನಾಂತರ ಅಂತರವನ್ನು ಹೊಂದಿವೆ. 4 ಕಂಬಗಳು ತಲಕಾಡಿನ ಪಾತಾಳೇಶ್ವರ ದೇವಾಲಯದಲ್ಲಿ ಕಂಡುಬರುವ ಕಂಬಗಳ ಮಾದರಿಯಲ್ಲಿವೆ. [23]ಇನ್ನುಳಿದ 8 ಕಂಬಗಳು ಪೀಠದ ಮೇಲೆ ನಿಂತಿದ್ದು ಚೌಕ, ಅಷ್ಟ, ಚೌಕ ವಿನ್ಯಾಸವನ್ನು ಮತ್ತು ಸರಳವಾದ ಬೋಧಿಗೆಯನ್ನು ಹೊಂದಿವೆ. ಈ ಕಂಬಗಳು ಬಿಳಿಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಅವುಗಳ ಎತ್ತರ 5.5 ಅಡಿಗಳಾಗಿದ್ದು ಚೋಳರ ಕಾಲದ ಅಷ್ಟಕೋನಾಕೃತಿಯದ್ದಾಗಿವೆ. ಈ 12 ಕಂಬಗಳ ಹೊರತಾಗಿ ನವರಂಗದಲ್ಲಿ ಉತ್ತರ ಭಿತ್ತಿಗೆ ಹೊಂದಿಕೊಂಡಂತೆ ಹೊಸದಾಗಿ ಸೇರಿಸಿರುವ 2 ಅರೆಗಂಬಗಳು ಕಂಡುಬರುತ್ತವೆ. ತಲಕಾಡಿನಲ್ಲಿ ಹಲವಾರು ದೇವಾಲಯಗಳು ನಾಶವಾಗಿದ್ದರೂ ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿದ್ದರೂ ಅವುಗಳ ಉತ್ಖನನದಲ್ಲಿ (ಪುರಾತತ್ವ ಇಲಾಖೆ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದವರು 1992 ರಿಂದ 10 ವರ್ಷಗಳ ಕಾಲ ನಡೆಸಿದ ಉತ್ಖನನ) ಕಂಡುಬಂದಿರುವ ಕಂಬಗಳ ಮಾದರಿಯು ಇಲ್ಲಿಯು ಸಹ ಕಂಡುಬಂದಿರುವುದನ್ನು ಕಾಣಬಹುದಾಗಿದೆ. ನವರಂಗದಲ್ಲಿ ಮುಖ್ಯಗರ್ಭಗೃಹದ ಬಲಭಾಗದ ಮೇಲ್ಛಾವಣಿಯಲ್ಲಿ ಹೂದಳ ಕೆತ್ತನೆಯ ವಿಜಯನಗರ ಶೈಲಿಯ ವೃತ್ತಾಕಾರದ ಭುವನೇಶ್ವರಿ ಕಂಡುಬರುತ್ತದೆ.

**ನಂದಿಶಿಲ್ಪ**: ನವರಂಗದಲ್ಲಿ ಮುಖ್ಯ ಗರ್ಭಗುಡಿಗೆ ಅಂದರೆ ಸೋಮೇಶ್ವರ ಶಿವಲಿಂಗಕ್ಕೆ ಎದುರಾಗಿ ಗಂಗರ ಶೈಲಿಯ 2 ಕಂಬಗಳ ಮಧ್ಯದಲ್ಲಿ ಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯ ಚಿಕ್ಕದಾದ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದು ಅಲಂಕಾರಿಕ ಕೆತ್ತನೆ ಹೊಂದಿದ್ದು ಕೊರಳಲ್ಲಿ ಘಂಟೆ, ಘಂಟೆಮಾಲೆ, ಮೈಮೇಲೆ ಸೂಕ್ಷ್ಮ ಕೆತ್ತನೆಗಳು ಮತ್ತು ಆಭರಣಗಳನ್ನು ಹೊಂದಿರುವುದು ಕಂಡುಬರುತ್ತದೆ.

**ಗಣೇಶ ಶಿಲ್ಪ**: ಮುಖ್ಯ ಗರ್ಭಗೃಹ ಅಂದರೆ ಶಿವಲಿಂಗಕ್ಕೆ ಬಲಭಾಗದಲ್ಲಿ ಒಂದು ಅಡಿ ಪೀಠದ ಮೇಲೆ 2.5 ಅಡಿ ಎತ್ತರದ ಗಣೇಶ ಶಿಲ್ಪವಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.

ಸ್ಥಳೀಯರು ಹೇಳುವಂತೆ ಇದು ಎಡೆಮುರಿ ಗಣೇಶವಾಗಿದೆ.ಗಣೇಶನು 4 ಕೈಗಳನ್ನು ಹೊಂದಿದ್ದು 2 ಕೈಗಳಲ್ಲಿ ಕಮಲ ಮತ್ತೆರಡು ಕೈಗಳಲ್ಲಿ ಲೇಖನಿ ಪುಸ್ತಕವನ್ನು ಹೊಂದಿದ್ದಾನೆ. ಗಣಪತಿಯ ವಾಸ್ತುಲಕ್ಷಣಗಳನ್ನು ಗಮನಿಸಿದರೆ ಇದು ಗಂಗರ ಕಾಲದ ಗಣಪತಿಯಂತೆ ಕಂಡುಬರುತ್ತದೆ.ನವರಂಗದ ಮೇಲ್ಚಾವಣಿಯಲ್ಲಿ ವಿಜಯನಗರ ಶೈಲಿಯ ವೃತ್ತಾಕಾರದ ಭುವನೇಶ್ವರಿಯನ್ನು ಕೆತ್ತಲಾಗಿದೆ. ನವರಂಗದಲ್ಲಿನ ಮೂಲಗಣಪತಿ ಮತ್ತು ಪಾರ್ವತಿ ಶಿಲ್ಪಗಳು ಹಾನಿಗೊಳಗಾದ್ದರಿಂದ ಅವುಗಳನ್ನು ದೇವನಹಳ್ಳಿಗೆ ಸ್ಥಳಾಂತರಿಸಲಾಗಿದೆ.[24]

**ಪ್ರವೇಶ ದ್ವಾರಗಳು:** ದೇವಾಲಯದಲ್ಲಿ ಪ್ರಸ್ತುತ 2 ಪ್ರವೇಶ ದ್ವಾರಗಳು ಕಂಡುಬಂದಿವೆ.

**ಪೂರ್ವ ಪ್ರವೇಶದ್ವಾರ**: ದೇವಾಲಯವು ಈ ಮುಂಚೆ ಉತ್ತರಕ್ಕೆ ಮುಖ್ಯದ್ವಾರವನ್ನು ಹೊಂದಿದ್ದು ದೇವಾಲಯವನ್ನು ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ (2012-13) ಕರ್ನಾಟಕ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಮೈಸೂರು ಅವರು ಮುಖ್ಯದ್ವಾರದ ಜೊತೆಗೆ ಸ್ಥಳೀಯರ ಬೇಡಿಕೆಯಂತೆ ಪೂರ್ವ ದಿಕ್ಕಿಗೆ ಮತ್ತೊಂದು ದ್ವಾರವನ್ನು ಮಾಡಿದ್ದಾರೆ. ಈ ದ್ವಾರದ 2 ಪಾರ್ಶ್ವಗಳಲ್ಲಿ ಬಳ್ಳಿ ಸುರುಳಿಗಳ ಅಲಂಕರಣೆಗಳಿದ್ದು ದ್ವಾರದ ಎತ್ತರವು 5 ಅಡಿ ಮತ್ತು ಅಗಲ 2.8 ಅಡಿಗಳಾಗಿದೆ.

ಈ ಪ್ರವೇಶದ್ವಾರದ ಮುಂಭಾಗದಲ್ಲಿ ಅಂದರೆ ದೇವಾಲಯದ ಹೊರಭಾಗದಲ್ಲಿ ಮುಖ್ಯ ಗರ್ಭಗುಡಿಯ ಶಿವಲಿಂಗಕ್ಕೆ ಮುಖಮಾಡಿರುವಂತೆ ಗಂಗರ ಕಾಲಕ್ಕೆ ಸೇರಿದ್ದು ಎನ್ನಲಾದ ಬೃಹತ್ತಾದ ನಂದಿ ಶಿಲ್ಪವಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ಕೆತ್ತಲ್ಪಟ್ಟಿದ್ದು ಹಣೆಕಟ್ಟು, ಉಬ್ಬಿದ ಭುಜ ಕೊರಳಲ್ಲಿ ಗಂಟೆ ಮಾಲೆಗಳನ್ನು ಹೊಂದಿದೆ.ಈ ಶಿಲ್ಪವು 1.5 ಅಡಿ ಪೀಠದ ಮೇಲಿದ್ದು ಇದರ ಉದ್ದ 4 ಅಡಿಗಳು ಮತ್ತು ಎತ್ತರ 3 ಅಡಿಗಳಾಗಿದೆ.ಸ್ಥಳಿಯರ ಪ್ರಕಾರ ಈ ನಂದಿ ವಿಗ್ರಹವನ್ನು ದೇವಾಲಯದ ನವರಂಗದಲ್ಲಿ ಸ್ಥಾಪಿಸಲಾಗಿತ್ತು.ದೇವಾಲಯದ ಸಂರಕ್ಷಣೆಯ ಸಂದರ್ಭದಲ್ಲಿ ಪುರಾತತ್ವ ಇಲಾಖೆಯವರು ದೇವಾಲಯದ ಹೊರಗೆ ಸ್ಥಳಾಂತರಿಸಿ ಸಂರಕ್ಷಣೆಯ ನಂತರ ಇಲ್ಲಿ ಪ್ರತಿಷ್ಠಾಪಿಸಿದ್ದಾರೆ.

ನಂದಿಯ ಹಿಂಭಾಗದಲ್ಲಿ (ಪ್ರಾಕಾರದಲ್ಲಿ) 1.5 ಅಡಿ ಎತ್ತರದ ಚೌಕಾಕಾರದ ಪೀಠದ ಮೇಲೆ ಸುಮಾರು 15 ಅಡಿ ಎತ್ತರದ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ನಂದಿ ಸ್ಥಂಭವಿದೆ.ಈ ಕಂಬವು ಹೊಸ ರಚನೆಯಾಗಿದ್ದು ಕಂಬದಲ್ಲಿ ನಂದಿ, ಡಮರುಗ, ಶಿವಲಿಂಗ, ತ್ರಿಶೂಲ ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಕಂಬಕ್ಕೆ ಹೊಂದಿಕೊಂಡಂತೆ ಬಲಿಪೀಠವಿದೆ.[25]

**ಉತ್ತರ ಪ್ರವೇಶದ್ವಾರ**: ದೇವಾಲಯವನ್ನು ಪ್ರವೇಶಿಸಲು ಗಂಗರ ಕಾಲದಲ್ಲಿ ಉತ್ತರಾಭಿಮುಖವಾಗಿ ಪ್ರವೇಶದ್ವಾರವನ್ನು ನಿರ್ಮಾಣ ಮಾಡಲಾಗಿದ್ದು ಇತ್ತೀಚೆಗೆ ಜೀರ್ಣೋದ್ದಾರ ಮಾಡಲಾಗಿದೆ. ಈ ದ್ವಾರವು 5.9 ಅಡಿ ಎತ್ತರ ಮತ್ತು 2.10 ಅಡಿ ಅಗಲವನ್ನು ಹೊಂದಿದ್ದು ಹೊಸದಾಗಿ ಜಿರ್ಣೋದ್ಧಾರಗೊಂಡ ನಂತರ ಈ ದ್ವಾರಶಾಖೆಯು ಅಲಂಕೃತವಾಗಿದ್ದು ಬಳ್ಳಿಸುರುಳಿ ಮುಂತಾದ ಕೆತ್ತನೆಗಳಿಂದ ಕೂಡಿದ್ದು ದ್ವಾರದ ಲಲಾಟಬಿಂಬದಲ್ಲಿ ಶಿವಲಿಂಗವಿದ್ದು, ಶಿವಲಿಂಗದ ಇಕ್ಕೆಲಗಳಲ್ಲಿ ಸರ್ಪಗಳ ಕೆತ್ತನೆಯನ್ನು ಮಾಡಿರುವುದು ಕಂಡುಬರುತ್ತದೆ.

**ರಂಗಮಂಟಪ/ದ್ವಾರಮಂಟಪ**: ನವರಂಗದ ಉತ್ತರದ್ವಾರವು ರಂಗಮಂಟಪಕ್ಕೆ (ದ್ವಾರಮಂಟಪ) ಪ್ರವೇಶ ಕಲ್ಪಿಸುತ್ತದೆ. ಇದರ ವಿಸ್ತೀರ್ಣವು 16.4 ಅಡಿ ಉದ್ದ ಮತ್ತು ಅಗಲ 13.3 ಅಡಿಗಳಾಗಿದ್ದು (ಚಿ.ಸಂ.23) ಈ ಮಂಟಪಕ್ಕೆ ಮೂರು ಕಡೆಯಿಂದ ಅಂದರೆ ಪೂರ್ವ ಪಶ್ಚಿಮ ಮತ್ತು ಉತ್ತರದ ಕಡೆಯಿಂದ ಪ್ರವೇಶದ್ವಾರವಿದ್ದು ಇಂತಹ ದ್ವಾರಮಂಟಪವು ಹೇಮಾವತಿಯ ಸಿದ್ದೇಶ್ವರ ದೇವಾಲಯದಲ್ಲಿದೆ.[26]

ನವರಂಗದ ಬಾಗಿಲು (ದಕ್ಷಿಣ) ಮೂರು ಪ್ರವೇಶದ್ವಾರಗಳನ್ನು ಹೊಂದಿರುವ ರಂಗಮಂಟಪಕ್ಕೆ ಪ್ರವೇಶ ನೀಡುತ್ತದೆ.ಉತ್ತರ ಪ್ರವೇಶದ್ವಾರದಲ್ಲಿ ತಮಿಳು ಶಾಸನವಿದ್ದು ಇವುಗಳನ್ನು ಕಣ್ಣನ್ ಎಂಬುವನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ಮಂಟಪದಲ್ಲಿ ನಾಲ್ಕು ಪ್ರಧಾನ ಕಂಬಗಳು ಮತ್ತು ಎರಡು ಅರೆಗಂಬಗಳಿದ್ದು ನಾಲ್ಕು ಪ್ರಧಾನ ಕಂಬಗಳು ಚೌಕ, ಸಿಲಿಂಡರ್, ವೃತ್ತಕಾರ ಮತ್ತು ಸರಳ ಬೋಧಿಗೆಯನ್ನು ಹೊಂದಿವೆ. ಗಂಗರ ಕಾಲದ ಈ ನಾಲ್ಕು ಗ್ರಾನೈಟ್ ಕಂಬಗಳು ವೃತ್ತಾಕಾರದ ದಿಂಡಿನೊಂದಿಗೆ ತೂಗುತ್ತಿರುವ ಹೂಮಾಲೆ ರಚನೆ ಒಳಗೊಂಡಿದ್ದು ಚೋಳ ಕೆತ್ತನೆಯನ್ನು ಸೂಚಿಸುತ್ತವೆ. ನಾಲ್ಕು ಕಂಬಗಳ ಮಧ್ಯಭಾಗದಲ್ಲಿ ವೃತ್ತಾಕಾರದ ಸರಳ ಕೆತ್ತನೆಯ ಭುವನೇಶ್ವರಿ ಇದೆ. ಮೂರು ದ್ವಾರಗಳು ತೆರೆದ ಮಾದರಿಯನ್ನು ಒಳಗೊಂಡಿದ್ದು ಪೂರ್ವದ ದ್ವಾರವು 5.2 ಅಡಿ ಉದ್ದ ಮತ್ತು ಅಗಲ 4.5 ಅಡಿಗಳನ್ನು ಪಶ್ಚಿಮದ್ವಾರವು ಉದ್ದಅಡಿಗಳು 5 ಮತ್ತು ಅಗಲ 4.4 ಅಡಿಗಳನ್ನು ಹಾಗೂ ಉತ್ತರರ ದ್ವಾರವು 5.11 ಅಡಿ ಉದ್ದ ಮತ್ತು ಅಗಲ 3.5 ಅಡಿಗಳನ್ನು ಹೊಂದಿದೆ.ನಾಲ್ಕು ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಅವು ಚೌಕಾಕಾರದ ಪೀಠದ ಮೇಲಿವೆ. ಮುಖಮಂಟಪದ ನಾಲ್ಕು ಭಾಗಗಳಲ್ಲೂ ಒಳ ಪ್ರವೇಶಿಸಲು ದ್ವಾರವಿದ್ದು ನಾಲ್ಕು ಕಂಬಗಳ ಮೇಲ್ಭಾಗದಲ್ಲಿ ಸರಳ ಕೆತ್ತನೆಯಿಂದ ಕೂಡಿರುವ ಭುವನೇಶ್ವರಿ ಇದೆ.ರಂಗಮಂಟಪ/ದ್ವಾರಮಂಟಪದ ಉತ್ತರ ಮತ್ತು ಪಶ್ಚಿಮ ಭಿತ್ತಿಯಲ್ಲಿ ಹಾಗೂ ಪ್ರವೇಶದ್ವಾರದ ಇಕ್ಕೆಲಗಳಲ್ಲಿ ತಮಿಳು ಭಾಷೆಯ ಶಾಸನಗಳಿರುವುದು ಕಂಡುಬರುತ್ತದೆ.

**ಅಧಿಷ್ಠಾನ**: ಗಂಗರ ಕಾಲದ ದೇವಾಲಯದ ಅಧಿಷ್ಠಾನವನ್ನು ಗಮನಿಸಿದಾಗ ಇವರು ತಮ್ಮ ಸಮಕಾಲೀನರಾದ ಬಾದಾಮಿ ಚಾಳುಕ್ಯರಿಂದಾಗಲಿ ಅಥವಾ ಪಲ್ಲವರಿಂದಾಗಲಿ ಪೂರ್ಣ ಪ್ರಭಾವಿತರಾಗದೆ ಇಲ್ಲಿಯೇ ಇರಬಹುದಾದ ವಾಸ್ತು ಪ್ರಕಾರವನ್ನು ಬಳಸಿರುವುದು ಸ್ಪಷ್ಟವಾಗಿದೆ. ಈ ದೇವಾಲಯದ ಪಾದಬಂಧ ಅಧಿಷ್ಠಾನವು ವಿಶಿಷ್ಟ ಮಾದರಿಯಾಗಿದೆ.ಈ ದೇವಾಲಯವು ಏಕತಲಾ ದೇವಾಲಯವಾಗಿದೆ.ಈ ದೇವಾಲಯದ ಅಧಿಷ್ಠಾನವು ಜಗತಿ ಮೇಲೆ ತ್ರಿಪಟ್ಟ ಕುಮುದ ದಳ ಪಟ್ಟಿ ಹೊಂದಿದ್ದು ಭಿತ್ತಿಯ ಮೇಲೆ ಪ್ರಸ್ತರದ ಭಾಗ ಬಂದಿದ್ದು ಉತ್ತರ ವಾಜನ ವಾಲಭಿ ಮತ್ತು ಕಪೋತ ಭಾಗಗಳನ್ನು ಹೊಂದಿದ್ದು ದೇವಾಲಯದ ಸುತ್ತಲೂ ಇದೇ ಮಾದರಿಯನ್ನು ಅನುಸರಿಸಲಾಗಿದೆ.[27] (ಚಿ.ಸಂ.24)

**ಭಿತ್ತಿ**: ಭಿತ್ತಿಯ ಮೇಲ್ಭಾಗದಲ್ಲಿಹಂಸಗಳ ಸಾಲುಗಳನ್ನು ಹೊಂದಿದ್ದು ಭಿತ್ತಿಯ ಮೇಲ್ಭಾಗದಲ್ಲಿರುವ ಕಪೋತವು ಇಳಿಜಾರಾಗಿದ್ದು ಅಲ್ಲಲ್ಲಿ ನಾಸಿಗಳ ಕೆತ್ತನೆ ಕಂಡುಬರುತ್ತದೆ.ಕಪೋತದಲ್ಲಿ ನಾಸಿಗಳು ಇರಲೇಬೇಕೆನ್ನುವಷ್ಟರ ಮಟ್ಟಿಗೆ ಬಳಸಲಾಗಿದೆ.ಉಬ್ಬು ಕಂಬಗಳು ಬಂದಿರುವ ಕಡೆ ಕ್ಷುದ್ರ ನಾಸಿಗಳನ್ನು ಅವುಗಳ ಅಧ್ಯಯನಕ್ಕೆ ಕಪೋತದಲ್ಲಿ ಬಿಡಿಸಲಾಗಿದೆ.ನಾಸಾಲಂಕಾರವನ್ನು ಕಪೋತದಲ್ಲಿ ಹೆಚ್ಚಾಗಿ ಬಳಸಲಾಗಿದೆ.[28] ಪಾರ್ವತಿ ದೇವಿ ಗರ್ಭಗುಡಿಯ ಪೂರ್ವ ಪಶ್ಚಿಮ ಭಾಗಕ್ಕೆ ಗಾಳಿ ಬೆಳಕು ಬರಲು ಗೋಪುರದಲ್ಲಿ ಜಾಲಾವಾತಾಯನವನ್ನು ಮಾಡಲಾಗಿದೆ.ಪಾರ್ವತಿ ದೇವಿ ಗರ್ಭಗುಡಿಯ ಹಿಂಭಾಗದ ಭಿತ್ತಿಯಲ್ಲಿ ತಮಿಳು ಶಾಸನವಿರುವುದು ಕಂಡುಬಂದಿದೆ.

**ಗರ್ಭಗೃಹದ ಶಿಖರ**: ಗರ್ಭಗೃಹದ ಮೇಲೆ ಏಕತಲಾ ಶಿಖರ ಇದ್ದು ಪಾಂಸಾನ ಹೊಂದಿದ್ದು ಶಿಖರದ ಮೇಲೆ ಬರುವ ಸ್ತೂಪಿಯು ಚಿಕ್ಕದಾಗಿದ್ದು ನಾಲ್ಕು ಮೂಲೆಗಳಲ್ಲಿ ಸಿಂಹ ಲಲಾಟವನ್ನು ಹೊಂದಿದೆ. ವಲಭಿಯ ಕೆಳಗೆ ಹಂಸಮಾಲವಿದೆ.[29]ಸೋಮೇಶ್ವರ ಗುಡಿಯ ಉತ್ತರ ಭಿತ್ತಿ ಮತ್ತು ಅಧಿಷ್ಠಾನದಲ್ಲಿ ಗರ್ಭಗುಡಿಯ ಹಿಂಭಾಗದ ಅಧಿಷ್ಠಾನದಲ್ಲಿ ತಮಿಳು ಶಾಸನಗಳಿವೆ. ಮುಖ್ಯಗರ್ಭಗೃಹದ ಶಿಖರವು ತಮಿಳುನಾಡಿನ ಮಹಾಬಲಿಪುರಂನಲ್ಲಿರುವ ಕಡಲ ತೀರದ (ಮಾಮಲ್ಲಪ್ಮರಂ) ದೇವಾಲಯದ ಶಿಖರದ ಮಾದರಿಯನ್ನು ಹೋಲುತ್ತದೆ.

ಶಿಖರವು ಸುಮಾರು 10 ಅಡಿ ಎತ್ತರವಿದ್ದು ದ್ವಿತಲವಿದೆ.ಒಂದನೇ ತಲದ ನಾಲ್ಕು ಪಾರ್ಶ್ವಗಳಲ್ಲಿ ಸರಳ ಕೆತ್ತನೆಯಲ್ಲಿ ಕೀರ್ತಿಮುಖಗಳನ್ನು ಮತ್ತು ಚಿಕ್ಕದಾದ ಕೂಡುಗಳನ್ನು ಕೆತ್ತನೆ ಮಾಡಲಾಗಿದ್ದು ಎರಡನೇ ತಲದಲ್ಲಿ ಶಿವಲಿಂಗ, ನಂದಿ, ಉಬ್ಬು ಶಿಲ್ಪಗಳನ್ನು ಕಾಣಬಹುದು.ಸ್ತೂಪಿ ಮತ್ತು ಕಳಶವಿದ್ದು ಶಿಖರವು ಮೇಲಕ್ಕೆ ಹೋದಂತೆಲ್ಲ ಕಿರಿದಾಗುತ್ತ ಸಾಗುತ್ತದೆ.ಶಿಖರ ಸಂಪೂರ್ಣವಾಗಿ ಮೂಲ ಸ್ವರೂಪವನ್ನು ಕಳೆದುಕೊಂಡು ಇತ್ತೀಚಿಗೆ ಶಿಖರದಂತೆ ಕೆತ್ತಿರುವುದು

ಮತ್ತು ಅದರ ಮೇಲೆ ಕಳಸವನ್ನು ಇರಿಸಲಾಗಿದೆ.ಯಾವ ಕಾರಣಕ್ಕಾಗಿ ಶಿಖರದ ಸ್ವರೂಪವನ್ನು ಬದಲಾಯಿಸಿತು ಮತ್ತು ಇತ್ತೀಚಿನ ಕಾಲದ ಗ್ರಾನೈಟ್ ಶಿಲೆಯನ್ನು ಬಳಸಲಾಗಿದೆ ಎಂದು ಪ್ರಶ್ನೆಯಾಗಿ ಉಳಿದಿದೆ.

**ಪ್ರಾಕಾರ**: ದೇವಾಲಯದ ಸುತ್ತಲೂ ಪ್ರಾಕಾರವಿದ್ದು ಪ್ರಾಕಾರದಲ್ಲಿ ಕಂಬಗಳನ್ನೊಳಗೊಂಡ ಮಂಟಪಗಳು ಮತ್ತು ಪ್ರಾಕಾರದ ಒಳಭಾಗದಲ್ಲಿ ವಿವಿಧ ರೀತಿಯ ಮೂರ್ತಿಗಳಿವೆ. ಉತ್ತರದಿಕ್ಕಿನ ಪ್ರಾಕಾರದಲ್ಲಿ (ಎಡಭಾಗದಲ್ಲಿ) 6 ಕಂಬಗಳ ಮಂಟಪವಿದೆ.ಮಂಟಪದಲ್ಲಿನ 2 ಕಂಬಗಳು ಸಿಂಹಕಾಂತ ಕಂಬಗಳಾಗಿದ್ದು ಅವುಗಳ ಎತ್ತರ 5 ಅಡಿ ಇನ್ನುಳಿದ 4 ಕಂಬಗಳು 5 ಅಡಿ ಎತ್ತರವಾಗಿದ್ದು ಪೀಠದ ಮೇಲಿದ್ದು ಚೌಕ, ಅಷ್ಟ, ಚೌಕ ಮಾದರಿಯಲ್ಲಿದ್ದು ಸರಳವಾದ ಬೋದಿಗೆಯನ್ನು ಹೊಂದಿದೆ.

**ಸಿಂಹಕಾಂತ ಸ್ತಂಭಗಳು**: ಈ ದೇವಾಲಯದ ಮುಖ್ಯ ಆಕರ್ಷಣೆ ಎಂದರೆ ದೇವಾಲಯದ ಪ್ರವೇಶದಲ್ಲಿರುವ ಗೋಪುರ ಮಂಟಪದ ಒಳಭಾಗದಲ್ಲಿರುವ ಎರಡು ಸಿಂಹಕಾಂತ ಸ್ತಂಭಗಳು. ಇವುಗಳು ಗಂಗರ ಕಾಲದ ಆಳ್ವಿಕೆಯಲ್ಲಿ ಉಳಿದಿರಬಹುದಾದ ಪಲ್ಲವ ಪ್ರಭಾವದ ಶಿಲ್ಪಕ್ಕೆ ನಿದರ್ಶನಗಳಾಗಿವೆ. ಪ್ರಾಕಾರ ಮಂಟಪದಲ್ಲಿ ಪಲ್ಲವ ಶೈಲಿಯ 2 ಆಧಾರಕಂಬಗಳಿದ್ದು 6 ಅಡಿ ಎತ್ತರ ಹೊಂದಿದ್ದು ಪೀಠ ಮಣಿಸರಗಳ ಅಲಂಕರಣೆ ಹೊಂದಿವೆ. ಬಾಯಿ ತೆರೆದು ನಿಂತಿರುವ ಸಿಂಹ ತಲೆ ಮೇಲೆ ಘಟ ಕುಂಭ ಮತ್ತು ಗಾಲಿಗಳ ರಚನೆಯಿದೆ. (ಚಿ.ಸಂ.25)

ಕಂಬಗಳು ಚಿಕ್ಕದಾಗಿದ್ದು ತಳಭಾಗದಲ್ಲಿ ಪೀಠದ ಮೇಲೆ ಕುಳಿತ ಸಿಂಹವನ್ನು ಕೆತ್ತಲಾಗಿದ್ದು ಅದರ ಮೇಲ್ಭಾಗ ವೃತ್ತಾಕಾರದ ದಿಂಡನ್ನು ಹೊಂದಿದೆ ಕಂಬದ ಶಲಾಕ ಭಾಗದ ಮೇಲೆ ಮುಚ್ಚಳ ಪದ್ಮ ಪಲಕ ಇತ್ಯಾದಿಗಳಲ್ಲದೆ ಬೋದಿಗೆ ಇದೆ.[30]ಇವುಗಳ ಬಗ್ಗೆ ಎಂ.ಎ.ಆರ್.1929ರಲ್ಲಿ ದಕ್ಷಿಣ ಭಾರತದ ಪಲ್ಲವರ ರೀತಿಯ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತಹ ಪಲ್ಲವರ ರೀತಿಯ ಕಂಬವೆಂದು ಉಲ್ಲೇಖಿಸಿದೆ.ಆದರೆ ಎಂ.ಎ.ಆರ್.1935ರಲ್ಲಿ ಕಂಬಗಳ ಮೇಲೆ ರಚಿತವಾಗಿರುವ ದ್ವಾರಮಂಟಪವನ್ನು ಚೋಳರದೆಂದು, ಕಂಬಗಳು ಪಲ್ಲವರ ರೀತಿಯಾಗಿದ್ದು ದೇವಾಲಯದ ಪ್ರಾಚೀನತೆಯನ್ನು ಹಿಂದಕ್ಕೆ ಒಯ್ಯಬಹುದಾದರೂ ದೇವಾಲಯವು ಪಲ್ಲವರದ್ದೋ ಅಥವಾ ಚೋಳರದ್ದೋ ಎಂದು ಹೇಳಲು ಸಾಧ್ಯವಿಲ್ಲ ಎಂದು ಉಲ್ಲೇಖಿಸಿದೆ. ಈ ಕಂಬಗಳು ಪಲ್ಲವರು ಕಂಬಗಳು ಅಲ್ಲ ಅಥವಾ ಚೋಳರ ಕಾಲದ ಕಂಬಗಳು ಅಲ್ಲ ಇವು ಪಲ್ಲವರ ಪ್ರಭಾವದಿಂದ ರೂಪುಗೊಂಡ ಗಂಗರ ಪ್ರಾಯೋಗಿಕ ಕಂಬಗಳಾಗಿವೆ. ಹೀಗಾಗಿ ಮನ್ನೆ, ಗಂಗವಾರ, ಕಿತ್ತೂರು, ಶಿರವಾಳ ಮುಂತಾದ ಸ್ಥಳಗಳನ್ನು ಬಿಟ್ಟರೆ ಉಳಿದ ಕಡೆ ಈ ಕಂಬಗಳು

ಕಂಡುಬರುವುದಿಲ್ಲ.[31]ಪ್ರಾಕಾರದ ಬಲಭಾಗದಲ್ಲಿ ಅಷ್ಟದಿಕ್ಪಾಲಕರನ್ನು ಹೊಂದಿರುವ ನವಗ್ರಹ ಮಂಟಪವನ್ನು ಹೊಸದಾಗಿ ನಿರ್ಮಿಸಲಾಗಿದ್ದು ನವಗ್ರಹದ ಪಕ್ಕದಲ್ಲಿಯೇ ಅದರ ಹಿಂಭಾಗದಲ್ಲಿ 3 ನಾಗಶಿಲ್ಪಗಳ ಕೆತ್ತನೆಯಿದೆ.

ಪ್ರಾಕಾರದ ಪೂರ್ವಭಾಗದಲ್ಲಿ ಕಂಬಗಳನ್ನೊಳಗೊಂಡ ತೆರೆದ ಮಂಟಪಗಳಿವೆ. ಇಲ್ಲಿ 9 ಕಂಬಗಳು ಕಂಡುಬಂದಿದ್ದು (ಹಳೆಯ ಕಂಬಗಳು-7 ಮತ್ತು ಹೊಸ ಕಂಬಗಳು-2) ಕಂಬಗಳ ಎತ್ತರ 5.9 ಅಡಿ ಇದ್ದು ಚೌಕ, ಅಷ್ಟ, ಚೌಕ ಮಾದರಿಯಲ್ಲಿವೆ. ತೆರೆದ ಮಂಟಪದಲ್ಲಿ ಗಣೇಶ ಶಿಲ್ಪ ಮತ್ತು ಸೂರ್ಯ-ಚಂದ್ರರ ಶಿಲ್ಪಗಳಿವೆ. ಸೂರ್ಯ ಶಿಲ್ಪವು ಪೀಠದ ಮೇಲಿದ್ದು ಎತ್ತರ 2.5 ಇದ್ದು ಕಡುಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿಲ್ಪಟಿದ್ದು ಎರಡು ಕೈಗಳನ್ನು ಹೊಂದಿದ್ದು ಕರ್ಣಕುಂಡಲ ಕೊರಳಲ್ಲಿ ಹಾರ ಕಟಿಬಂದ ಮತ್ತು ಕಿರೀಟ ಹೊಂದಿದ್ದಾನೆ. ಮತ್ತೊಂದು ತೆರೆದ ಮಂಟಪದಲ್ಲಿ 1.3 ಅಡಿ ಊರ್ಧ್ವ ಪದ್ಮಪೀಠದ ಮೇಲೆ 2.5 ಅಡಿ ಎತ್ತರದ ಸಮಭಂಗಿಯಲ್ಲಿರುವ ಚಂದ್ರನ ಶಿಲ್ಪವಿದೆ. ಈ ಶಿಲ್ಪವು 2 ಕೈಗಳನ್ನು ಹೊಂದಿದ್ದು ಒಂದು ಕೈ ಅಭಯ ಹಸ್ತ, ಮತ್ತೊಂದು ಸೊಂಟದ ಮೇಲಿರಿಸಿದ್ದಾನೆ. ಕೊರಳಲ್ಲಿ ಹಾರ, ಕರ್ಣಕುಂಡಲ, ಯಜ್ಞೋಪವೀತಗಳನ್ನು ಧರಿಸಿದ್ದು ಕೈಗಳಲ್ಲಿ ಕೈಗಡಗವಿದೆ ಪ್ರಾಕಾರದ ದಕ್ಷಿಣ ಭಾಗದಲ್ಲಿ ಶ್ರೀದುರ್ಗ ಮತ್ತು ಶ್ರೀಸುಬ್ರಮಣ್ಯ ಶಿಲ್ಪಗಳಿವೆ. ದಕ್ಷಿಣ ಪ್ರಾಕಾರದಲ್ಲಿ ಒಟ್ಟು 8 ಕಂಬಗಳನ್ನು ಹೊಂದಿರುವ ಮಂಟಪಗಳಿವೆ. ಅವುಗಳಲ್ಲಿ 7 ಕಂಬಗಳು ಹಳೆಯದಾಗಿದ್ದು ಒಂದು ಕಂಬವು ಹೊಸದಾಗಿ ಸೇರ್ಪಡೆಯಾಗಿರುತ್ತದೆ.

**ಚಂಡಿಕೇಶವ ಶಿಲ್ಪ**: ಸೋಮೇಶ್ವರ ಗರ್ಭಗುಡಿಯ ಪಕ್ಕದಲ್ಲಿ ಚಂಡಿಕೇಶ್ವರ ಶಿಲ್ಪವಿದ್ದು ಈ ಶಿಲ್ಪವು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಪೀಠದ ಮೇಲೆ ಕುಳಿತಿರುವ ಭಂಗಿಯಲ್ಲಿದೆ. ಶಿಲ್ಪದ ಎತ್ತರ 1.4 ಅಡಿಗಳಾಗಿದೆ.

**ಕಾಲಭೈರವ ಶಿಲ್ಪ**:ಪ್ರಾಕಾರದ ಉತ್ತರ ಭಾಗದಲ್ಲಿ ಮೂಲೆಯಲ್ಲಿರುವ ತೆರೆದ ಮಂಟಪದಲ್ಲಿ ಕಾಲಭೈರವ ಶಿಲ್ಪವಿದೆ. ಈ ಶಿಲ್ಪವು ಅರ್ಧಅಡಿ ಪೀಠದ ಮೇಲಿದ್ದು ಕಡುಕಪ್ಪು ಗ್ರಾನೈಟ್ಶಿಲೆಯಿಂದ ನಿರ್ಮಿಸಲ್ಪಟ್ಟು 2.5 ಅಡಿ ಎತ್ತರವಿದ್ದು ಸಮಭಂಗಿಯಲ್ಲಿದೆ.ಕಾಲಭೈರವನು 4 ಕೈಗಳನ್ನು ಹೊಂದಿದ್ದು ಬಲಗೈ ಮುಂಗೈಯಲ್ಲಿ ಕತ್ತಿ ಹಿಂಗೈಯಲ್ಲಿ ಶೂಲ ಎಡಗೈ ಮುಂಗೈಯಲ್ಲಿ ಭಟ್ಟಲು ಮತ್ತು ಹಿಂಗೈಯಲ್ಲಿ ಡಮರುಗ ಹೊಂದಿದ್ದಾನೆ. ಎಡಭುಜದಿಂದ ಬಲಕ್ಕೆ ಇಳಿಬಿದ್ದಿರುವ ಯಜ್ಞೋಪವೀತ ತಲೆಯ ಮೇಲೆ ಕರಂಡಕ ಹಾಗೂ ಕಂಠಿಹಾರಗಳಿವೆ. ತಲೆಯ ಹಿಂಭಾಗದಲ್ಲಿ ಕಿರೀಟ ಮಾದರಿಯಲ್ಲಿರುವ ಅರ್ಧವರ್ತುಲಾಕಾರ ಜ್ವಾಲೆಯನ್ನು ಮತ್ತು ಭೈರವನ ವಾಹನವಾದ ಶ್ವಾನವನ್ನು ಹಿನ್ನೆಲೆಯಾಗಿ ತೋರಿಸಲಾಗಿದ್ದುಕಟಿಸೂತ್ರವಿದೆ ಮತ್ತು ಕೈಗಳಲ್ಲಿ ಕೈಗಡಗ ಮತ್ತು ಕಾಲುಗಳಲ್ಲಿ ಕಾಲ್ಗಡ ಧರಿಸಿದ್ದು ಭೈರವನು ಉಡುಪು ಧರಿಸದಿರುವುದು ಕಂಡುಬರುತ್ತದೆ.

**ಜಾಲಾವಾತಾಯನ:** ದೇವಾಲಯದ ಪ್ರಾಕಾರದ ಭಿತ್ತಿಯಲ್ಲಿ ಪೂರ್ವದ ಕಡೆ ಎರಡು ಜಾಲಾವಾತಾಯನಗಳು ಮತ್ತು ಪಾರ್ವತಿ ಗುಡಿಯ ಹೊರಭಿತ್ತಿಯಲ್ಲಿ (ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ) ಎರಡು ಜಾಲಾವಾತಾಯನಗಳು ಕಂಡುಬಂದಿವೆ.

**ಬಲಿಪೀಠಗಳು**: ಈ ದೇವಾಲಯ ಜೀರ್ಣೋದ್ಧಾರವಾದ ನಂತರ ಒಳಆವರಣದಲ್ಲಿ ದೇವಾಲಯದ ಸುತ್ತಲು 8 ಬಲಿಪೀಠಗಳನ್ನು ಇರಿಸಲಾಗಿದೆ.

**ದೇವಾಲಯದ ಒಟ್ಟು ವಿಸ್ತೀರ್ಣ:** ಪೂರ್ವಪಶ್ಚಿಮ 66.5 ಅಡಿಗಳು ಮತ್ತು ಉತ್ತರ ದಕ್ಷಿಣ 97 ಅಡಿಗಳಾಗಿರುತ್ತದೆ. ಈ ದೇವಾಲಯಕ್ಕೆ ಪ್ರದಕ್ಷಣ ಪಥವು ಹೊರಭಾಗದಲ್ಲಿದೆ.

**ಗೋಪುರ**: ಈ ದೇವಾಲಯದ ಮಹಾದ್ವಾರವು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲ್ಪಟ್ಟಿರುವ ದೋಣಿ ಆಕಾರದ ಚೋಳ ಗೋಪುರವನ್ನು ಹೊಂದಿದ್ದು ಎರಡು ಸಮಾನಾಂತರ ದ್ವಾರಶಾಖೆಗಳ ಮೇಲೆ ಗೋಪುರವು ನಿರ್ಮಿಸಲ್ಪಟ್ಟಿದೆ.

**ತಬ್ಬಲಿಂಗೇಶ್ವರ ದೇವಾಲಯ-ಚೌಡಪ್ಪನಹಳ್ಳಿ:**

ಚೌಡಪ್ಪನಹಳ್ಳಿ ಗ್ರಾಮವು ದೇವನಹಳ್ಳಿಯಿಂದ ಬೂದಿಗೆರೆಗೆ ಹೋಗುವ ರಸ್ತೆ ಮಾರ್ಗದಲ್ಲಿ ಸುಮಾರು 15 ಕಿ.ಮೀ. ದೂರದಲ್ಲಿದ್ದು ಬೂದಿಗೆರೆ ಗ್ರಾಮಕ್ಕೆ ಸಮೀಪದಲ್ಲಿದೆ. ದಕ್ಷಿಣ ಪಿನಾಕಿನಿ ನದಿ ಕಣಿವೆಯಲ್ಲಿದೆ. ಈ ಗ್ರಾಮವು ಗಂಗವಾರ ಗ್ರಾಮದ ಸಮೀಪದಲ್ಲಿದ್ದು ಗಂಗವಾರ-ಚೌಡಪ್ಪನ ಹಳ್ಳಿ ಎಂದು ಹೆಸರಾಗಿದ್ದು ಗಂಗರ ಆಳ್ವಿಕೆಗೆ ಒಳಪಟ್ಟಿತ್ತೆಂದು ಕಂಡುಬರುತ್ತದೆ.ಈ ಗ್ರಾಮದಲ್ಲಿ ತಬ್ಬಲಿಂಗೇಶ್ವರ ಎಂಬ ಶೈವ ದೇವಾಲಯವಿದ್ದು ರಾಜ್ಯ ಸರ್ಕಾರದ ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ.ಈ ದೇವಾಲಯವು ಗ್ರಾಮದಿಂದ ಹೊರಭಾಗದಲ್ಲಿದ್ದು ತಾಲೂಕಿನ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ.ಈ ದೇವಾಲಯವು ಗಂಗರ ಕಾಲಕ್ಕೆ ಸೇರಿದ್ದೆಂದು ಹೇಳಲಾಗುತ್ತಿದ್ದು ಇತ್ತೀಚಿನ ವರ್ಷಗಳಲ್ಲಿ ಜೀರ್ಣೋದ್ದಾರಗೊಂಡಿದೆ.ಸ್ಥಳೀಯರು ನೀಡಿದ ಮಾಹಿತಿಯಂತೆ ಈ ದೇವಾಲಯದ ಶಿವಲಿಂಗವನ್ನು ಭಕ್ತಿಯಿಂದ ತಬ್ಬಿಕೊಂಡಾಗ ಅವರವರ ಅಳತೆಗೆ ಸಿಗುತ್ತಿತ್ತು.ಈ ಹಿನ್ನೆಲೆಯಲ್ಲಿ ಈ ದೇವಾಲಯವನ್ನು ತಬ್ಬಲಿಂಗೇಶ್ವರ ದೇವಾಲಯವೆಂದು ಕರೆಯಲಾಗುತ್ತದೆ.ಆದರೆ ಇದನ್ನು ಪುಷ್ಟೀಕರಿಸುವ ಯಾವುದೇ ಐತಿಹಾಸಿಕ ದಾಖಲೆಗಳಿಲ್ಲ. ಈ ದೇವಾಲಯವು ಗರ್ಭಗುಡಿ, ಸುಖನಾಸಿ, ನವರಂಗ, ಮುಖಮಂಟಪ ಜೀರ್ಣೋದ್ಧಾರಗೊಂಡಿರುವ ಗೋಪುರಗಳನ್ನು ಹೊಂದಿದೆ.(ಚಿ.ಸಂ.26)ಗಂಗವಾರ ಮತ್ತು ಚೌಡಪ್ಪನಹಳ್ಳಿ ಮಧ್ಯೆ ಇರುವ ತೋಪಿನಲ್ಲಿ ತಬ್ಬಲಿಂಗೇಶ್ವರ ದೇವಾಲಯವಿದೆ.ಇಲ್ಲಿನ

ಶಿವಲಿಂಗಗಳು ಮಾತ್ರ ಪ್ರಾಚೀನವಾದವು ಆದರೆ ದೇವಾಲಯದ ವಾಸ್ತುರಚನೆ ಸಂಪೂರ್ಣವಾಗಿ ಬದಲಾಗಿದೆ.[32]

**ಗರ್ಭಗುಡಿ**: 8 ಅಡಿ ಉದ್ದ ಮತ್ತು ಅಗಲ 8 ಅಡಿಗಳಾಗಿದ್ದು ಚೌಕಾಕಾರವಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಸುಮಾರು 4 ಅಡಿ ಎತ್ತರದ ಚೌಕಾಕಾರದ ಪೀಠದ ಮೇಲೆ ನಯವಾದ ಕೆತ್ತನೆಯಿಂದ ಕೂಡಿರುವ ಕಪ್ಪು ಗ್ರಾನೈಟ್ ಶಿಲೆಯ ಆಕರ್ಷಕವಾದ ಶಿವಲಿಂಗವಿದೆ.ಗರ್ಭಗುಡಿಯ ಒಳಭಾಗದಲ್ಲಿಚದರಬಿಲ್ಲೆ ಹಾಕಲಾಗಿದೆ.ಗರ್ಭಗುಡಿಯ ದ್ವಾರವು ಸರಳವಾಗಿದೆ.(ಚಿ.ಸಂ.27)

**ಸುಖನಾಸಿ**: ಇದು ಗರ್ಭಗೃಹದಷ್ಟೇ ಅಳತೆ ಹೊಂದಿದ್ದು ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಸುಖನಾಸಿಯ ದ್ವಾರವು ಅಲಂಕಾರಿಕ ಕೆತ್ತನೆಯಿಂದ ಕೂಡಿದ್ದು ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ಕಮಲದ ಕೆತ್ತನೆ ಲಲಾಟಬಿಂಬದಲ್ಲಿ ಗಣೇಶ ಶಿಲ್ಪವಿದ್ದು ದ್ವಾರಶಾಖೆಯ ಕೆಳಭಾಗದಲ್ಲಿ ಶೈವ ದ್ವಾರಪಾಲಕರಾದ ನಂದಿ ಭೃಂಗಿ ಶಿಲ್ಪಗಳನ್ನು ಕಂಡರಿಸಲಾಗಿದೆ.ಈ ದ್ವಾರಪಾಲಕರು ಪದ್ಮಪೀಠದ ಮೇಲೆ ದ್ವಿಭಂಗಿಯಲ್ಲಿ ನಿಂತಿದ್ದು 4 ಕೈಗಳನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಗದೆ ಮತ್ತೊಂದು ಕೈ ಸೊಂಟದ ಮೇಲಿದೆ.ಸುಖನಾಸಿಯ ಎಡಭಾಗದಲ್ಲಿ ಪಾರ್ವತಿ ದೇವಿ ಮತ್ತು ಬಲಭಾಗದಲ್ಲಿ ಗಣೇಶನ ಚಿಕ್ಕ ಗುಡಿಗಳಿವೆ.

**ನವರಂಗ**: ನವರಂಗವು 50 ಅಡಿ ಉದ್ದ ಮತ್ತು ಅಗಲ 30 ಅಡಿಗಳು ಇದ್ದು ಮಧ್ಯಭಾಗದಲ್ಲಿ ಚೋಳ ಶೈಲಿಯ 6 ಪ್ರಧಾನ ಕಂಬಗಳಿದ್ದು ಈ ಕಂಬಗಳು ಚೌಕ, ಅಷ್ಟ ಬೋದಿಗೆಯನ್ನು ಹೊಂದಿದೆ.(ಚಿ.ಸಂ.28)

**ನಂದಿಶಿಲ್ಪ**: ನವರಂಗದ ಮಧ್ಯಭಾಗದಲ್ಲಿ ಗರ್ಭಗುಡಿಯಲ್ಲಿರುವ ಶಿವಲಿಂಗಕ್ಕೆ ಎದುರಾಗಿ 1 ಅಡಿ ಪೀಠದ ಮೇಲೆ ಸುಂದರವಾಗಿ ಕೆತ್ತನೆ ಮಾಡಿರುವ ನಂದಿಶಿಲ್ಪವಿದೆ. ಇದು ಅಲಂಕಾರಕ ಕೆತ್ತನೆಯಿಂದ ಕೂಡಿದ ಘಂಟೆಮಾಲೆಯನ್ನು ಹೊಂದಿದೆ.

**ಮುಖಮಂಟಪ**: ಇದರಲ್ಲಿ 4 ಕಂಬಗಳಿದ್ದು ಮುಖಮಂಟಪದ ಎಡ ಮತ್ತು ಬಲ ಪಾರ್ಶ್ವದಲ್ಲಿ ಕಕ್ಷಾಸನವಿದೆ. ಮುಖಮಂಟಪದ ಎಡಭಾಗದಲ್ಲಿ ನವಗ್ರಹಗಳ ಚಿಕ್ಕಗುಡಿಯಿದ್ದು ಮುಖಮಂಟಪದ ಮುಂಭಾಗದಲ್ಲಿ ಸುಮಾರು 20 ಅಡಿ ಎತ್ತರದ ಧ್ವಜಸ್ತಂಭ ಇದ್ದು ಅದರ ಮುಂಭಾಗದಲ್ಲಿ ಬಲಿಪೀಠವಿದೆ.

**ಲಿಂಗಗಳು**: ಈ ದೇವಾಲಯದಲ್ಲಿ ಹಲವಾರು ಲಿಂಗಗಳನ್ನು ಒಳಗೊಂಡ ಗುಡಿಗಳಿವೆ. ನವರಂಗದ ಬಲಭಾಗದಲ್ಲಿ ಸುಂದರೇಶ್ವರ, ಪಶುಪತೇಶ್ವರ, ಮಲ್ಲಿಕಾರ್ಜುನ ಲಿಂಗಗಳಿದ್ದರೆ ಗರ್ಭಗುಡಿಯ

ಹಿಂಭಾಗದಲ್ಲಿ ಪಾತಾಳೇಶ್ವರ, ವೈದ್ಯನಾಥೇಶ್ವರ, ಸುಬ್ರಮಣ್ಯ ಹಾಗೂ ನವರಂಗದ ಎಡಭಾಗದಲ್ಲಿ ಗಂಗಾಧರೇಶ್ವರ, ಕಾಶಿವಿಶ್ವನಾಥೇಶ್ವರ, ಮಂಜುನಾಥೇಶ್ವರ ಎಂಬ ಹೆಸರಿನ ಶಿವಲಿಂಗಗಳಿವೆ.

**ಪ್ರಾಕಾರ:** ಈ ದೇವಾಲಯಕ್ಕೆ ಹೊಸದಾಗಿ ಪ್ರಾಕಾರದ ಗೋಡೆಯನ್ನು ನಿರ್ಮಿಸಲಾಗಿದೆ.ಗೋಪುರವನ್ನು ದ್ರಾವಿಡ ಶೈಲಿ ಮಾದರಿಯಲ್ಲಿ ನಿರ್ಮಿಸಲಾಗಿದ್ದು ಜೀರ್ಣೋದ್ಧಾರವಾಗಿರುವುದು ಕಂಡುಬರುತ್ತದೆ.(ಚಿ.ಸಂ29)

**ನಂಜುಂಡೇಶ್ವರ ದೇವಾಲಯ-ದೇವನಹಳ್ಳಿ:**

ಈ ದೇವಾಲಯವು ದೇವನಹಳ್ಳಿಯ ಪುರಾತನ ದೇವಾಲಯಗಳಲ್ಲಿ ಒಂದಾಗಿದ್ದು ಇದೊಂದು ಸಣ್ಣ ಕಟ್ಟಡವಾಗಿದ್ದು ಎರಡು ಕೋಣೆಗಳನ್ನು ಒಳಗೊಂಡಿದೆ.[33]ಈ ದೇವಾಲಯವನ್ನು ಈ ಹಿಂದೆ ಕಾಶಿವಿಶ್ವೇಶ್ವರ ದೇವಾಲಯವೆಂದು ಕರೆಯಲಾಗುತ್ತಿತ್ತು.ಈ ದೇವಾಲಯವು ಶೈವ ದೇವಾಲಯವಾಗಿದ್ದು ಕೋಟೆಯ ಬದಿಯಲ್ಲಿದ್ದು ಪೂರ್ವಾಭಿಮುಖವಾಗಿದ್ದು ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ.ಇದನ್ನು ಆವತಿ ನಾಡಪ್ರಭುಗಳ ಕಾಲದಲ್ಲಿ ನಿರ್ಮಿಸಲಾಗಿದ್ದು ಎರಡು ಗರ್ಭಗುಡಿಗಳನ್ನು ಹೊಂದಿದ್ದು ದ್ವಿಕೂಟ ದೇವಾಲಯವಾಗಿದೆ.

**1ನೇ ಗರ್ಭಗುಡಿ:-** ಇದು ನಂಜುಂಡೇಶ್ವರ ಎಂದು ಹೆಸರಾಗಿದ್ದು ಗರ್ಭಗುಡಿಯ 6 ಅಡಿ ಉದ್ದ ಮತ್ತು ಅಗಲ 6 ಅಡಿ ಅಗಲಗಳಾಗಿದ್ದು ಪಾಣಿಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು ಸರಳ ಕೆತ್ತನೆಯಿಂದ ಕೂಡಿದೆ. ಗರ್ಭಗುಡಿಯ ದ್ವಾರವು ಸರಳವಾಗಿದ್ದು, ದ್ವಾರದ ಇಕ್ಕೆಲಗಳಲ್ಲಿ ಪೂರ್ಣಕುಂಭದ ಉಬ್ಬು ಕೆತ್ತನೆಯ ಶಿಲ್ಪಗಳಿವೆ. ಇವುಗಳ ಮೇಲೆ ಇತ್ತೀಚಿಗೆ ಬಿಳಿಯ ಬಣ್ಣ ಬಳಿಯಲಾಗಿದೆ.(ಚಿ.ಸಂ.30)

**ಸುಖನಾಸಿ:** ಸುಖನಾಸಿಯು ಸರಳವಾಗಿದ್ದು 6 ಅಡಿ ಉದ್ದ ಮತ್ತು 6 ಅಡಿ ಅಗಲ ಹೊಂದಿದ್ದು ಸುಖನಾಸಿಯ ಬಲಭಾಗದಲ್ಲಿ ಗಣಪತಿಯ ಶಿಲ್ಪವಿದೆ. ಸುಖನಾಸಿಯ ಭುವನೇಶ್ವರಿಯಲ್ಲಿ ಸರ್ಪದ ಕೆತ್ತನೆ ಇದೆ.ಸುಖನಾಸಿಯ ದ್ವಾರವು ಅಲಂಕರಣೆಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಕೀರ್ತಿಮುಖ, ಸ್ತಂಭಪಂಜರ, ಬಳ್ಳಿಸುರಳಿಗಳು ಮತ್ತು ಕಮಲದ ದಳಗಳನ್ನು ಹೊಂದಿದ್ದು ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ.(ಚಿ.ಸಂ.31)

**2ನೇ ಗರ್ಭಗುಡಿ:-** ಇದು ಪಾರ್ವತಿಯ ದೇವಿಯ ಗರ್ಭಗುಡಿಯಾಗಿದ್ದು 8 ಅಡಿ ಉದ್ದ ಮತ್ತು ಅಗಲ 8 ಅಡಿಗಳನ್ನು ಹೊಂದಿದ್ದು ಕಮಲ ಪೀಠದ ಮೇಲೆ ಪಾರ್ವತಿಯು ಕುಳಿತಿರುವ

ಭಂಗಿಯಲ್ಲಿದ್ದು, ಪಾರ್ವತಿ ಶಿಲ್ಪವು 4 ಅಡಿಗಳ ಎತ್ತರ ಹೊಂದಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ನಾಲ್ಕು ಕೈಗಳಲ್ಲಿ ಪದ್ಮ, ತ್ರಿಶೂಲ, ಅಭಯ ಹಸ್ತ ಮತ್ತು ವರದ ಹಸ್ತಗಳನ್ನು ಕೆತ್ತಲಾಗಿದೆ.

**ಸುಖನಾಸಿ:** ಸುಖನಾಸಿಯು ಚಿಕ್ಕದಾಗಿದ್ದು ಉದ್ದ 4 ಅಡಿ ಮತ್ತು ಅಗಲ 4 ಅಡಿಗಳನ್ನು ಹೊಂದಿದೆ. ಸುಖನಾಸಿಯ ದ್ವಾರವು ಸ್ತಂಭಪಂಜರ ಕೀರ್ತಿಮುಖಗಳನ್ನು ಹೊಂದಿದ್ದು ಇಕ್ಕೆಲಗಳಲ್ಲಿ ಶೈವ ದಿಕ್ಪಾಲಕರ ಶಿಲ್ಪಗಳಿವೆ. ಎರಡು ಗರ್ಭಗುಡಿಗಳಿಗೆ ಪ್ರದಕ್ಷಿಣ ಪಥವಿದೆ.

**ನವರಂಗ:** ಒಂದನೇ ಗರ್ಭಗುಡಿಯ ಮುಂಭಾಗದಲ್ಲಿ ನಾಲ್ಕು ಕಂಬಗಳಿದ್ದು ಸರಳ ಕೆತ್ತನೆ ಹೊಂದಿವೆ. ಗರ್ಭಗುಡಿಯ ಮುಂಭಾಗದಲ್ಲಿ ನಕ್ಷತ್ರಾಕಾರದ ಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿರುವ ನಂದಿ ಶಿಲ್ಪವಿದ್ದು, ಅಲಂಕಾರಿಕ ಕೆತ್ತನೆಗಳಿಂದ ಕೂಡಿದ್ದು ಉಬ್ಬಿದ ಭುಜ, ಘಂಟೆಗಳನ್ನು ಹೊಂದಿದೆ.2ನೇ ಗರ್ಭಗುಡಿಯ ಮುಂಭಾಗದಲ್ಲಿ ನಾಲ್ಕು ಕಂಬಗಳನ್ನು ಹೊಂದಿದ್ದು ಸರಳವಾಗಿದೆ.ನವರಂಗದ ಕಂಬಗಳು ಸುಮಾರು 6 ಅಡಿ ಎತ್ತರವನ್ನು ಹೊಂದಿದ್ದು ಚೌಕ, ಅಷ್ಟ, ಷೋಡಸ ಮಾದರಿಯನ್ನು ಮತ್ತು ಮುಷ್ಟಿಬಂಧ ಬೋಧಿಗೆಯನ್ನು ಹೊಂದಿದೆ.(ಚಿ.ಸಂ.32)ಈ ಕಂಬಗಳಲ್ಲಿ ಶಿವಲಿಂಗ, ನರಸಿಂಹ, ಗಣೇಶ, ಆಂಜನೇಯ, ವಾಮನ, ಕೂರ್ಮವತಾರ, ನಾಗಮಂಡಲ, ಮತ್ಸ್ಯ ಕನ್ಯೆ, ಕಮಲ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. 2ನೇ ಗರ್ಭಗುಡಿಯ ಅಂದರೆ ಪಾರ್ವತಿ ದೇವಿಯ ಗುಡಿಯ ಎಡಭಾಗದಲ್ಲಿ ಒಂದು ವೇದಿಕೆಯಿದ್ದು ಅದರ ಮೇಲೆ ನಾಗದೇವತೆ, ಚಂಡಿಕೇಶ್ವರ, ಗಣೇಶ, ಬ್ರಹ್ಮ, ಸರಸ್ವತಿ, ಆಂಜನೇಯ, ಕಾಲಭೈರವ, ವಲ್ಲಿ, ಸೇನಾ, ಸುಬ್ರಹ್ಮಣ್ಯ ಸ್ವಾಮಿ, ಶಿವಲಿಂಗ, ವಿಷ್ಣು, ಶ್ರೀದೇವಿ ಮತ್ತು ಭೂದೇವಿ ಸೂರ್ಯ ಶಿಲ್ಪಗಳಿವೆ. ನವರಂಗವು ಎರಡು ದ್ವಾರಗಳನ್ನು ಹೊಂದಿದ್ದು ಒಂದನೇ ಗರ್ಭಗುಡಿಯ ನವರಂಗ ದ್ವಾರದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಕುಂಭಪಂಜರ, ಗಣೇಶ ಮತ್ತು ದ್ವಾರಪಾಲಕರ ಶಿಲ್ಪಗಳಿದ್ದರೆ ಎರಡನೇ ದ್ವಾರದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಕುಂಭಪಂಜರ ಮತ್ತು ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳಿವೆ.

**ಮುಖಮಂಟಪ:** ಇದು 6 ಕಂಭಗಳನ್ನು ಹೊಂದಿದ್ದು ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಅವುಗಳು ಚೌಕ, ಅಷ್ಟ, ಷೋಡಷ ಮಾದರಿಯಲ್ಲಿದ್ದು, ಕಂಬಗಳಲ್ಲಿ ಆಂಜನೇಯ, ಸ್ತ್ರೀ, ಸಿಂಹ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.(ಚಿ.ಸಂ.33)

1ನೇ ಗರ್ಭಗುಡಿಗೆ ಎದುರಾಗಿ ಮುಖಮಂಟಪದ ಮುಂಭಾಗದಲ್ಲಿ ಅಂದರೆ ಶಿವಲಿಂಗಕ್ಕೆ ಎದುರಾಗಿ ನಂದಿ ಶಿಲ್ಪವಿದೆ.ಅದರ ಹಿಂಭಾಗದಲ್ಲಿ ಬಲಿಪೀಠವಿದೆ. ಎರಡನೇ ಗರ್ಭಗುಡಿಯ ಮುಖಮಂಟಪದ ಮುಂಭಾಗದಲ್ಲಿ ಪೀಠದ ಮೇಲೆ ನಿಲ್ಲಿಸಿರುವ 20 ಅಡಿ ಎತ್ತರದ ಸ್ತಂಭವಿದೆ.

ಗರುಡಗಂಭದಲ್ಲಿ ಶಾಸನವಿದೆ.[34]ಅದರ ತಳಭಾಗದಲ್ಲಿ ಶಂಖ, ಆಂಜನೇಯ ಮುಂತಾದ ಉಬ್ಬುಶಿಲ್ಪಗಳಿದ್ದು ದೇವಾಲಯದ ಮುಖಮಂಟಪಕ್ಕೆ ಎದುರಾಗಿ ಗೋಪುರವನ್ನು ನಿರ್ಮಿಸಲಾಗಿದೆ.ಸ್ಥಳೀಯರು ಮತ್ತು ಈ ದೇವಾಲಯದ ಪ್ರಸ್ತುತ ಅರ್ಚಕರಾದ ರಂಗನಾಥಶರ್ಮ ಎಂಬುವರು ನೀಡಿದ ಮಾಹಿತಿಯಂತೆ ಈ ದೇವಾಲಯವು ದೇವನಹಳ್ಳಿಯ ಅತ್ಯಂತ ಹಳೆಯ ದೇವಾಲಯವಾಗಿದೆ.

**ಸೋಮೇಶ್ವರ ದೇವಾಲಯ–ವಿಜಯಪುರ**:

ಇದೊಂದು ಶೈವ ದೇವಾಲಯವಾಗಿದ್ದುವಿಜಯಪುರ ಪಟ್ಟಣದ ಮಧ್ಯಭಾಗದಲ್ಲಿದೆ. ಈ ದೇವಾಲಯವು ವಿಜಯನಗರ ಕಾಲದ ರಚನೆಯಾಗಿದ್ದು ಏಕಕೂಟ ದೇವಾಲಯವಾಗಿದ್ದು ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ**: ಗರ್ಭಗುಡಿಯು 10 ಅಡಿಉದ್ದ ಮತ್ತು 10 ಅಡಿ ಅಗಲಗಳನ್ನು ಹೊಂದಿದ್ದು ಚೌಕಾಕಾರವಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಸೋಮೇಶ್ವರ ಲಿಂಗವಿದ್ದು ಇತ್ತೀಚೆಗೆ 5 ಹೆಡೆಯ ಪಂಚಲೋಹವನ್ನು ಸೇರಿಸಲಾಗಿದೆ.(ಚಿ.ಸಂ.34)ಗರ್ಭಗುಡಿಯಲ್ಲಿ ಯಾವುದೇ ಅಲಂಕಾರಿಕ ಕೆತ್ತನೆಗಳು ಕಂಡುಬರದೆ ಇತ್ತೀಚೆಗೆ ಚದರಬಿಲ್ಲೆಗಳನ್ನು ಹಾಕಲಾಗಿದೆ.ಗರ್ಭಗುಡಿಯ ದ್ವಾರವು ಸರಳವಾಗಿದೆ.

**ಸುಖನಾಸಿ**: ಸುಖನಾಸಿಯು 12 ಅಡಿ ಉದ್ದ ಮತ್ತು ಅಗಲ 10 ಅಡಿಗಳನ್ನು ಹೊಂದಿದ್ದು ಯಾವುದೇ ಶಿಲ್ಪಗಳು ಕಂಡುಬಂದಿರುವುದಿಲ್ಲ. ಸುಖನಾಸಿ ದ್ವಾರವು ಬಳ್ಳಿ ಸುರುಳಿಗಳು ಮತ್ತು ಮಣಿಸರಗಳಿಂದ ಅಲಂಕಾರಿಕಗೊಂಡಿದೆ.ದ್ವಾರ ಶಾಖೆಯ ಇಕ್ಕೆಲಗಳಲ್ಲಿ ತಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ ಇವರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರು 4 ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಡಮರು, ತ್ರಿಶೂಲ, ಮತ್ತೆರೆಡು ಕೈಗಳಲ್ಲಿ ಗದೆ ಮತ್ತು ವರದ ಹಸ್ತವನ್ನು ಹೊಂದಿದ್ದಾರೆ ದ್ವಾರದ ಲಲಾಟಬಿಂಬದಲ್ಲಿ ಗಣೇಶನ ಉಬ್ಬು ಶಿಲ್ಪವಿದೆ.

ಸುಖನಾಸಿಯ ಮುಂಭಾಗದಲ್ಲಿ ಮತ್ತೊಂದು ತೆರೆದ ಅಂತರಾಳವಿದೆ.ಇದರ ಉದ್ದ 6 ಅಡಿ ಮತ್ತು ಅಗಲ 7 ಅಡಿಗಳಾಗಿರುತ್ತದೆ.ಈ ಭಾಗದಲ್ಲಿ ಶಿವಲಿಂಗ ಗರ್ಭಗುಡಿಗೆ ಮುಖಮಾಡಿರುವ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು ಇದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ ಗರ್ಭಗುಡಿಯಿಂದ ತೆರೆದ ಅಂತರಾಳದವರೆಗೆ ಕಂಬಗಳು ಕಂಡುಬಂದಿರುವುದಿಲ್ಲ.

**ನವರಂಗ**: ನವರಂಗವು 18 ಅಡಿ ಉದ್ದ ಮತ್ತು 18 ಅಡಿ ಅಗಲಗಳನ್ನು ಹೊಂದಿದೆ.ನವರಂಗದ ಮಧ್ಯಭಾಗದಲ್ಲಿ ವಿಜಯನಗರ ಶೈಲಿಯ 4 ಪ್ರಧಾನ ಕಂಬಗಳು ಮತ್ತು 8 ಅರೆಗಂಬಗಳಿವೆ. ನವರಂಗದ 4 ಕಂಬಗಳು ಸಮಾನಾಂತರವಾಗಿದ್ದು ಕಂಬಗಳ ಎತ್ತರ ಸುಮಾರು 6.5 ಅಡಿಗಳಾಗಿದ್ದು ಕಂಬಗಳು ಚೌಕ, ಅಷ್ಟಕೋನಾಕೃತಿ ಮಾದರಿಯನ್ನು ಮತ್ತು ವಿಜಯನಗರ ಶೈಲಿಯ ಪುಷ್ಪ ಬೋದಿಗೆಯನ್ನು ಹೊಂದಿವೆ.(ಚಿ.ಸಂ.35)ನವರಂಗದ ಕಂಬಗಳಲ್ಲಿ ಕಮಲ, ನಂದಿ, ಹಂಸ, ಕೀರ್ತಿಮುಖ, ನರ್ತಕಿ, ಗಣೇಶ, ಸರಸ್ವತಿ, ಆಂಜನೇಯ, ಷಣ್ಮುಖ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.ನವರಂಗದ ಮೇಲ್ಛಾವಣಿಯಲ್ಲಿ ಅಷ್ಟದಿಕ್ಪಾಲಕರು ಶಿವಪಾರ್ವತಿ ಉಮಾಮಹೇಶ್ವರರ ಉಬ್ಬು ಶಿಲ್ಪ ಕೆತ್ತನೆಗಳಿವೆ.

**ನವರಂಗದಲ್ಲಿನ ಶಿಲ್ಪಗಳು**: ನವರಂಗದ ಬಲಭಾಗದಲ್ಲಿ ಚಿಕ್ಕ ವೇದಿಕೆಯ ಮೇಲೆ ಗಣೇಶ, ಅಯ್ಯಪ್ಪಸ್ವಾಮಿ, ಮತ್ತು ನಂದಿ ಶಿಲ್ಪಗಳಿವೆ. ನಂದಿ ಶಿಲ್ಪವನ್ನು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದು ಅದರ ಉದ್ದ 2.3 ಅಡಿ ಮತ್ತು ಅಗಲವು ಒಂದೂವರೆ ಅಡಿಗಳಾಗಿರುತ್ತದೆ. ಗಣೇಶ ಶಿಲ್ಪವು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.ಅದರ ಎಡ ಪಾರ್ಶ್ವದಲ್ಲಿ ಸೋಮೇಶ್ವರ ಶಿಲ್ಪವಿದ್ದು ಅದು 4 ಕೈಗಳನ್ನು ಹೊಂದಿದ್ದು ಸಮಭಂಗಿಯಲ್ಲಿ ನಿಂತಿದ್ದು ಎರಡು ಕೈಗಳಲ್ಲಿ ವರದ ಹಸ್ತ ಮತ್ತು ಅಭಯ ಹಸ್ತಗಳನ್ನು ಕೆತ್ತಲಾಗಿದೆ.ನವರಂಗದಲ್ಲಿ ಭಕ್ತನ ಶಿಲ್ಪ ಮತ್ತು 5 ಹೆಡೆಯ ನಾಗರ ಶಿಲ್ಪ ಮತ್ತು ಅಯ್ಯಪ್ಪಸ್ವಾಮಿ ಶಿಲ್ಪವನ್ನು ಸಹ ಪ್ರತಿಷ್ಠಾಪಿಸಲಾಗಿದೆ.

ನವರಂಗದ ಎಡಭಾಗದಲ್ಲಿ ಪದ್ಮಪೀಠದ ಮೇಲೆ ಶಿವಲಿಂಗವಿದ್ದುಮತ್ತು ಒಂದುವರೆ ಅಡಿ ಕಲ್ಲುಪೀಠದ ಮೇಲೆ ನವಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.(ಚಿ.ಸಂ.36)ನವರಂಗದ ದ್ವಾರವು ಬಳ್ಳಿ ಸುರುಳಿ ಮಣಿಸರಗಳಿಂದ ಅಲಂಕರಣ ಹೊಂದಿದ್ದು ಲಲಾಟಬಿಂಬದಲ್ಲಿನ ಶಿಲ್ಪಗಳು ಸ್ಪಷ್ಟವಾಗಿ ಕಾಣುವುದಿಲ್ಲ. ದ್ವಾರದ ಇಕ್ಕೆಲಗಳಲ್ಲಿ ಮುಖಮಂಟಪಕ್ಕೆ ಹೊಂದಿಕೊಂಡಂತೆ ಅಲಂಕರಣೆಯಿಂದ ಕೂಡಿರುವ 2 ಸ್ತಂಭಗಳಿದ್ದು ಈ ಸ್ತಂಭಗಳ ಕೆಳಭಾಗದಲ್ಲಿ ಅಲಂಕಾರಿಕ ಅರೆಗಂಬ ಮತ್ತು ಮೇಲ್ಭಾಗದಲ್ಲಿ ಸಿಂಹಗಳು  ಎರಡು ಕಾಲನ್ನು ಮೇಲೆತ್ತಿ ನೆಗೆಯುತ್ತಿರುವಂತೆ ಕಂಡರಿಸಿರುವ ಸಿಂಹಕಾಂತ ಕಂಬಗಳಿವೆ. ವಿಜಯನಗರ ಕಾಲದ ಈ ಕಂಬಗಳ ಮಧ್ಯದಲ್ಲಿ ಕುದುರೆ ದೇಹ, ಸಿಂಹದ ಮುಖ, ಯಾಳಿ ಕೆತ್ತನೆಗಳನ್ನು ಮಾಡಲಾಗಿದ್ದು ನವರಂಗದ ದ್ವಾರದ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ.[35]

**ಮುಖಮಂಟಪ**: ಇದನ್ನು ಕ್ರಿ.ಶ.1795ರಲ್ಲಿ ಸೇರ್ಪಡೆಗೊಳಿಸಲಾಯಿತು. ಇದು ತೆರೆದ ಸರಳ ಮುಖಮಂಟಪವಾಗಿದ್ದು ಉದ್ದ 8 ಅಡಿ ಮತ್ತು ಅಗಲ 30 ಅಡಿಗಳಾಗಿದ್ದು ಮುಖಮಂಟಪದಲ್ಲಿ 6 ಕಂಬಗಳು ಇದ್ದು 8 ಅಡಿ ಎತ್ತರವನ್ನು ಹೊಂದಿವೆ. ಇವು ಚೌಕ, ಅಷ್ಟ, ಚೌಕ ಮಾದರಿಯಲ್ಲಿದ್ದು

ಮುಷ್ಟಿಬಂಧ ಬೋಧಿಗೆಯನ್ನು ಹೊಂದಿವೆ. ಮುಖಮಂಟಪದ ಇಕ್ಕೆಲಗಳಲ್ಲಿ ಎರಡು ಆನೆಗಳ ಸೋಪಾನವಿದ್ದು ವಿಜಯನಗರ ಶೈಲಿಯ ಕೆತ್ತನೆಗಳಾಗಿದೆ. ಮುಖಮಂಟಪದ ಎಡಭಾಗದ ಮೇಲ್ಛಾವಣಿಯ ಒಂದು ಚಪ್ಪಡಿಯಲ್ಲಿ ಅಪ್ರಕಟಿತ ಶಿಲಾಶಾಸನವಿರುವುದು ಕಂಡುಬರುತ್ತದೆ.[36]

**ನಂದಿಸ್ತಂಭ:** ದೇವಾಲಯದ ಮುಂಭಾಗದಲ್ಲಿ ಸುಮಾರು 12 ಅಡಿ ಎತ್ತರದ ನಂದಿ ಸ್ತಂಭವಿದೆ. ಸ್ತಂಭದ ಕೆಳಭಾಗ ಚೌಕಕಾರವಾಗಿದ್ದು ಅಷ್ಟಕೋನ ಮತ್ತು ವೃತ್ತಾಕಾರದ ಬೋಧಿಗೆಯನ್ನು ಹೊಂದಿದೆ.(ಚಿ.ಸಂ.37)

**ಪ್ರಾಕಾರ**: ಈ ದೇವಾಲಯವು ತೆರೆದ ಪ್ರಾಕಾರವನ್ನು ಹೊಂದಿದೆ.(ಚಿ.ಸಂ.38)

**ಭಿತ್ತಿ**: ದೇವಾಲಯದ ಹೊರಭಿತ್ತಿಯಲ್ಲಿ ಉಬ್ಬು ಕೆತ್ತನೆಯ ಶಿಲ್ಪಗಳಿವೆ (ಚಿ.ಸಂ.39)ಗರ್ಭಗುಡಿಯ ಭಿತ್ತಿಯಲ್ಲಿ ಕಾಲಭೈರವ, ಬೇಡರಕಣ್ಣಪ್ಪ, ನಂದಿ, ಹಸುಕರು, ಆನೆ ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಹೊರಗಡೆ ದೇವಾಲಯದ ಮೇಲ್ಭಾಗದ ಕೂಡುಗಳಲ್ಲಿ ಶಿಲ್ಪಗಳಿವೆ. ದೇವಕೋಷ್ಟಕಗಳಿದ್ದು ಅದರ ಮೇಲೆ ಕೀರ್ತಿಮುಖ ಮತ್ತು ದೇವಾಲಯದ ಶಿಖರ ಮಾದರಿಯನ್ನು ಇಟ್ಟಿಗೆ ಮತ್ತು ಅಚ್ಚುಗಾರೆಯಿಂದ ನಿರ್ಮಿಸಲಾಗಿದೆ.

**ಚಂದ್ರಮೌಳೇಶ್ವರ ದೇವಾಲಯ-ದೇವನಹಳ್ಳಿ:**

ಇದು ಶೈವ ದೇವಾಲಯವಾಗಿದ್ದುಕೋಟೆ ಬೀದಿಯಲ್ಲಿಎಡಭಾಗದಲ್ಲಿದ್ದು ಉತ್ತರಾಭಿಮುಖವಾಗಿದೆ.ಈ ದೇವಾಲಯದ ಒಳಪ್ರಾಕಾರವು ವಿಜಯನಗರ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದೆ.[37] ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದ್ದು(ಚಿ.ಸಂ.40)ಸುತ್ತಲೂ ವಿಶಾಲವಾದ ಪ್ರಾಕಾರವಿದ್ದು ಪ್ರಸ್ತುತ ಕೆಡವಲ್ಪಟ್ಟಿದೆ.ಈ ದೇವಾಲಯವು ವಿಜಯನಗರ ಕಾಲಕ್ಕೆ ಸೇರಿದ್ದು, ದೇವಾಲಯದಲ್ಲಿ 5 ಗರ್ಭಗುಡಿಗಳಿದ್ದು ಪಂಚಕೂಟ ದೇವಾಲಯವಾಗಿದೆ.

**1ನೇ ಗರ್ಭಗುಡಿ**: ಇದರ ಉದ್ದ 6 ಅಡಿ ಮತ್ತು ಅಗಲ 6 ಅಡಿಗಳು ಆಗಿದ್ದುಗರ್ಭಗುಡಿಯಲ್ಲಿ ಪೀಠವಿಲ್ಲದ ಉದ್ಭವ ಗಣಪತಿ ಇದ್ದು ಇದು 2 ಅಡಿ ಎತ್ತರ ಹೊಂದಿದ್ದು ಹಿತ್ತಾಳೆಯ ಕಮಾನನ್ನು ಹೊಂದಿದ್ದು ಗರ್ಭಗುಡಿಯಲ್ಲಿ ಚದರಬಿಲ್ಲೆಹಾಕಲಾಗಿದೆ. (ಚಿ.ಸಂ.41)

**2ನೇ ಗರ್ಭಗುಡಿ**: ಉದ್ದ 8 ಅಡಿ ಮತ್ತು ಅಗಲ 8 ಅಡಿಗಳನ್ನು ಹೊಂದಿದ್ದುಮುಖ್ಯಗರ್ಭಗೃಹವಾಗಿದ್ದು ಚಂದ್ರಮೌಳೇಶ್ವರನ ಗರ್ಭಗುಡಿಯಾಗಿದೆ. ಪೀಠದ ಮೇಲೆ

ಕಪ್ಪು ಗ್ರಾನೈಟ್ ಶಿಲೆಯಿಂದ ಕೆತ್ತಿರುವ ಸುಮಾರು ಎರಡೂವರೆ ಅಡಿ ಎತ್ತರವಿರುವ ಶಿವಲಿಂಗವಿದೆ.ಗರ್ಭಗುಡಿಯ ದ್ವಾರದಲ್ಲಿ ಲಲಾಟಬಿಂಬದಲ್ಲಿ ಕೀರ್ತಿಮುಖ ಮತ್ತು ಸ್ತಂಭ ಪಂಜರಗಳಿವೆ. ಈ ಗರ್ಭಗುಡಿಗೆ ಸುಖನಾಸಿ ಇದ್ದು ಉದ್ದ 8 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ.ಗರ್ಭಗುಡಿಗೆ ಎದುರಾಗಿ ಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯಿಂದ ಕೆತ್ತಿರುವ ನಂದಿ ಶಿಲ್ಪವಿದೆ.ಸುಖನಾಸಿಯ ದ್ವಾರದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಬಳ್ಳಿ ಸುರಳಿಗಳು ಮತ್ತು ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ.

**3ನೇ ಗರ್ಭಗುಡಿ**: ಇದು ಪಾರ್ವತಿ ದೇವಿಯ ಗರ್ಭಗುಡಿಯಾಗಿದ್ದು ಇದು 8 ಅಡಿ ಉದ್ದ ಮತ್ತು ಅಗಲ 8 ಅಡಿಗಳನ್ನು ಹೊಂದಿದೆ.ಪಾರ್ವತಿಯು ನಿಂತಿರುವ ಭಂಗಿಯಲ್ಲಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಅಭಯ ಹಸ್ತ, ವರದ ಹಸ್ತ, ತ್ರಿಶೂಲ ಮತ್ತು ಕಮಲವಿದೆ.ಗರ್ಭಗುಡಿಯ ದ್ವಾರದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಪೂರ್ಣಕುಂಬ ಕಮಲದಳಗಳ ಕೆತ್ತನೆಗಳಿವೆ.

**4ನೇ ಗರ್ಭಗುಡಿ**: ಶಾರದಾಂಭ ಗರ್ಭಗುಡಿಯಾಗಿದ್ದು ಈ ಗರ್ಭಗುಡಿಯು ಇತ್ತೀಚಿಗೆ ನಿರ್ಮಾಣವಾಗಿರುವ ಗರ್ಭಗುಡಿಯಾಗಿದೆ. ಉದ್ದ 4 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ. ಶಾರದಾಂಬೆಯು ಪೀಠದ ಮೇಲಿದ್ದು ಅಮೃತ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಕಳಶ, ಪುಸ್ತಕ, ವರದಹಸ್ತ ಮತ್ತು ಗಿಳಿಗಳಿವೆ. ಗರ್ಭಗುಡಿಯಲ್ಲಿ ಚದರಬಿಲ್ಲೆ ಹಾಕಿರುವುದು ಕಂಡುಬರುತ್ತದೆ.

**5ನೇ ಗರ್ಭಗುಡಿ**: ಶಂಕರಚಾರ್ಯ ಗರ್ಭಗುಡಿಯಾಗಿದ್ದು ಉದ್ದ 4 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ. ಪೀಠದ ಮೇಲೆ ಶಂಕರಚಾರ್ಯರ ಮೂರ್ತಿಯನ್ನು ಅಮೃತ ಶಿಲೆಯಲ್ಲಿ ಪ್ರತಿಷ್ಠಾಪಿಸಲಾಗಿದ್ದು ಶಂಕರಚಾರ್ಯರು ತಮ್ಮ ಬಲಗೈಯಲ್ಲಿ ಅಭಯಹಸ್ತವನ್ನು ಎಡಗೈಯಲ್ಲಿ ಪುಸ್ತಕವನ್ನು ಹಿಡಿದಿದ್ದಾರೆ.

**ನವರಂಗ**: ನವರಂಗದಲ್ಲಿ ಮೂರು ಕಂಬಗಳು ಕಂಡುಬಂದಿದ್ದು ಅವುಗಳು ಸುಮಾರು 6 ಅಡಿ ಎತ್ತರವನ್ನು ಹೊಂದಿದ್ದು ಚೌಕ, ಅಷ್ಟ ಮಾದರಿಯನ್ನು ಮತ್ತು ಸರಳ ಬೋಧಿಗೆಯನ್ನು ಹೊಂದಿದ್ದು(ಚಿ.ಸಂ.42)ಅದರಲ್ಲಿ ಒಂದು ಕಂಬವು ಚೌಕ ಮಾದರಿಯನ್ನು ಎರಡು ಮತ್ತು ಮೂರು ಕಂಬಗಳು ಷೋಡಷ ಮಾದರಿಯನ್ನು ಹೊಂದಿವೆ. ಕಂಬಗಳಲ್ಲಿ ಕಮಲದ ಉಬ್ಬು ಕೆತ್ತನೆಯ ಶಿಲ್ಪಗಳಿವೆ. ನವರಂಗದಲ್ಲಿ 2ನೇ ಗರ್ಭಗುಡಿಗೆ ಅಂದರೆ ಚಂದ್ರಮೌಳೇಶ್ವರನ ಗುಡಿಗೆ ಎದುರಾಗಿ ನಕ್ಷತ್ರಾಕಾರದ ಭುವನೇಶ್ವರಿಯಲ್ಲಿ ಅರಳಿದ ಕಮಲದ ಕೆತ್ತನೆಯಿದೆ.

**ಮುಖಮಂಟಪ**: ಭಿತ್ತಿಗೆ ಹೊಂದಿಕೊಂಡಂತೆ 12 ಕಂಬಗಳಿದ್ದು, ಅವು ಸುಮಾರು 10 ಅಡಿ ಎತ್ತರವಾಗಿದ್ದು ಸರಳ ಬೋಧಿಗೆಯನ್ನು ಹೊಂದಿವೆ. ಕಂಬಗಳಲ್ಲಿ ಕುಂಭ, ನಂದಿ, ಸ್ತ್ರೀಶಿಲ್ಪ, ಕಮಲ, ಮೂಷಿಕ ವಾಹನ ಮೇಲೆ ಕುಳಿತ ಗಣೇಶ, ಶಿವಲಿಂಗ ಮುಂತಾದ ಉಬ್ಬು ಕೆತ್ತನೆಯ ಶಿಲ್ಪಗಳಿವೆ.

**ನಗರೇಶ್ವರ ದೇವಾಲಯ–ವಿಜಯಪುರ**:

ಇದು ಶೈವ ದೇವಾಲಯವಾಗಿದ್ದು ವಿಜಯಪುರ ಪಟ್ಟಣದ ಗಾಂಧಿಚೌಕದ ಬಳಿಯಿದ್ದು ಪೂರ್ವಾಭಿಮುಖವಾಗಿದೆ. ಇದು ಹಳೆಯ ದೇವಾಲಯವಾಗಿದ್ದು ವಿಜಯನಗರ ಶೈಲಿಗೆ ಸೇರಿದೆ.[38]ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಖಾಸಗಿ ಧರ್ಮದರ್ಶಿ ಮಂಡಳಿಗೆ ಒಳಪಟ್ಟಿದ್ದು ಜೀರ್ಣೋದ್ಧಾರಗೊಂಡಿದೆ.

**ಗರ್ಭಗೃಹ**: ಗರ್ಭಗೃಹವು 8 ಅಡಿ ಉದ್ದ ಮತ್ತು ಅಗಲ 8 ಅಡಿಗಳನ್ನು ಹೊಂದಿದ್ದು ಗರ್ಭಗುಡಿಯಲ್ಲಿಎರಡು ಅಡಿ ಪೀಠದ ಮೇಲೆ ಕಡುಗ್ರಾನೈಟ್ ಶಿಲೆಯ ನಗರೇಶ್ವರ/ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ.ಸಂ.43)ಗರ್ಭಗೃಹದಲ್ಲಿನ ನಗರೇಶ್ವರ ಶಿವಲಿಂಗವನ್ನು ಕಲ್ಲಣ್ಣನವರ ಮಗನಾದ ಬಸಪ್ಪ ಎಂಬುವನು ಕ್ರಿ.ಶ.1845ರಲ್ಲಿ ಪ್ರತಿಷ್ಠಾಪಿಸಿದರು.ಮೇಲ್ಭಾವಣಿಯಲ್ಲಿ ಭುವನೇಶ್ವರಿ ಇದ್ದು, ಗರ್ಭಗುಡಿಯ ದ್ವಾರವು ಪೂರ್ಣಕುಂಭ ಮಾದರಿಯನ್ನು ಹೊಂದಿದೆ.

**ಸುಖನಾಸಿ**: ತೆರೆದ ಮಾದರಿ ಸುಖನಾಸಿ ಕಂಡುಬಂದಿದ್ದುಉದ್ದ 8 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ. ಮೇಲ್ಭಾವಣಿಯಲ್ಲಿ ಭುವನೇಶ್ವರಿಯಿದ್ದು ಚೌಕಾಕಾರದಲ್ಲಿದೆ.ಭುವನೇಶ್ವರಿಯಲ್ಲಿ ಪದ್ಮದಳ ಕೆತ್ತನೆಯಿದೆ.ಸುಖನಾಸಿಯ ಬಲಭಾಗದಲ್ಲಿ ಒಂದು ತೆರೆದ ಗುಡಿಯಿದ್ದು ಅದರಲ್ಲಿ ಗಣಪತಿ ಶಿಲ್ಪವಿದೆ. ಸುಖನಾಸಿಯ ದ್ವಾರವು ಬಳ್ಳಿ ಸುರುಳಿಗಳಿಂದ ಕೂಡಿದ್ದು ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಸುಖನಾಸಿಯ ದ್ವಾರದ ಕೆಳಗಡೆ ಶೈವದ್ವಾರ ಪಾಲಕರ ಶಿಲ್ಪಗಳಿವೆ. ಸುಖನಾಸಿಯ ಎಡಭಾಗದಲ್ಲಿ ಪಾರ್ವತಿ ಗುಡಿಯಿದ್ದು ಈ ಗುಡಿಯ ಸುಖನಾಸಿ ದ್ವಾರವು ಬಳ್ಳಿಸುರುಳಿಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ದ್ವಾರದ ಕೆಳಗೆ ಶೈವ ದ್ವಾರಪಾಲಕರ ಶಿಲ್ಪವಿದೆ.

**ನವರಂಗ**:20 ಅಡಿ ಉದ್ದ ಮತ್ತು ಅಗಲ 20ಅಡಿಗಳು ನವರಂಗದ ಮಧ್ಯಭಾಗದಲ್ಲಿ ನಾಲ್ಕು ಪ್ರಧಾನ ಕಂಬಗಳಿದ್ದು ಅವು 6 ಅಡಿ ಎತ್ತರವನ್ನು ಹೊಂದಿದ್ದು ವಿಜಯನಗರ ಶೈಲಿಯಲ್ಲಿವೆ. ಇವು ಚೌಕ, ಅಷ್ಟ ಮತ್ತು ಷೋಡಶ ಮಾದರಿಯಲ್ಲಿದ್ದು ಮೇಲ್ಭಾಗದಲ್ಲಿ ಮುಷ್ಠಿಬಂಧ

ಬೋಧಿಗೆಯಿದೆ.(ಚಿ.ಸಂ.44)ಈ ಕಂಬಗಳಲ್ಲಿ ಶಿವಲಿಂಗ, ಯಾಳಿ, ಚಂದ್ರ, ಕುದುರೆ ಸವಾರ, ಕಾರ್ತಿಕೇಯ, ಯೋಗಭಂಗಿ, ಚಕ್ರ, ಸೂರ್ಯ, ಪೂರ್ಣಕುಂಬ, ಸರ್ಪ, ನಂದಿ, ಟಗರು, ಕಾಮಧೇನು, ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.

**ನಂದಿಶಿಲ್ಪ**: ನವರಂಗದಲ್ಲಿ ಮುಖ್ಯ ಆಕರ್ಷಕ ಶಿಲ್ಪವೆಂದರೆ ಗರ್ಭಗುಡಿಗೆ ಎದುರಾಗಿ ಪೀಠದ ಮೇಲೆ ಒಂದೂವರೆ ಅಡಿ ಎತ್ತರದ ಕಪ್ಪು ಗ್ರಾನೈಟ್ ಶಿಲೆಯ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯು ಅಲಂಕಾರಿಕ ಕೆತ್ತನೆಗಳನ್ನು ಹೊಂದಿದ್ದು ಘಂಟೆ, ಮಾಲೆ, ಹಣೆಕಟ್ಟು ಉಬ್ಬಿದ ಭುಜಗಳನ್ನು ಹೊಂದಿದೆ.ನವರಂಗದ ಮೇಲ್ಛಾವಣಿಯಲ್ಲಿ ವೃತ್ತಾಕಾರದ ಭುವನೇಶ್ವರಿ ಇದೆ.ನವರಂಗದ ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮತ್ತು ಕೆಳಭಾಗದಲ್ಲಿ ಶೈವದ್ವಾರಪಾಲಕರ ಶಿಲ್ಪಗಳಿವೆ.

**ಮುಖಮಂಟಪ**: ಇದರಲ್ಲಿ 6 ಪ್ರಧಾನ ಕಂಬಗಳಿದ್ದು ಅವು 8 ಅಡಿ ಎತ್ತರ ಹೊಂದಿದ್ದು ಚೌಕ, ಅಷ್ಟ, ಮುಷ್ಠಿಬಂಧ ಬೋದಿಗೆಯನ್ನು ಹೊಂದಿದೆ ಮುಖಮಂಟಪದ ಎಡಭಾಗದಲ್ಲಿ ನವಗ್ರಹಗಳ ಚಿಕ್ಕಗುಡಿ ಇದೆ. ಮುಖಮಂಟಪದ ಮುಂಭಾಗದಲ್ಲಿ ಬಲಿಪೀಠ ಮತ್ತು ಅದರ ಮುಂಭಾಗದಲ್ಲಿ ಸುಮಾರು 30 ಅಡಿ ಎತ್ತರದ ನಂದಿಸ್ತಂಭವಿದೆ. (ಚಿ.ಸಂ.45) ಮುಖಮಂಟಪದ ಮುಂಭಾಗದ ಗುಡಿಯಲ್ಲಿ ಈ ದೇವಾಲಯದ ನಿರ್ಮಾತೃಗಳಾದ ಅಪ್ಪಯ್ಯ ಶಾಮಪ್ಪರವರ ಮೂರ್ತಿ ಶಿಲ್ಪಗಳನ್ನು ಕಪ್ಪು ಶಿಲೆಯಲ್ಲಿ ನಿಂತಿರುವ ಭಂಗಿಯಲ್ಲಿ ಪ್ರತಿಷ್ಠಾಪಿಸಲಾಗಿದೆ.ಮುಖಮಂಟಪದ ಮುಂಭಾಗದ ಇನ್ನೊಂದು ಗುಡಿಯಲ್ಲಿ ಭೈರವ ಶಿಲ್ಪವಿದ್ದು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲ್ಪಟ್ಟಿದೆ. ಈ ದೇವಾಲಯದ ಆವರಣದಲ್ಲಿ ಆದಿನಾರಾಯಣ ದೇವಾಲಯ ಮತ್ತು ಈ ದೇವಾಲಯಕ್ಕೆ ಭೇಟಿನೀಡಿದ ಸರ್.ಎಂ.ವಿಶ್ವೇಶ್ವರಯ್ಯ.ಮತ್ತು ಸಿದ್ದಗಂಗಾಶ್ರೀಗಳ ಶಿಲ್ಪಗಳಿವೆ.

**ದ್ವಾರಮಂಟಪ ಮತ್ತು ಗೋಪುರ**: ದೇವಾಲಯವು ವಿಜಯನಗರ ಶೈಲಿಯ ದ್ವಾರಮಂಟಪವನ್ನು ಹೊಂದಿದೆ. ದ್ವಾರಶಾಖೆಯ ಇಕ್ಕೆಲೆಗಳಲ್ಲಿ ಲತಾ ಸುರುಳಿ ಬಳ್ಳಿ ಸಾಲಾಂಕೃತ ಶಾಖೆಯನ್ನು ಹೊಂದಿದ್ದು ದ್ವಾರದ ಲಲಾಟಬಿಂಬದಲ್ಲಿ ಪದ್ಮದ ಕೆತ್ತನೆಯಿದೆ ದ್ವಾರದ ಒಳಭಾಗದ ಪಾರ್ಶ್ವಗಳಲ್ಲಿ ಮಕರಸೀನ, ಗಂಗಾಯಮುನ (ಲತಾಶ್ರೀ ಬಳ್ಳಿಗಳು) ಅಲಂಕಾರಿಕ ಕೆತ್ತನೆಗಳಿವೆ ದ್ವಾರಶಾಖೆಯ ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬು ಕೆತ್ತನೆಯಿದ್ದು ಪ್ರಭಾವಳಿಯಲ್ಲಿ ಕೀರ್ತಿಮುಖವಿದೆ. ದ್ವಾರಗೋಪುರವು ದ್ರಾವಿಡ ಶೈಲಿಯಲ್ಲಿದ್ದು ಸುಮಾರು 80 ಅಡಿ ಎತ್ತರವನ್ನು ಹೊಂದಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವಾಲಯಗಳಲ್ಲೇ ಅತೀ ಎತ್ತರದ ಗೋಪುರವೆಂದು ಪರಿಗಣಿಸಲ್ಪಟ್ಟಿದೆ ಎಂದು ಸ್ಥಳೀಯರು ತಿಳಿಸಿರುತ್ತಾರೆ.ಗೋಪುರವು ಸುಮಾರು 15 ಅಡಿಗಳವರೆಗೆ ಕಲ್ಲಿನ ರಚನೆಯನ್ನು ಹೊಂದಿದ್ದು ಅದರ ಮೇಲೆ ಗಾರೆ ರಚನೆ ಕಂಡು ಬಂದಿದೆ.ಗೋಪುರದಲ್ಲಿ

ಗಾರೆಯ ಉಬ್ಬು ಶಿಲ್ಪಗಳು ಮತ್ತು ಗೋಪುರದ ಮೇಲೆ ಚಿನ್ನ ಲೇಪಿತ ಕಳಶಗಳವೆ.ರಾಯಗೋಪುರವು ಮೈಸೂರು ಒಡೆಯರ ಶೈಲಿಯ ಗಾರೆಶಿಲ್ಪಗಳನ್ನು ಹೊಂದಿದೆ.(ಚಿ.ಸಂ.46) ಈ ದೇವಾಲಯಕ್ಕೆ ಹೊಂದಿಕೊಂಡಂತೆ ಆದಿನಾರಾಯಣ ಸ್ವಾಮಿ ದೇವಾಲಯವಿದ್ದು ಇದನ್ನು ಕ್ರಿ.ಶ.1858ರಲ್ಲಿ ಕಲ್ಲಣ್ಣನವರ ಮಗನಾದ ಅಪ್ಪೇಶಾಮಪ್ಪ ಎಂಬುವರು ಪ್ರತಿಷ್ಠಾಪಿಸಿದರು.[39]

**ನಗರೇಶ್ವರ ದೇವಾಲಯ–ದೇವನಹಳ್ಳಿ:**

ಈ ದೇವಾಲಯವು ಹಲವು ದೇವರುಗಳ ಗುಡಿಗಳನ್ನು ಹೊಂದಿರುವ ಒಂದು ಸಂಕೀರ್ಣ ದೇವಾಲಯವಾಗಿದೆ.ದೇವಾಲಯದ ಮಹಾದ್ವಾರ ಮತ್ತು ರಾಜಗೋಪುರಗಳು ಪಶ್ಚಿಮಾಭಿಮುಖವಾಗಿದ್ದುಬಜಾರ್ ರಸ್ತೆಯಲ್ಲಿ ಒಳಭಾಗದಲ್ಲಿದೆ.ಈ ದೇವಾಲಯವು ಉತ್ತರಾಭಿಮುಖವಾಗಿದ್ದು ವಿಜಯನಗರ ಶೈಲಿಯನ್ನು ಒಳಗೊಂಡಿದೆ.ನಗರೇಶ್ವರ ದೇವಾಲಯದ ಆವರಣದಲ್ಲಿ ನಗರೇಶ್ವರಸ್ವಾಮಿ ದೇವಾಲಯಕ್ಕೆ ಹೊಂದಿಕೊಂಡಂತೆ ಶ್ರೀ ವೆಂಕಟರಮಣಸ್ವಾಮಿ ದೇವಾಲಯವು ಸಹ ಇದ್ದು ಈ ದೇವಾಲಯಗಳು ಖಾಸಗಿ ಧರ್ಮದರ್ಶಿ ಮಂಡಳಿಗೆ ಒಳಪಟ್ಟಿವೆ. ಈ ದೇವಾಲಯವು ಮೂರು ಗರ್ಭಗುಡಿಗಳನ್ನು ಹೊಂದಿದ್ದುತ್ರಿಕೂಟಚಲವಾಗಿದೆ.

**1ನೇ ಗರ್ಭಗುಡಿ:** ಇದು 5 ಅಡಿ ಉದ್ದ ಮತ್ತು 8 ಅಡಿ ಅಗಲವನ್ನು ಹೊಂದಿದ್ದು ಗರ್ಭಗುಡಿಯಲ್ಲಿ ಪೀಠದ ಮೇಲೆ ಕಪ್ಪುಶಿಲೆಯಿಂದ ಕೆತ್ತಿರುವ ಸುಮಾರು ಎರಡು ಅಡಿ ಎತ್ತರದ ಶಿವಲಿಂಗ/ನಗರೇಶ್ವರವನ್ನು ಪ್ರತಿಷ್ಠಾಪಿಸಲಾಗಿದೆ.(ಚಿ.ಸಂ.47)ನಕ್ಷತ್ರಾಕಾರದ ಭುವನೇಶ್ವರಿ ಇದ್ದು ಗರ್ಭಗುಡಿಯಲ್ಲಿ ಚದರಬಿಲ್ಲೆಗಳನ್ನು ಹಾಕಲಾಗಿದ್ದು ಗರ್ಭಗುಡಿಯ ದ್ವಾರವು ಶೈವದ್ವಾರಪಾಲಕರನ್ನು ಹೊಂದಿದೆ.ಈ ಗರ್ಭಗುಡಿಯ ಮುಂಭಾಗದಲ್ಲಿ ಸುಖನಾಸಿ ಇದ್ದು ಉದ್ದ 6 ಅಡಿ ಮತ್ತು ಅಗಲ 6 ಅಡಿಗಳಾಗಿರುತ್ತದೆ.ಗರ್ಭಗುಡಿಯ ಮುಂಭಾಗದಲ್ಲಿ ನಂದಿ ಶಿಲ್ಪವಿದ್ದು ಅದುಸುಮಾರು ಒಂದೂವರೆ ಅಡಿ ಎತ್ತರವಾಗಿದ್ದು ಕಪ್ಪು ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.ಈ ಶಿಲ್ಪವು ಉಬ್ಬಿರುವ ಭುಜ ಅಲಂಕಾರಿಕ ಕೆತ್ತನೆಗಳು ಘಂಟೆ ಮಾಲೆಗಳನ್ನು ಹೊಂದಿದೆ.

**2ನೇ ಗರ್ಭಗೃಹ:ಬಲಭಾಗ–ಗಣೇಶ ಗುಡಿ:** ಈ ಗರ್ಭಗೃಹದ ಮೂಲಗಣೇಶ ಶಿಲ್ಪವನ್ನು ದೇವಾಲಯದ ಹೊರಭಾಗದಲ್ಲಿ ಇಡಲಾಗಿತ್ತು. ಸುಮಾರು 10–12ವರ್ಷಗಳ ಹಿಂದೆ ಬೇರೆ ಕಡೆಯಿಂದ ಬಲಮುರಿ ಗಣಪತಿಯನ್ನು ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂದು ದೇವಾಲಯದ ಪ್ರಸ್ತುತ ಅಧ್ಯಕ್ಷರಾಗಿರುವ ಸಂಪಣ್ಣಪ್ಪನವರ ರಮೇಶ್ ಎಂಬುವರು ಮಾಹಿತಿ ನೀಡಿರುತ್ತಾರೆ. ಈ

ಗರ್ಭಗುಡಿಯ ದ್ವಾರಶಾಖೆಯಲ್ಲಿ ಲಲಾಟಬಿಂಬದಲ್ಲಿ ಗಜಗಳ ಮಧ್ಯೆ ಶಿವಲಿಂಗದ ಉಬ್ಬು ಕೆತ್ತನೆಯಿದೆ. (ಚಿ.ಸಂ.48)

**3ನೇ ಗರ್ಭಗೃಹ-ಎಡಭಾಗ-ಪಾರ್ವತಿ ಗುಡಿ:** ಈ ಗರ್ಭಗುಡಿಯಲ್ಲಿ ನಿಂತಿರುವ ಭಂಗಿಯಲ್ಲಿ ಕಪ್ಪುಶಿಲೆಯಲ್ಲಿ ಪಾರ್ವತಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದ್ದು ಪಾರ್ವತಿಯು ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಕಮಲದ ಮೊಗ್ಗು ಇನ್ನೆರಡು ಕೈಗಳು ವರದ ಮತ್ತು ಅಭಯ ಹಸ್ತಗಳಾಗಿವೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಯಿಂದ ಕೂಡಿರುವ ಕೀರ್ತಿಮುಖದ ಕೆತ್ತನೆಯಿದ್ದು ಪಾರ್ವತಿ ಗುಡಿಯ ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.

**ನವರಂಗ:** ನವರಂಗದಲ್ಲಿ ವಿಜಯನಗರ ಶೈಲಿಯ 4 ಕಂಬಗಳಿದ್ದು ಅವು ಸುಮಾರು 6 ಅಡಿ ಎತ್ತರವಾಗಿದ್ದು ಕಂಬಗಳಲ್ಲಿ 3 ಹಂತದಲ್ಲಿ ಉಬ್ಬು ಕೆತ್ತನೆಗಳು ಕಂಡುಬರುತ್ತವೆ. ಈ ಕಂಬಗಳಲ್ಲಿ ಎರಡು ಕಂಬಗಳು ಪುಷ್ಪ ಬೋಧಿಗೆಯನ್ನು ಒಂದು ಕಂಬವು ವೇಷ್ಟಿ ಬಂಧವನ್ನು ಮತ್ತೊಂದು ಕಂಬವು ಸರಳವಾಗಿದೆ.ಕಂಬಗಳಲ್ಲಿ ಗಣೇಶ, ವೀರಭದ್ರ, ನಂದಿ, ನವಿಲು, ಶಿವಪಾರ್ವತಿ, ಈಶಾನ, ಬಿಲ್ಲುಗಾರ್ತಿ, ನಾಟ್ಯಗಣೇಶ, ವಾದ್ಯಗಾರ, ನಾಗಕನ್ಯೆ, ವಾಮನ, ದುರ್ಗಿ, ಆಂಜನೇಯ, ಬ್ರಹ್ಮ, ಶಿವಲಿಂಗ ಮುಂತಾದ ಉಬ್ಬು ಕೆತ್ತನೆ ಶಿಲ್ಪಗಳನ್ನು ಕಂಡರಿಸಲಾಗಿದೆ. (ಚಿ.ಸಂ.49) 1ನೇ ಮುಖ್ಯ ಗರ್ಭಗುಡಿ ನಗರೇಶ್ವರನಿಗೆ ಎದುರಾಗಿ ನವರಂಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು ಅದರ ಮಧ್ಯದಲ್ಲಿ ವೃತ್ತಾಕಾರದ ಕೆತ್ತನೆ ಇದ್ದು ನವರಂಗದ ದ್ವಾರ ಶಾಖೆಯಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿದ್ದು ಅವರ ಶಿರದ ಮೇಲೆ ಕೀರ್ತಿಮುಖ ಅದರ ಮೇಲೆ ಚಿಕ್ಕದಾದ ಕಮಲದ ಕೆತ್ತನೆಗಳಿವೆ. ದ್ವಾರದ ಮುಂಭಾಗದಲ್ಲಿ ಎರಡು ಗಜಗಳ ಶಿಲ್ಪಗಳಿದ್ದು ಈ ದೇವಾಲಯವು ಕಾಲಕಾಲಕ್ಕೆ ವಿಸ್ತರಣೆ ಮತ್ತು ಜೀರ್ಣೋದ್ಧಾರಗೊಂಡಿದೆ.[40]

ಈ ದೇವಾಲಯದ ಮುಂಭಾಗದಲ್ಲಿ ಎತ್ತರದವಾದ ವೇದಿಕೆ ಮೇಲೆ ಬಲಪೀಠವಿದ್ದು ಅದರ ಮುಂಭಾಗದಲ್ಲಿ ನಂದಿಶಿಲ್ಪ ಅದರ ಹೊರಭಾಗದಲ್ಲಿ ಸುಮಾರು 12 ಅಡಿಗಳ ಸ್ತಂಭವಿದೆ ಮತ್ತು 1ನೇ ಮುಖ್ಯಗರ್ಭಗುಡಿಯ ಹೊರಭಾಗದಲ್ಲಿ ಚಿಕ್ಕ ಗುಡಿಯಲ್ಲಿ ನವಗ್ರಹಗಳಿವೆ.

**ಸುಂದರೇಶ್ವರ ದೇವಾಲಯ-ಬೊಮ್ಮವಾರ:**

ಬೊಮ್ಮವಾರ ಗ್ರಾಮವು ದೇವನಹಳ್ಳಿ-ದೊಡ್ಡಬಳ್ಳಾಪುರ ರಸ್ತೆ ಮಾರ್ಗದಲ್ಲಿದ್ದು ದೇವನಹಳ್ಳಿಯಿಂದ ಸುಮಾರು 4 ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿನ ಸುಂದರೇಶ್ವರ ದೇವಾಲಯವನ್ನು ಆವತಿ ಪಾಳೆಗಾರ ದಯಾಲು ಬಚ್ಚೇಗೌಡನ ಕಾಲದಲ್ಲಿ ನಿರ್ಮಾಣ ಮಾಡಲು ಪ್ರಾರಂಭಿಸಿ ಮುದ್ದಭೈರೇಗೌಡನ ಕಾಲದಲ್ಲಿ ದೇವಾಲಯದ ಕೆಲಸಗಳನ್ನು

ಪೂರ್ಣಗೊಳಸಲಾಯಿತು ಎಂದು ಸ್ಥಳೀಯರು ತಿಳಿಸಿರುತ್ತಾರೆ.ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ದೇವಾಲಯದ ವಿಸ್ತೀರ್ಣವು 61 ಅಡಿ ಉದ್ದ ಮತ್ತು 26 ಅಡಿಗಳ ಅಗಲವನ್ನು ಹೊಂದಿದೆ.(ಚಿ.ಸಂ.50)ಈ ದೇವಾಲಯವನ್ನು ಸ್ಥಳೀಯವಾಗಿ ದಯಾಲು ಬಚ್ಚಣ್ಣನ ಗುಡಿ ಎಂಬುದಾಗಿ ಕರೆಯಲಾಗುತ್ತಿದ್ದು ಏಕಕೂಟ ದೇವಾಲಯವಾಗಿದೆ.

**ಗರ್ಭಗೃಹ:** ಗರ್ಭಗೃಹವು ಚೌಕಾಕಾರವಾಗಿದ್ದು ಉದ್ದ 18 ಅಡಿಗಳು ಮತ್ತು ಅಗಲ 18 ಅಡಿಗಳನ್ನು ಹೊಂದಿದ್ದು ಗರ್ಭಗುಡಿಯು ನಯಗೊಳಿಸಿದ ಚಪ್ಪಡಿಗಳಿಂದ ನಿರ್ಮಿಸಲ್ಪಟ್ಟಿದೆ.ಗರ್ಭಗುಡಿಯ ಮುಖ್ಯ ಆಕರ್ಷಣೆಯೆಂದರೆ ಸುಂದರೇಶ್ವರ ಎಂದು ಹೆಸರಾಗಿರುವ ಶಿವಲಿಂಗ ಇದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಶಿವಾದಿಕ ಲಿಂಗವಾಗಿದೆ. ಶಿವಲಿಂಗವು ಎರಡುವರೆ ಅಡಿ ಎತ್ತರವಾಗಿದ್ದು, ಮೂರು ಹಂತಗಳಿಂದ ಕೂಡಿರುವ ಸುಮಾರು ಮೂರುವರೆ ಅಡಿ ಪೀಠದ ಮೇಲಿದೆ. ಲಿಂಗದ ಎತ್ತರ ಒಟ್ಟಾರೆಯಾಗಿ 6 ಅಡಿಗಳಾಗಿರುತ್ತದೆ.(ಚಿ.ಸಂ.51)ಗರ್ಭಗೃಹದ ಮೇಲ್ಛಾವಣಿಯಲ್ಲಿ ಮೂರು ಹಂತಗಳನ್ನೊಳಗೊಂಡಿರುವ ಭುವನೇಶ್ವರಿ ಇದ್ದು ಭುವನೇಶ್ವರಿಯ ಮಧ್ಯದಲ್ಲಿ ಚೌಕಕಾರದ ಅರಳಿದ ಕಮಲದ ಕೆತ್ತನೆ ಇದೆ. ಗರ್ಭಗುಡಿಯ ದ್ವಾರವು ಸರಳವಾಗಿದ್ದು ಸುಖನಾಸಿ ಕಂಡು ಬಂದಿರುವುದಿಲ್ಲ.

**ನವರಂಗ**

ಇದರ ಉದ್ದ 21 ಅಡಿಗಳು ಮತ್ತು ಅಗಲ 18 ಗಳಾಗಿದ್ದು ಕಂಬಗಳು ಮತ್ತು ಅರೆಗಂಬಗಳನ್ನು ಒಳಗೊಂಡಿದೆ. ನವರಂಗದ ಗೋಡೆಗಳು ಮತ್ತು ಮೇಲ್ಛಾವಣಿ ರಚನೆಯಲ್ಲಿ ದೊಡ್ಡಗಾತ್ರದ ಕಂಬಗಳ ಬಳಕೆ ಮಾಡಲಾಗಿದೆ.ನವರಂಗದಲ್ಲಿ ಎರಡು ಗರ್ಭಗೃಹವಿದ್ದು ಎಡಪಾರ್ಶ್ವದಲ್ಲಿ ಮೀನಾಕ್ಷಿ ಮತ್ತು ಬಲಪಾರ್ಶ್ವದಲ್ಲಿ ಗಣೇಶ ಶಿಲ್ಪಗಳಿವೆ.

**ಎಡಪಾರ್ಶ್ವದಮೀನಾಕ್ಷಿ ಗುಡಿ:**ಮೀನಾಕ್ಷಿಯು ಪದ್ಮಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ದೇವಿಯು ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಕಮಲ, ಉಳಿದ ಎರಡು ಕೈಗಳಲ್ಲಿ ಒಂದು ವರದ ಹಸ್ತ ಕಳಸ ಇದೆ.ದೇವಿಯ ಶಿಲ್ಪವು ಸೂಕ್ಷ್ಮ ಕೆತ್ತೆಯಿಂದ ಕೂಡಿದ್ದು ಪ್ರಭಾವಳಿಯನ್ನು ಹೊಂದಿದೆ.

**ಬಲಪಾರ್ಶ್ವದ ಗಣೇಶ ಗರ್ಭಗುಡಿ:** ಇದು ವರಸಿದ್ಧಿ ವಿನಾಯಕ ಎಂದು ಹೆಸರಾಗಿದ್ದು ಒಂದುವರೆ ಅಡಿ ಪೀಠದ ಮೇಲೆ ನಿರ್ಮಾಣವಾಗಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಮೂರು ಅಡಿ ಎತ್ತರವಾಗಿದ್ದು ಕುಳಿತಿರುವ ಭಂಗಿಯಲ್ಲಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.ಗಣೇಶನು ನಾಲ್ಕು ಕೈಗಳನ್ನು ಹೊಂದಿದ್ದು 2 ಕೈಗಳಲ್ಲಿ ಶಂಖ ಮತ್ತು ಉಳಿದೆರಡು

ಕೈಗಳಲ್ಲಿ ದಂತ ಮತ್ತು ಕಡಬುಗಳವೆ. ಗಣೇಶನ ಸೊಂಡಿಲು ಎಡಗೈಯಲ್ಲಿದ್ದು ಗಣೇಶನ ಸುತ್ತಲೂ ಪ್ರಭಾವಳ ಇದೆ.

**ನವರಂಗದಲ್ಲಿರುವ ಇತರೆ ಶಿಲ್ಪಗಳು**

**ನಂದಿ ಶಿಲ್ಪ**: ಮುಖ್ಯ ಗರ್ಭಗುಡಿಗೆ ಎದುರಾಗಿ ನವರಂಗದ ಮಧ್ಯಭಾಗದಲ್ಲಿ ಕಪ್ಪುಶಿಲೆಯಿಂದ ನಯವಾಗಿ ಕೆತ್ತನೆ ಮಾಡಿ ಪ್ರತಿಷ್ಠಾಪಿಸಿರುವ ನಂದಿ ಶಿಲ್ಪವಿದ್ದು ಇದನ್ನು ಅರ್ಧಅಡಿ ಕಲ್ಲುಪೀಠದ ಮೇಲೆ ನಿರ್ಮಿಸಲಾಗಿದೆ. ನಂದಿಯ ಅಲಂಕಾರಿಕ ಕೆತ್ತನೆಕೊರಳು ಪಟ್ಟಿ, ಉಬ್ಬಿದ ಭುಜ ಘಂಟೆಗಳನ್ನು ಹೊಂದಿದೆ.ನಂದಿಯ ಉದ್ದ ನಾಲ್ಕು ಅಡಿ ಮತ್ತು ಎತ್ತರ 3 ಅಡಿಗಳಾಗಿರುತ್ತದೆ.

**ವರಪ್ರದ ವಿನಾಯಕ**: ಇದು ವರಸಿದ್ಧಿ ವಿನಾಯಕನ ಗುಡಿಯ ಬಲಭಾಗದಲ್ಲಿದೆ ಈ ದೇವಾಲಯದ ಅರ್ಚಕರಾದ ರಾಜೇಂದ್ರ ಪ್ರಸಾದ್ ಎಂಬುವರು ನೀಡಿದ ಮಾಹಿತಿಯಂತೆ ಬೇರೆಡೆ ಸಿಕ್ಕಿದ ಗಣೇಶನನ್ನು ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದ್ದು ಇದು ಕುಳತಿರುವ ಭಂಗಿಯಲ್ಲಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ಕೂಡಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಡಮರುಗ, ಪುಸ್ತಕ, ಕಡುಬು, ದಂತವನ್ನು ಹಿಡಿದಿದ್ದಾನೆ ಈ ಶಿಲ್ಪವು ಸುಮಾರು ಒಂದೂವರೆ ಅಡಿ ಎತ್ತರವನ್ನು ಹೊಂದಿದ್ದು ಆಕರ್ಷಕವಾಗಿದೆ.

**ನವರಂಗದ ಭಿತ್ತಿಯ ಪಕ್ಕದಲ್ಲಿರುವ ಶಿಲ್ಪಗಳು**:ನವರಂಗದ ಎಡಭಾಗದಲ್ಲಿ ವಿಷ್ಣು ಶಿಲ್ಪವಿದ್ದು ನಿಂತಿರುವ ಭಂಗಿಯಲ್ಲಿದ್ದು, ಕಪ್ಪು ಶಿಲೆಯಿಂದ ನಿರ್ಮಿಸಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ವರದಹಸ್ತ, ಗಧೆಗಳವೆ. ಶಿಲ್ಪದ ಎತ್ತರ ಸುಮಾರು 2 ಅಡಿಗಳಾಗಿರುತ್ತವೆ. ಬಲಭಾಗದಲ್ಲಿ ಪೀಠದ ಮೇಲೆ ನಿಂತಿರುವ ಭಂಗಿಯ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿಲ್ಪಟ್ಟಿರುವ ಸೂರ್ಯ ಶಿಲ್ಪವಿದೆ. ಈ ಶಿಲ್ಪವು ಸುಮಾರು 2 ಅಡಿ ಎತ್ತರ ಹೊಂದಿದ್ದು ನಾಲ್ಕು ಕೈಗಳನ್ನು ಹೊಂದಿದೆ.ಈ ಶಿಲ್ಪಗಳನ್ನು ಇತ್ತೀಚೆಗೆ ಸೇರಿಸಿರುವ ಶಿಲ್ಪಗಳಾಗಿವೆ. ಮೀನಾಕ್ಷಿ ಗುಡಿಗೆ ಎಡಭಾಗದಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಜೋಡಿ ನಾಗರ ಮತ್ತು ಚಂಡಿಕೇಶ್ವರ ಶಿಲ್ಪಗಳವೆ. ನವರಂಗದ ಮೇಲ್ಛಾವಣಿಯ ಭುವನೇಶ್ವರಿಯಲ್ಲಿ ವೃತ್ತಾಕಾರದ ಪದ್ಮದ ಕೆತ್ತನೆಯಿದೆ.

**ನವರಂಗದ ದ್ವಾರ**: ನವರಂಗದ ದ್ವಾರವು ಅಲಂಕಾರಿಕ ಕೆತ್ತನೆಗಳು ಮತ್ತು ಬಳ್ಳಿ ಸುರುಳ ಕೆತ್ತನೆಯಿಂದ ಕೂಡಿದ್ದು ದ್ವಾರದ ಲಲಾಟಬಿಂಬದ ಮಧ್ಯಭಾಗದಲ್ಲಿ ಶಿವಲಿಂಗವಿದ್ದು ಅದಕ್ಕೆ ಗಜಗಳು ಅಭಿಷೇಕ ಮಾಡುತ್ತಿರುವಂತೆ ಕಂಡರಿಸಲಾಗಿದೆ.ನವರಂಗದ ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಾದ ಶೃಂಗಿ ಮತ್ತು ಬೃಂಗಿಗಳನ್ನು ಪೀಠದ ಮೇಲೆ ನಿಂತಿರುವ ಭಂಗಿಯಲ್ಲಿ ಕೆತ್ತಲಾಗಿದ್ದು ನವರಂಗದ ದ್ವಾರದ ಮುಂಭಾಗದ ಎರಡು ಪಾರ್ಶ್ವಗಳಲ್ಲಿ ಕಕ್ಷಾಸನವಿದೆ.

**ಭಿತ್ತಿಯಲ್ಲಿರುವ ಶಿಲ್ಪಗಳು**: ಭಿತ್ತಿಯು ಮೂರುವರೆ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದ್ದು ತ್ರಿಪಟ್ಟಕುಮುದ ಮಾದರಿಯಾಗಿದ್ದು ದೇವಾಲಯವು ಸುತ್ತಲೂ ಇದೇ ಮಾದರಿಯನ್ನು ಹೊಂದಿದೆ. ಭಿತ್ತಿಯಲ್ಲಿ ಸುಮಾರು 6 ಅಡಿ ಎತ್ತರದ ಅರೆಗಂಬಗಳಿದ್ದು ಕಂಬಗಳ ಮೇಲೆ ಪದ್ಮದಳ ಕೆತ್ತನೆ ಮತ್ತು ಬೋಧಿಗೆ ಇದೆ.ಭಿತ್ತಿಯಲ್ಲಿ ಕೋಷ್ಠಪಂಜರ ಮತ್ತು ಕುಂಭಪಂಜರಗಳು ಕಂಡುಬಂದಿವೆ. ಒಟ್ಟು ಐದು ಕೋಷ್ಟ ಪಂಜರಗಳಿದ್ದು, ಉತ್ತರ ದಿಕ್ಕಿನ ಒಂದು ಕೋಷ್ಟಪಂಜರದಲ್ಲಿ ನಾಗಲಿಂಗೇಶ್ವರ ಮತ್ತೊಂದು ಖಾಲಿ ಇದೆ.ದಕ್ಷಿಣ ಮತ್ತು ಪಶ್ಚಿಮದಲ್ಲಿ ತಲಾ ಒಂದು ಕೋಷ್ಠ ಪಂಜರಗಳು ಇದ್ದು ಖಾಲಿ ಇವೆ. ಕೋಷ್ಟಪಂಜರಗಳ ಎತ್ತರ ಸುಮಾರು ಆರು ಮುಕ್ಕಾಲು ಅಡಿಗಳಾಗಿರುತ್ತದೆ.

ದೇವಾಲಯದ ಭಿತ್ತಿಯಲ್ಲಿ ಒಂಭತ್ತು ಕುಂಭ ಪಂಜರಗಳಿದ್ದು ಇವುಗಳಲ್ಲಿ ಉತ್ತರ ಭಿತ್ತಿಯಲ್ಲಿ ಮೂರು, ದಕ್ಷಿಣ ಭಿತ್ತಿಯಲ್ಲಿ ನಾಲ್ಕು ಮತ್ತು ಪಶ್ಚಿಮ ಭಿತ್ತಿಯಲ್ಲಿ ಎರಡು ಕುಂಭಪಂಜರಗಳಿದ್ದು ಇವುಗಳ ಎತ್ತರ ಸುಮಾರು ಎರಡು ಅಡಿಗಳಾಗಿರುತ್ತದೆ. ಕುಂಭ ಪಂಜರಗಳು ಅಲಂಕಾರಿಕ ಕೆತ್ತನೆಗಳನ್ನು ಹೊಂದಿದ್ದು ಇವುಗಳ ಮೇಲೆ ಚೋಳ ಶೈಲಿಯ ಪ್ರಭಾವವನ್ನು ಕಾಣಬಹುದಾಗಿದೆ.ಉತ್ತರದ ಭಿತ್ತಿಯಲ್ಲಿ ಆಂಜನೇಯನ ಶಿಲ್ಪವಿದ್ದು ಎರಡು ಅಡಿ ಎತ್ತರವನ್ನು ಹೊಂದಿದ್ದು ಪಶ್ಚಿಮಕ್ಕೆ ಮುಖಮಾಡಿದ್ದು ಎರಡು ಕೈಗಳನ್ನು ಹೊಂದಿದೆ.ದೇವಾಲಯದ ಉತ್ತರ ದಿಕ್ಕಿನ ಭಿತ್ತಿಗೆ ಹೊಂದಿಕೊಂಡಂತೆ ಗಜವೃಕ್ತಪ್ರನಾಳ ಕಂಡುಬಂದಿದೆ. ದೇವಾಲಯದ ಕಪೋತ ಭಾಗವು ಅಲಂಕಾರಿಕ ಕೆತ್ತನೆಗಳಿಂದ ಕೂಡಿದ್ದು ನಾಸಿ, ಹಾರ ರಚನೆಗಳು ಅದರ ಮೇಲೆ ಅಲಂಕಾರಿಕ ಕೆತ್ತನೆಗಳಿವೆ. ದೇವಾಲಯದ ನಾಲ್ಕು ಮೂಲೆಗಳಲ್ಲಿ ದೇಹ ಮತ್ತು ಏಕಮುಖ ರಚನೆಯನ್ನು ಹೊಂದಿರುವ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿಲ್ಪಟ್ಟಿರುವ ಬಸವ ಶಿಲ್ಪಗಳಿವೆ.[41]

ನವರಂಗದ ದ್ವಾರ ಗೋಪುರವನ್ನು ಇತ್ತೀಚಿನ ವರ್ಷಗಳಲ್ಲಿ ನಿರ್ಮಿಸಲಾಗಿದ್ದು ಅದರ ಮೇಲೆ ನಾಡಪ್ರಭುಗಳ ಕುಟುಂಬದ ಶಿಲ್ಪಗಳು ಮತ್ತು ಇತರೆ ಶಿಲ್ಪಗಳನ್ನು ಗಾರೆಯಲ್ಲಿ ರಚಿಸಲಾಗಿದೆ. (ಚಿ.ಸಂ52)ದೇವಾಲಯದ ಮುಂಭಾಗದಲ್ಲಿ ಬಲಿಪೀಠ ಮತ್ತು ನಂದಿಸ್ಥಂಭವಿದೆ. ಎರಡೂವರೆ ಅಡಿ ಚೌಕಕಾರದ ಪೀಠದ ಮೇಲೆ 20 ಅಡಿ ಎತ್ತರದ ನಂದಿಸ್ತಂಭವು ಇದ್ದು ಇದರಲ್ಲಿ ನಂದಿತ್ರಿಶೂಲ, ಗಣಪತಿ, ಶಿವಲಿಂಗ ಮುಂತಾದ ಉಬ್ಬು ಕೆತ್ತನೆಗಳನ್ನು ಕಂಡರಿಸಲಾಗಿದೆ.ದೇವಾಲಯದ ಗರ್ಭಗುಡಿಗೆ ಎದುರಾಗಿ ಮುಂಭಾಗದ ಜಮೀನಿನಲ್ಲಿ ನಾಗರ ಹುತ್ತದ ಬಳಿ ಎರಡು ರುದ್ರಾಕ್ಷಿ ಗಿಡಗಳು ಕಂಡುಬರುತ್ತವೆ.

**ಅಪ್ರಕಟಿತ ಶಾಸನ**: ದೇವಾಲಯದ ಹೊರಭಾಗದ ಎಡದಿಕ್ಕಿನಲ್ಲಿ ಒಂದು ಅಪ್ರಕಟಿತ ಶಿಲಾಶಾಸನವು ಕಂಡುಬಂದಿದ್ದು ಇದರ ಎರಡುಕಡೆ ಲಿಪಿಯಿದ್ದು ಈ ಶಾಸನದ ಉದ್ದ 2.5 ಅಡಿ ಮತ್ತು ಅಗಲ

2.2 ಅಡಿಗಳಾಗಿದ್ದು ಬಿಳಿಗ್ರಾನೈಟ್ ಶಿಲೆಯಿಂದ ಕೆತ್ತಲ್ಪಟ್ಟಿದೆ. [42] ಈ ದೇವಾಲಯವು ಈ ಮುಂಚೆ ಶಿವಲಿಂಗವನ್ನು ಹೊಂದಿತ್ತು ಎಂಬುದರ ಬಗ್ಗೆ ಯಾವುದೇ ಅಧಿಕೃತ ಮಾಹಿತಿಗಳು ಕಂಡುಬಂದಿರುವುದಿಲ್ಲ. ದೇವನಹಳ್ಳಿಯ ಶಿಲ್ಪಕಲಾ ಶಾಲೆಯ ಕೆ.ಬಿ.ಶಂಕರನಾರಾಯಣ ಎಂಬುವರು ನೀಡಿದ ಮಾಹಿತಿಯಂತೆ 1967ರಲ್ಲಿ ದೇವನಹಳ್ಳಿ ವಾಸಿಯಾದ ಹಾರೋಬಂಡೆ ಕುಟುಂಬದವರ ಜಮೀನಿನಲ್ಲಿ ಸಿಕ್ಕಿದ ಶಿವಲಿಂಗವನ್ನು ಸರ್.ಎಂ.ವಿಶ್ವೇಶ್ವರಯ್ಯರವರ ಮಾರ್ಗದರ್ಶನದ ಮೇರೆಗೆ ಇಲ್ಲಿ ಪ್ರತಿಷ್ಠಾಪಿಸಲಾಯಿತು.ಸ್ಥಳೀಯರ ಪ್ರಕಾರ ಜಮೀನಿನಲ್ಲಿ ದೊರೆತಶಿವಲಿಂಗವು ಈ ದೇವಾಲಯಕ್ಕೆ ಹೊಂದಿಕೆಯಾಗಿರುತ್ತದೆ.ಈ ದೇವಾಲಯದ ನವರಂಗದಲ್ಲಿರುವ ನಂದಿ, ಗಣೇಶ, ಪಾರ್ವತಿ ಶಿಲ್ಪಗಳನ್ನು ದೇವನಹಳ್ಳಿ ಶಿಲ್ಪಕಲಾಶಾಲಾ ಶಿಲ್ಪಿಯಾದ ಚನ್ನಕೇಶವ ಚಾರ್ಯ ಎಂಬುವರು ನಿರ್ಮಿಸಿದರು.

**ಕುಮಾರಸ್ವಾಮಿ/ಷಣ್ಮುಖ ಸ್ವಾಮಿ ದೇವಾಲಯ–ವಿಜಯಪುರ:**

ಈ ದೇವಾಲಯವು ವಿಜಯಪುರ ಪಟ್ಟಣದ ಗಾಂಧಿಚೌಕದಲ್ಲಿದ್ದು ಪೂರ್ವಾಭಿಮುಖವಾಗಿದ್ದು ಮುಜರಾಯಿ ಇಲಾಖೆಯ ಸುಪರ್ದಿಯಲ್ಲಿದೆ.ಈ ದೇವಾಲಯವು ವಿಜಯನಗರೋತ್ತರ ಕಾಲಕ್ಕೆ ಸೇರಿದ್ದು ಮೈಸೂರು ಶೈಲಿಯಲ್ಲಿ ನಿರ್ಮಿಸಲ್ಪಟ್ಟ ದೇವಾಲಯವಾಗಿದೆ.[43]ಈ ದೇವಾಲಯವು ಗರ್ಭಗೃಹ ನವರಂಗ ಮತ್ತು ಮುಖಮಂಟಪಗಳನ್ನು ಒಳಗೊಂಡ ಏಕಕೂಟ ದೇವಾಲಯವಾಗಿದೆ. (ಚಿ.ಸಂ.53)

**ಗರ್ಭಗೃಹ**:ಇದರ ಉದ್ದ 6 ಅಡಿ ಮತ್ತು ಅಗಲ 6 ಅಡಿಗಳಾಗಿದ್ದು ಚೌಕಾಕಾರವಾಗಿದೆ.ಗರ್ಭಗುಡಿಯ ಮಧ್ಯದಲ್ಲಿ ಸುಮಾರು 1 ಅಡಿ ಎತ್ತರದ ನವಿಲು ಪೀಠದ ಮೇಲೆ ಕುಳಿತಿರುವ ಕಪ್ಪುಗ್ರಾನೈಟ್ ಶಿಲೆಯಲ್ಲಿ ಕೆತ್ತಲ್ಪಟ್ಟಿರುವ ಸುಮಾರು 3 ಅಡಿ ಎತ್ತರವಿರುವ 6 ಮುಖಗಳನ್ನು ಹೊಂದಿರುವ ಕುಮಾರಸ್ವಾಮಿ/ಷಣ್ಮುಖ ಶಿಲ್ಪವಿದೆ.ಷಣ್ಮುಖನು ತನ್ನ ಕೈಗಳಲ್ಲಿ ಅಭಯ ವರದ ತ್ರಿಶೂಲ ಕತ್ತಿ ಮುಂತಾದವುಗಳನ್ನು ಎರಡು ಪಾರ್ಶ್ವಗಳಲ್ಲಿ ಹೊಂದಿದ್ದಾನೆ. ಈತನ ಮೈಮೇಲೆ ಆಭರಣಗಳಿದ್ದು ಕಮಾನು ಆಕೃತಿಯ ಪ್ರಭಾವಳಿಯು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದೆ.ಈತನ ಎಡ ಮತ್ತು ಬಲಭಾಗದಲ್ಲಿ ನಿಂತಿರುವ ಭಂಗಿಯಲ್ಲಿರುವ ವಲ್ಲಿ ಮತ್ತು ದೇವಸೇನರ ಶಿಲ್ಪವಿದೆ.ಗರ್ಭಗುಡಿಯ ಮೇಲ್ಚಾವಣಿಯಲ್ಲಿ ಭುವನೇಶ್ವರಿ ಇದೆ.ಗರ್ಭಗೃಹದ ದ್ವಾರದವಿಸ್ತೀರ್ಣ ಉದ್ದ 3 ಅಡಿ ಮತ್ತು ಅಗಲ 6 ಅಡಿಗಳಾಗಿರುತ್ತದ.ಗರ್ಭಗೃಹದ ದ್ವಾರಶಾಖೆಯ ಲಲಾಟಬಿಂಬದಲ್ಲಿ ಶಿವಲಿಂಗ ಸೂರ್ಯ ಚಂದ್ರ ಮತ್ತು ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಮುಖ್ಯಗರ್ಭಗೃಹದ ಎಡಭಾಗದಲ್ಲಿ 1 ಅಡಿ ಪದ್ಮ ಪೀಠದ ಮೇಲೆ ಸಮಭಂಗಿಯಲ್ಲಿ

ನಿಂತಿರುವ ವೀರಭದ್ರ ಮತ್ತು ಬಸವಣ್ಣ ಶಿಲ್ಪಗಳಿವೆ. ವೀರಭದ್ರನು 4 ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಬಿಲ್ಲು ಬಾಣ ಕಮಲ ಗದೆಗಳನ್ನು ಹಿಡಿದಿದ್ದಾನೆ. ವೀರಭದ್ರನ ಬಲಭಾಗದಲ್ಲಿ ಸ್ತ್ರೀ ಶಿಲ್ಪವಿದೆ. ವೀರಭದ್ರನ ಪ್ರಭಾವಳಿಯಲ್ಲಿ ಕೀರ್ತಿಮುಖವಿದೆ. ವೀರಭದ್ರನ ಎಡಭಾಗದಲ್ಲಿ ನಂದಿ ಶಿಲ್ಪವಿದೆ.ಭುವನೇಶ್ವರಿ ಕಂಡುಬರುವುದಿಲ್ಲ. ಮುಖ್ಯಗರ್ಭಗೃಹದ ಬಲಭಾಗದಲ್ಲಿ ಗಣೇಶ ಶಿಲ್ಪವಿದ್ದು ಆತನು ತನ್ನ 4 ಕೈಗಳಲ್ಲಿ ಲೇಖನ ಫಲ ಕಮಲವನ್ನು ಹೊಂದಿದ್ದಾನೆ. ಇದು ಎಡಮುರಿ ಗಣಪತಿ ಎಂದು ಹೆಸರಾಗಿದೆ.

**ನವರಂಗ**: ನವರಂಗವು ಚೌಕಾಕಾರವಾಗಿದ್ದು ಇದರ ವಿಸ್ತೀರ್ಣವು ಉದ್ದ 20 ಅಡಿ ಮತ್ತು ಅಗಲ 20 ಅಡಿಗಳಾಗಿದ್ದು ನವರಂಗದಲ್ಲಿ ವಿಜಯನಗರ ಶೈಲಿಯ 4 ಕಂಬಗಳಿದ್ದು ಅವು ಚೌಕ ಅಷ್ಟ ಮಾದರಿಯನ್ನು ಮೇಲ್ಭಾಗದಲ್ಲಿ ಮುಷ್ಠಿಬಂಧ ಬೋದಿಗೆಯಿದೆ, ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿರುತ್ತದೆ.ಕಂಬಗಳಲ್ಲಿ ಕಮಲ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ನವರಂಗದ ಬಲಭಾಗದಲ್ಲಿ ಛತ್ತಿಯ ವೇದಿಕೆಯ ಮೇಲೆ ನಿಂತ ಭಂಗಿಯಲ್ಲಿರುವ ಯುದ್ಧಕ್ಕೆ ಸಿದ್ಧರಾಗಿರುವ ವೀರಪುರುಷರ ಆರು ಚಿಕ್ಕ ಶಿಲ್ಪಗಳಿವೆ. ನವರಂಗದ ಮಧ್ಯಭಾಗದಲ್ಲಿ 3 ಹಂತದ ಭುವನೇಶ್ವರಿ ಇದೆ.ನವರಂಗ ದ್ವಾರವು ಉದ್ದ 6 ಅಡಿ ಮತ್ತು ಅಗಲ 3 ಅಡಿ ವಿಸ್ತೀರ್ಣವನ್ನು ಹೊಂದಿದೆ.ದ್ವಾರದ ಮಧ್ಯಭಾಗದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಬಳ್ಳಿ ಸುರುಳಿಗಳು ಕಮಲ ಹೂವು ಕೆತ್ತನೆಗಳು, ದ್ವಾರಶಾಖೆಯ ಎಡ ಮತ್ತು ಬಲಭಾಗಗಳಲ್ಲಿ ಶೈವ ದ್ವಾರಪಾಲಕರಾದ ನಂದಿ ಮತ್ತು ಬೃಂಗಿರವರು ಪದ್ಮಪೀಠದ ಮೇಲೆ ನಿಂತಿದ್ದಾರೆ. ಈ ಶಿಲ್ಪಗಳು ತ್ರಿಭಂಗಿಯಲ್ಲಿದ್ದು 4 ಕೈಗಳನ್ನು ಹೊಂದಿದ್ದು ತಮ್ಮ 3 ಕೈಗಳಲ್ಲಿ ತ್ರಿಶೂಲ, ಡಮರು, ಗದೆ ಮತ್ತು ಒಂದು ಕೈಯನ್ನು ಕಟಿಬಂಧದಲ್ಲಿ ಇರಿಸಿಕೊಂಡಿದ್ದಾರೆ.ಈ ದ್ವಾರಪಾಲಕರ ಶಿರದ ಮೇಲ್ಭಾಗದಲ್ಲಿ ಕೀರ್ತಿಮುಖ ರಚನೆಯಿದೆ.

**ನಂದಿಶಿಲ್ಪ**: ನವರಂಗದಲ್ಲಿ ಮುಖ್ಯ ಗರ್ಭಗೃಹಕ್ಕೆ ಎದುರಾಗಿ ಚಿಕ್ಕದಾದ ಆನೆ ಶಿಲ್ಪವಿದೆ. ಇದರ ವಿಸ್ತೀರ್ಣವು ಉದ್ದ 1.2 ಅಡಿ ಮತ್ತು ಎತ್ತರ 9 ಇಂಚುಗಳಾಗಿರುತ್ತದೆ.ನಂದಿ ಬದಲಾಗಿ ಆನೆ ಶಿಲ್ಪವನ್ನು ಮುಖ್ಯ ಗರ್ಭಗುಡಿಯ ಮುಂಭಾಗದಲ್ಲಿಟ್ಟಿರುವುದು ಒಂದು ರೀತಿಯ ವಿಶೇಷವೆನಿಸಿದೆ.

**ಮುಖಮಂಟಪ**: ಮುಖಮಂಟಪವು ಆಯಾತಾಕಾರದಲ್ಲಿದೆ ವಿಜಯನಗರ ಶೈಲಿಯ 6 ಕಂಬಗಳಿದ್ದು ಅವುಗಳ ಎತ್ತರ ಸುಮಾರು 8 ಅಡಿ ಇದ್ದು ಚೌಕ ಅಷ್ಟ ಮಾದರಿ ಹೊಂದಿದ್ದು ಮೇಲ್ಭಾಗದಲ್ಲಿ ಮುಷ್ಟಿಬಂಧ ಬೋದಿಗೆ ಇದೆ. ಕಂಬಗಳಲ್ಲಿ ಲಿಂಗ ನಂದಿ ಕುಬ್ಜ ಶಿಲ್ಪಗಳು ಗಣೇಶ ಕೀರ್ತಿಮುಖ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.ಮುಖಮಂಟಪದ ಎಡಭಾಗದ ವಾಜನಭಾಗದಲ್ಲಿ ಶಾಸನವಿದೆ.[44]ಮುಖಮಂಟಪದ ಮಧ್ಯಭಾಗದಲ್ಲಿ 3 ಹಂತಗಳ ಭುವನೇಶ್ವರಿ ಇದ್ದು ಅರಳಿದ ಪದ್ಮದ ರಚನೆ ಕಂಡುಬರುತ್ತದೆ.

ಮುಖಮಂಟಪದ ಮೇಲ್ಭಾವಣಿಯ ಕಪೋತದಲ್ಲಿ ಕುಬ್ಜ ಶಿಲ್ಪಗಳಿದ್ದು ಭಗ್ನಗೊಂಡಿವೆ. ಅದರ ಮೇಲ್ಭಾಗದಲ್ಲಿ ಹಾರದ ರಚನೆ ಪಾರಿವಾಳ ಲತಾ ಬಳ್ಳಿ ಸುರುಳಿಗಳ ಕೆತ್ತನೆಯಿದೆ. ಇದರ ಮೇಲ್ಭಾಗದಲ್ಲಿ ಮಣಿಕಟ್ಟು ಪದ್ಮದಳಗಳ ಅಲಂಕರಣೆಗಳಿವೆ. ಈ ಅಲಂಕರಣೆಗಳ ಮೇಲ್ಭಾಗದಲ್ಲಿ ವೇದಿಬಂಧ ರಚನೆಯಿದ್ದು ಇದರಲ್ಲಿ 5 ದೇವಕೋಷ್ಟಗಳಿವೆ. ಮಧ್ಯಭಾಗದ ಕೋಷ್ಟದಲ್ಲಿ ನವಿಲಿನ ಮೇಲೆ ಕುಳಿತಿರುವ ಕಾರ್ತಿಕೇಯ ಬಲಭಾಗದಲ್ಲಿ ಭೈರವ ಮತ್ತು ಗಣೇಶ ಶಿಲ್ಪಗಳು ಎಡಭಾಗದಲ್ಲಿ 2 ಇತರೆ ಶಿಲ್ಪಗಳು ಇವೆ. ಈ ದೇವಕೋಷ್ಟಗಳ ಮಧ್ಯೆ ಮಧ್ಯೆ ಸಣ್ಣ ಸಣ್ಣ ಶಿಖರಗಳ ಅಲಂಕಾರಿಕ ರಚನೆಯಿದೆ.

**ಓಂಕಾರೇಶ್ವರ ದೇವಾಲಯ–ವಿಜಯಪುರ**

ಇದೊಂದು ಶೈವದೇವಾಲಯ.ಈ ದೇವಾಲಯವು ವಿಜಯನಗರೋತ್ತರ ಕಾಲಕ್ಕೆ ಸೇರಿದ್ದು ಉತ್ತರಾಭಿಮುಖವಾಗಿದ್ದು ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯವು ವಿಜಯಪುರ ಪಟ್ಟಣದ ಗುರಪ್ಪನ ಮಠದ ಆವರಣದಲ್ಲಿದೆ.ಗರ್ಭಗೃಹದಲ್ಲಿ ಶಿವಲಿಂಗವಿದ್ದು ಗರ್ಭಗೃಹ ಸಣ್ಣ ಕೋಣೆಗಳಿಂದ ಸುತ್ತುವರೆದಿದೆ.ದೇವಾಲಯದಲ್ಲಿ 108 ವಿವಿಧ ಲಿಂಗಗಳು ಮತ್ತು ವಿಗ್ರಹಗಳಿವೆ, ಈ ದೇವಾಲಯವನ್ನು ಸುಮಾರು 250 ವರ್ಷಗಳ ಹಿಂದೆ ನಿರ್ಮಿಸಲಾಯಿತ್ತೆಂದು ಸ್ಥಳೀಯರು ತಿಳಿಸಿರುತ್ತಾರೆ.ಇದು ಗರ್ಭಗೃಹ, ನವರಂಗ, 108 ಶಿವಲಿಂಗಗಳು ಮತ್ತು ಇತರೆ ಶಿಲ್ಪಗಳನ್ನು ಒಳಗೊಂಡಿದೆ.

**ಗರ್ಭಗೃಹ:** ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು. ಗರ್ಭಗೃಹದಲ್ಲಿ ಒಂದೂವರೆ ಅಡಿ ಪೀಠದ ಮೇಲೆ ಕಪ್ಪುಶಿಲೆಯ 2 ಅಡಿ ಎತ್ತರದ ಶಿವಲಿಂಗವಿದೆ.(ಚಿ.ಸಂ.54)ಗರ್ಭಗುಡಿ ಸರಳವಾಗಿದ್ದು ಚದರ ಬಿಲ್ಲೆಗಳನ್ನು ಹಾಕಲಾಗಿದೆ.

**ಸುಖನಾಸಿ:** ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು.ಕಪ್ಪು ಗ್ರಾನೈಟ್ ಶಿಲೆಯಿಂದ ಕೂಡಿರುವ ನಂದಿಶಿಲ್ಪವಿದ್ದು ಇದು ಶಿವಲಿಂಗಕ್ಕೆ ಎದುರಾಗಿ ಮುಖಮಾಡಿದೆ. ಸುಖನಾಸಿಯ ಎಡಭಾಗದಲ್ಲಿ ಕಪ್ಪು ಗ್ರಾನೈಟ್ ಶಿಲೆಯ ಗಣೇಶ ಮತ್ತು ಬಲಭಾಗದಲ್ಲಿ ಪಾರ್ವತಿ ಶಿಲ್ಪಗಳಿವೆ. ಸುಖನಾಸಿಯ ದ್ವಾರಶಾಖೆಯಲ್ಲಿ ಲಲಾಟಬಿಂಬದಲ್ಲಿ ಲಕ್ಷ್ಮಿ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಗಣಪತಿ ದ್ವಾರಶಾಖೆಯಲ್ಲಿ ಮಧ್ಯಭಾಗದಲ್ಲಿ ಶಿವಲಿಂಗ ಮತ್ತು ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಪಾರ್ವತಿ ದ್ವಾರದ ದ್ವಾರಶಾಖೆಯಲ್ಲಿ ಶಿವಲಿಂಗ ಮತ್ತು ಕೆಳಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ.

**ನವರಂಗ**:ಇದರ ಉದ್ದ 25 ಅಡಿ ಮತ್ತು ಅಗಲ 20 ಅಡಿಗಳು.ನವರಂಗದಲ್ಲಿ 4 ಪ್ರಧಾನ ಕಂಬಗಳದ್ದು ಅವುಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಕಂಬಗಳು ಚೌಕ, ಅಷ್ಟ ಮಾದರಿಯಲ್ಲಿದ್ದು ಸರಳವಾಗಿವೆ. 2 ಕಂಬಗಳಿಗೆ ಚದರಬಿಲ್ಲೆಗಳನ್ನು ಹಾಕಿ ಮುಚ್ಚಲಾಗಿದೆ.(ಚಿ.ಸಂ.55)ನವರಂಗಕ್ಕೆ ಹೊಂದಿಕೊಂಡಂತೆ ಪೂರ್ವಕ್ಕೆ ಶಿವಲಿಂಗವಿದ್ದು ಅದಕ್ಕೊಂದು ಗುಡಿಯನ್ನು ನಿರ್ಮಿಸಲಾಗಿದೆ.ಅದಕ್ಕೆ ಎದುರಾಗಿ ನಂದಿ ಶಿಲ್ಪವಿದೆ.ನವರಂಗದಲ್ಲಿ ಬಲಪಾರ್ಶ್ವದಲ್ಲಿ 2 ಕೋಷ್ಟಗಳದ್ದು ಬಲಕೋಷ್ಟದಲ್ಲಿ ಮುದ್ದುಗಣಪತಿ ಮತ್ತು ಎಡಕೋಷ್ಟದಲ್ಲಿ ಚಂಡಿಕೇಶ್ವರ ಶಿಲ್ಪಗಳಿವೆ.

ಈ ದೇವಾಲಯದ ಪ್ರಮುಖ ಆಕರ್ಷಣೆಯೆಂದರೆ 108 ಶಿವಲಿಂಗಗಳು ಮತ್ತು ವಿಗ್ರಹಗಳು. ದೇವಾಲಯದ ಒಳಭಾಗದಲ್ಲಿ ದತ್ತಾತ್ರೇಶ್ವರ, ಸರಸ್ವತಿ, ವೀರಭದ್ರೇಶ್ವರ, ಕಾಲಭೈರವೇಶ್ವರ, ದಕ್ಷಿಣಮೂರ್ತಿ, ಸೂರ್ಯ, ನವಗ್ರಹಗಳು, ಕುಂಬೇಶ್ವರ, ದಕ್ಷಿಣಮೂರ್ತಿ, ಗೋಕರ್ಣ ಲಿಂಗ, ಮಂಜುನಾಥೇಶ್ವರ, ಮಲ್ಲಿಕಾಜುನ, ವಿಶ್ವನಾಥೇಶ್ವರ, ಜಗದೀಶ್ವರ, ಮಹಾಬಲೇಶ್ವರ, ಚಿದಂಬರೇಶ್ವರ, ಶೈಲೇಶ್ವರ, ಚಂದ್ರಮೌಳೇಶ್ವರ, ಶಿವಕೋಟೇಶ್ವರ, ರಾಮೇಶ್ವರ ಮುಂತಾದ ಆಕರ್ಷಕ ಶಿವ ಲಿಂಗಗಳು ಮತ್ತು ಮೂರ್ತಿಗಳಿವೆ.[45]

**ಕಲ್ಯಾಣಿ:** ಇದುಗುರಪ್ಪ ಮಠದ ಬಳಿ ಮತ್ತು ಓಂಕಾರೇಶ್ವರ ದೇವಾಲಯದ ಮುಂಭಾಗದಲ್ಲಿದ್ದುಚೌಕಕಾರವಾಗಿದ್ದು ಇಳಿಜಾರು ಮಾದರಿಯಲ್ಲಿ ಬಿಳಿಕಣಶಿಲೆಯಿಂದ ನಿರ್ಮಿಸಲಾಗಿದೆ. ಇದರ ವಿಸ್ತೀರ್ಣವು ಉದ್ದ ಸುಮಾರು 200 ಅಡಿ ಮತ್ತು ಅಗಲ 200 ಅಡಿಗಳು.ಈ ಕಲ್ಯಾಣಿ ಮಧ್ಯದಲ್ಲಿ ನಾಲ್ಕು ಕಂಬಗಳನ್ನು ಹೊಂದಿರುವ ಮಂಟಪದಲ್ಲಿ ಕಾವೇರಿ ಶಿಲ್ಪವಿದೆ ಅದರ ಮೇಲ್ಭಾಗದಲ್ಲಿ ಶಿವಪಾರ್ವತಿ ಗಣಪತಿ ಶಿಲ್ಪ ಮಧ್ಯದಲ್ಲಿ ಸ್ತೂಪಿ ಮತ್ತು ಕಳಸವಿದೆ.ಈ ಕಲ್ಯಾಣಿಯಲ್ಲಿ ಇಳಿಜಾರಾದ 20 ಮೆಟ್ಟಿಲು ಹಂತಗಳಿವೆ. (ಚಿ.ಸಂ.56)

**ಜಪದ ಮಲ್ಲೇಶ್ವರ ದೇವಾಲಯ-ನೀಲೇರಿ**:

ನೀಲೇರಿ ಗ್ರಾಮವು ದೇವನಹಳ್ಳಿ-ನಂದಿಬೆಟ್ಟ ರಸ್ತೆಯಲ್ಲಿದ್ದು ದೇವನಹಳ್ಳಿಯಿಂದ ಸುಮಾರು 3 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಹೊರಭಾಗದಲ್ಲಿ ವಿಜಯನಗರೋತ್ತರ ಕಾಲಕ್ಕೆ ಸೇರಿದ ಜಪದ ಮಲ್ಲೇಶ್ವರ ದೇವಾಲಯವಿದ್ದು ಪೂರ್ವಾಭಿಮುಖವಾಗಿದ್ದು ಏಕಕೂಟ ದೇವಾಲಯವಾಗಿದೆ.(ಚಿ.ಸಂ.57)ಈ ದೇವಾಲಯವು ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ.

**ಗರ್ಭಗುಡಿ**: ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ.ಗರ್ಭಗುಡಿಯು ಚೌಕಾಕಾರವಾಗಿದ್ದು ಗರ್ಭಗುಡಿಯಲ್ಲಿ ಸುಮಾರು 2 ಅಡಿ ಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿರುವ ಶಿವಲಿಂಗವಿದೆ.ಗರ್ಭಗುಡಿಗೆ ಚದರಬಿಲ್ಲೆ ಹಾಕಲಾಗಿದೆ.(ಚಿ.ಸಂ.58)

**ಸುಖನಾಸಿ**: ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು. ಸುಖನಾಸಿಯ ಮಧ್ಯಭಾಗದಲ್ಲಿ ಶಿವಲಿಂಗಕ್ಕೆ ಎದುರಾಗಿ ಪೀಠದ ಮೇಲೆ ನಂದಿ ಶಿಲ್ಪವಿದೆ.ಇದು ಕಪ್ಪುಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ್ದು ಆಭರಣಗಳನ್ನು ಹೊಂದಿದೆ.ಸುಖನಾಸಿಯಲ್ಲಿ ಪೀಠದ ಮೇಲೆ ಗಣೇಶ ಶಿಲ್ಪ ಮತ್ತು ಪಾರ್ವತಿ ಶಿಲ್ಪಗಳಿವೆ. ಸುಖನಾಸಿ ದ್ವಾರವು ಸರಳ ಪಟ್ಟಿಕೆಗಳಿಂದ ಕೂಡಿದ್ದು ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ದ್ವಾರದ ಇಕ್ಕೆಲಗಳ ಕೆಳಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ.

ನವರಂಗದಲ್ಲಿ 6 ಕಂಬಗಳಿದ್ದು ಎತ್ತರ ಸುಮಾರು 8 ಅಡಿಗಳಾಗಿರುತ್ತದೆ.2 ಕಂಬಗಳಿಗೆ ಚದರಬಿಲ್ಲೆ ಹಾಕಲಾಗಿದೆ.4 ಕಂಬಗಳು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು 4 ಕಂಬಗಳಲ್ಲಿ ಹಂಸ, ಶಿವಲಿಂಗ, ಬಿಲ್ಲುದಾರಿ, ಗಣೇಶ, ಪದ್ಮ, ಆಂಜನೇಯ, ಮೀನು, ನಂದಿ, ಕೀರ್ತಿಮುಖ ಮಾದರಿ ಶಿಲ್ಪ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.[46]

**ಸಿದ್ದೇಶ್ವರ ದೇವಾಲಯ–ದೇವನಹಳ್ಳಿ**:

ಇದು ಶೈವ ದೇವಾಲಯವಾಗಿದ್ದು ಕೋಟೆ ಬೀದಿಯಲ್ಲಿದ್ದು ಪೂರ್ವಾಭಿಮುಖವಾಗಿದೆ.ಈ ದೇವಾಲಯವು ಮೈಸೂರು ಒಡೆಯರ್ ಕಾಲಕ್ಕೆ ಸೇರಿದ್ದು ಮುಜರಾಯಿ ಇಲಾಖೆಗೆ ಒಳಪಟ್ಟಿದೆ. (ಚಿ.ಸಂ.59) ಈ ದೇವಾಲಯವುಏಕಕೂಟ ದೇವಾಲಯವಾಗಿದ್ದು ವೀರಶೈವ ಲಿಂಗಾಯಿತ ಸಮುದಾಯಕ್ಕೆ ಸೇರಿದೆ.[47]

**ಗರ್ಭಗುಡಿ**: ಇದು ಉದ್ದ 6 ಅಡಿ ಮತ್ತು ಅಗಲ 6 ಅಡಿಗಳನ್ನು ಹೊಂದಿದ್ದು ಗರ್ಭಗುಡಿಯಲ್ಲಿ ಪಂಚ ಲೋಹದಿಂದ ಮಾಡಿರುವ ಸಿದ್ದೇಶ್ವರಸ್ವಾಮಿ ಮೂರ್ತಿಇದೆ.ಈ ಮೂರ್ತಿಯು ಕುಳಿತಿರುವ ಭಂಗಿಯಲ್ಲಿದ್ದು, ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಮೂರ್ತಿಯ ಎತ್ತರ ಸುಮಾರು ಒಂದೂವರೆ ಅಡಿಗಳಾಗಿರುತ್ತದೆ.(ಚಿ.ಸಂ.60)ಸಿದ್ದೇಶ್ವರನು ಎರಡು ಕೈಗಳನ್ನು ಹೊಂದಿದ್ದು ಬಲಗೈ ಹಸ್ತದಲ್ಲಿ ರುದ್ರಾಕ್ಷಿ ಮಣಿಯಿದ್ದು ಆಶೀರ್ವಾದ ಮಾಡುತ್ತಿರುವ ಮತ್ತು ಎಡಗೈಯಲ್ಲಿ ವರದ ಹಸ್ತ ಮತ್ತು ಹಸ್ತದಲ್ಲಿ ಚಿಕ್ಕ ಶಿವಲಿಂಗವಿದೆ.ಗರ್ಭಗುಡಿಯಲ್ಲಿ ಭುವನೇಶ್ವರಿ ಕಂಡು ಬಂದಿರುವುದಿಲ್ಲ.

**ನವರಂಗ**: ನವರಂಗವು ನಾಲ್ಕು ಕಂಬಗಳನ್ನು ಹೊಂದಿದ್ದು ಎರಡು ಕಂಬಗಳಿಗೆ ಚದರಬಿಲ್ಲೆಗಳನ್ನು ಹಾಕಿ ಮುಚ್ಚಲಾಗಿದೆ.ಉಳಿದ ಎರಡು ಕಂಬಗಳು ಸುಮಾರು 5 ಅಡಿ ಎತ್ತರವನ್ನು ಹೊಂದಿದ್ದು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು ಸಾಧಾರಣ ಬೋಧಿಗೆಯನ್ನು ಹೊಂದಿದೆ.ಈ ಕಂಬಗಳಲ್ಲಿ ಶಿವಲಿಂಗ, ಹಂಸ, ನರ್ತಕಿ, ಕಮಲ ಮುಂತಾದ ಉಬ್ಬುಶಿಲ್ಪಗಳಿವೆ. (ಚಿ.ಸಂ.61) ನವರಂಗದ ನಾಲ್ಕು ಕಂಬಗಳ ಮಧ್ಯಭಾಗದಲ್ಲಿ, ಸಿದ್ದೇಶ್ವರ ಗರ್ಭಗುಡಿಗೆ ಎದುರಾಗಿ, ಗ್ರಾನೈಟ್ ಪೀಠದ ಮೇಲೆ ನಂದಿ ಶಿಲ್ಪವಿದೆ.ಇದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಾಣವಾಗಿದ್ದು ಅಲಂಕರಣೆಗಳನ್ನು ಹೊಂದಿದ್ದು ಉಬ್ಬಿದ ಭುಜ, ಕೊರಳಲ್ಲಿ ಘಂಟೆ, ಹಣೆಕಟ್ಟು ಮೈಮೇಲೆ ವಿವಿಧ ರೀತಿಯ ಆಭರಣಗಳು ಹೊಂದಿವೆ. ಈ ದೇವಾಲಯದ ಒಳಭಾಗದಲ್ಲಿ ಪ್ರದಕ್ಷಣಾ ಪಥವಿದೆ.ನವರಂಗದ ಎಡಭಾಗದಲ್ಲಿ ಗಣೇಶ ಮತ್ತು ಇತರೆ ವಿಗ್ರಹಗಳಿವೆ. ನವರಂಗದ ದ್ವಾರವನ್ನು ಪಂಚಲೋಹದಿಂದ ಲೇಪಿಸಲಾಗಿದ್ದು ದ್ವಾರದಲ್ಲಿ ಲತಾಸುರಳಬಳ್ಳಿ ಲಲಾಟಬಿಂಬದ ಇಕ್ಕೆಲಗಳಲ್ಲಿ ನಂದಿ ಮತ್ತು ಅದರ ಮಧ್ಯಭಾಗದಲ್ಲಿ ಶಿವಲಿಂಗವಿದೆ.ಲತಾಸುರುಳಿ ಬಳ್ಳಿಯ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿದ್ದು ಅವರ ಕೆಳಗೆ ಕಾಲ್ಪನಿಕ ಪ್ರಾಣಿಯ ಶಿಲ್ಪವಿದೆ.ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ.

**ಭದ್ರಕಾಳಿ ಸಮೇತ ಶ್ರೀ ವೀರಭದ್ರಸ್ವಾಮಿ ದೇವಾಲಯ–ದೇವನಹಳ್ಳಿ:**

ಈ ದೇವಾಲಯವು ದೇವನಹಳ್ಳಿಯ ಬಜಾರ್ ಮುಖ್ಯ ರಸ್ತೆಯಲ್ಲಿದ್ದು ಪೂರ್ವಾಭಿಮುಖವಾಗಿದ್ದು ಮೈಸೂರು ಒಡೆಯರ್‌ರವರ ಕಾಲದಲ್ಲಿ ನಿರ್ಮಿಸಲ್ಪಟ್ಟಿದ್ದು ಖಾಸಗಿ ಧರ್ಮದರ್ಶಿ ಮಂಡಳಿಯವರಿಂದ ನಿರ್ವಹಿಸಲ್ಪಡುತ್ತದೆ.ಈ ದೇವಾಲಯವು ತ್ರಿಕೂಟಚಲವಾಗಿದ್ದು ಗರ್ಭಗುಡಿ ನವರಂಗ ಮುಖಮಂಟಪಗಳನ್ನು ಒಳಗೊಂಡಿದೆ.

**ಗರ್ಭಗುಡಿ**: ಈ ದೇವಾಲಯದಲ್ಲಿ 3 ಗರ್ಭಗುಡಿಗಳಿದ್ದು ತ್ರಿಕೂಟಚಲ ದೇವಾಲಯವಾಗಿದೆ.ಮಧ್ಯಭಾಗದಲ್ಲಿ ಶ್ರೀವೀರಭದ್ರಸ್ವಾಮಿ ಬಲಭಾಗದಲ್ಲಿ ವಿನಾಯಕ ಮತ್ತು ಎಡಭಾಗದಲ್ಲಿ ದಕ್ಷಿಣ ಮೂರ್ತಿ ಗರ್ಭಗುಡಿಗಳಿವೆ.

**ಒಂದನೇ ಗರ್ಭಗುಡಿ**: ಗರ್ಭಗುಡಿಯು ಚೌಕಾಕಾರವಾಗಿದ್ದು ಶ್ರೀವೀರಭದ್ರಸ್ವಾಮಿಯು ಈ ದೇವಾಲಯದ ಮುಖ್ಯ ಆಕರ್ಷಣೆಯಾಗಿದೆ. (ಚಿ.ಸಂ.62)ಗರ್ಭಗುಡಿಯ ಉದ್ದ 5 ಅಡಿ ಮತ್ತು ಅಗಲ 5 ಅಡಿಗಳಾಗಿದ್ದು ಪೀಠದ ಮೇಲೆ ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿಂತಿರುವ ಭಂಗಿಯಲ್ಲಿರುವ ಸುಮಾರು ಮೂರುವರೆ ಅಡಿ ಎತ್ತರದ ಶ್ರೀವೀರಭದ್ರಸ್ವಾಮಿ ಶಿಲ್ಪವಿದ್ದು ಈ ಶಿಲ್ಪವು 4 ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಖಡ್ಗ ಬಾಣಗಳನ್ನು ಎಡಗೈಯಲ್ಲಿ ಬಿಲ್ಲು ಮತ್ತು

ಶಿರಚ್ಛೇದನ ಮಾಡುತ್ತಿರುವ ರೀತಿ ಹೊಂದಿದ್ದಾನೆ. ರುಂಡಮಾಲೆಯಿದ್ದು ಶಿಲ್ಪದ ಸುತ್ತಲೂ ಪ್ರಭಾವಳಿಯಿದ್ದು ಪ್ರಭಾವಳಿಯಲ್ಲಿ ಸಿಂಹದ ಕೀರ್ತಿಮುಖವಿದೆ. ಈ ಶಿಲ್ಪದ ಎಡಭಾಗದಲ್ಲಿ ಶಕ್ತಿ ಸ್ವರೂಪಿಣಿ ಪತ್ನಿಯಾದ ಭದ್ರಕಾಳಿಯ ಶಿಲ್ಪವಿದ್ದು ಈಕೆಯು ಎರಡು ಕೈಗಳನ್ನು ಹೊಂದಿದ್ದಾಳೆ.ಗರ್ಭಗುಡಿಯ ದ್ವಾರಶಾಖೆಯಲ್ಲಿ ಲಲಾಟಬಿಂಬದಲ್ಲಿ ಪದ್ಮಪೂರ್ಣಕುಂಬ ಶಿಲ್ಪಗಳಿವೆ.

**ಎರಡನೇ ಗರ್ಭಗುಡಿ: ಬಲಭಾಗದ ಗರ್ಭಗುಡಿ-ವಿನಾಯಕ**: ಇದು ಚೌಕಾಕಾರವಾಗಿದ್ದು ಪೀಠದ ಮೇಲೆ ಒಂದೂವರೆ ಅಡಿ ಎತ್ತರದ ಕಪ್ಪುಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ವಿನಾಯಕ ಶಿಲ್ಪವಿದೆ. ವಿನಾಯಕನು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಭುವನೇಶ್ವರಿ ಕಂಡುಬರುವುದಿಲ್ಲ.

**ಮೂರನೇ ಗರ್ಭಗುಡಿ**: **ಎಡಭಾಗದ ಗರ್ಭಗುಡಿ-ದಕ್ಷಿಣ ಮೂರ್ತಿ**: ಈ ಗರ್ಭಗುಡಿಯು ಚೌಕಾಕಾರವಾಗಿದ್ದು ಇದರ ಉದ್ದ 5 ಅಡಿ ಮತ್ತು ಅಗಲ 5 ಅಡಿಗಳಾಗಿರುತ್ತದೆ. ಸುಮಾರು ಒಂದೂವರೆ ಅಡಿ ಬೆಟ್ಟದ ರಚನೆಯುಳ್ಳ ಪೀಠದ ಮೇಲೆ ಕುಳಿತಿರುವ ಭಂಗಿಯಲ್ಲಿರುವ ನಯವಾದ ಕೆತ್ತನೆ ಮತ್ತು ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟಿರುವ ಗುರುದಕ್ಷಿಣಮೂರ್ತಿ ಶಿಲ್ಪವಿದೆ.ಈ ಶಿಲ್ಪವು 4 ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಜಪಮಣಿ, ಅಭಯಹಸ್ತ, ಎಡಗೈಯಲ್ಲಿ ಪೂರ್ಣಕುಂಬ ಪುಸ್ತಕವನ್ನು ಹಿಡಿದಿದ್ದಾನೆ. ಈ ಶಿಲ್ಪವು ಸುಖಾಸನ ಭಂಗಿಯಲ್ಲಿದೆ.ಈ ಶಿಲ್ಪದ ಎಡಭಾಗದಲ್ಲಿ ಗಿಳಿ ಕೈಮುಗಿಯುತ್ತಿರುವ ಶಿಲ್ಪ, ಬಲಭಾಗದಲ್ಲಿ ಕೈಮುಗಿಯುತ್ತಿರುವ ಗಣ ಶಿಲ್ಪವಿದೆ.ಭುವನೇಶ್ವರಿ ಕಂಡುಬರುವುದಿಲ್ಲ. ಗರ್ಭಗುಡಿಯ ದ್ವಾರವು ಪದ್ಮದಳಗಳಿಂದ ಕೂಡಿದ್ದು ಸರಳವಾಗಿದೆ.ದಕ್ಷಿಣ ಮೂರ್ತಿ ಗುಡಿಗೆ ಎದುರಾಗಿ ಎಡಭಾಗದಲ್ಲಿ ಪೀಠದ ಮೇಲೆ ಚಂಡಿಕೇಶ್ವರ ಶಿಲ್ಪವಿದೆ.

**ನಂದಿ**:ಮುಖ್ಯಗರ್ಭಗುಡಿಗೆ ಎದುರಾಗಿ ಪೀಠದ ಮೇಲೆ ನಂದಿ ಶಿಲ್ಪವಿದ್ದು ಈ ಶಿಲ್ಪವು ಸುಮಾರು 1 ಅಡಿ ಎತ್ತರವಿದ್ದು ಅಲಂಕಾರಿಕ ಕೆತ್ತನೆಗಳು ಕೊರಳು ಪಟ್ಟಿ ಮುಂತಾದವುಗಳನ್ನು ಹೊಂದಿದೆ. ಸುಖನಾಸಿ ಕಂಡುಬರುವುದಿಲ್ಲ.(ಚಿ.ಸಂ.63)

**ನವರಂಗ**: ನವರಂಗದಲ್ಲಿ 4 ಪ್ರಧಾನ ಕಂಬಗಳು ಇದ್ದು ಸುಮಾರು 7 ಅಡಿ ಎತ್ತರವಾಗಿವೆ.ಕಂಬಗಳು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು ಸರಳವಾದ ಬೋದಿಗೆ ಕಂಡುಬರುತ್ತದೆ.ಕಂಬಗಳಲ್ಲಿ ಪದ್ಮ ಪೂರ್ಣಕುಂಭ ನವಿಲು ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ.ನವರಂಗದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ.ಮಧ್ಯದಲ್ಲಿ ಪ್ರಧಾನವಾಗಿ ಒಂದು ಪದ್ಮ ಮತ್ತು ಅದನ್ನು ಸುತ್ತುವರೆದಿರುವಂತೆ 12 ಪದ್ಮಗಳ ಕೆತ್ತನೆ ಇದೆ. ಗಣೇಶ ಗುಡಿಯ ಬಲಭಾಗದಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಪೀಠದ ಮೇಲೆ ದತ್ತಾತ್ರೇಯ,

ವೆಂಕಟರಮಣಸ್ವಾಮಿ, ರಾಮಾನುಜ, ಚಾಮುಂಡೇಶ್ವರಿ ಶಿಲ್ಪಗಳಿವೆ. ಚಾಮುಂಡೇಶ್ವರಿ ಶಿಲ್ಪವು ಆಕರ್ಷಕವಾಗಿದ್ದು ನಿಂತಿರುವ ಭಂಗಿಯಲ್ಲಿದ್ದು ಸುಮಾರು ಎರಡೂವರೆ ಅಡಿ ಎತ್ತರ ಹೊಂದಿದ್ದು ದೇವಿಯು ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಕಮಲ ಖಡ್ಗವನ್ನು ಮತ್ತು ಎಡಗೈಯಲ್ಲಿ ಡಮರುಗ ಖಡ್ಗವನ್ನು ಹಿಡಿದಿದ್ದಾಳೆ.ಇಲ್ಲಿನ ಶಿಲ್ಪಗಳ ವಿಶೇಷವೇನೆಂದರೆ ಶೈವ ಮತ್ತು ವೈಷ್ಣವ ಶಿಲ್ಪಗಳು ಎರಡು ಒಂದೇ ಕಡೆ ಇದ್ದು ಧಾರ್ಮಿಕ ಸಾಮರಸ್ಯದ ಸಂಕೇತವಾಗಿದೆ.ಉತ್ಸವ ಮೂರ್ತಿಯಾದ ನಂದಿವಾಹನವಿದ್ದು ಪಂಚಲೋಹದಿಂದ ಮಾಡಲ್ಪಟ್ಟಿದೆ.ನವರಂಗದ ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮತ್ತು ದ್ವಾರಶಾಖೆಯ ಕೆಳಭಾಗದಲ್ಲಿ ನಿಂತಿರುವ ಭಂಗಿಯಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ.

**ಮುಖಮಂಟಪ:**ಇದರ ಉದ್ದ 4 ಅಡಿ ಮತ್ತು ಅಗಲ 30 ಅಡಿಗಳಾಗಿರುತ್ತದೆ. ಮುಖಮಂಟಪದಲ್ಲಿ 4 ಪ್ರಧಾನ ಕಂಬಗಳು ಇದ್ದು ಸುಮಾರು 7 ಅಡಿ ಎತ್ತರವನ್ನು ಹೊಂದಿದ್ದು ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯಿದ್ದು ಪದ್ಮಗಳ ಕೆತ್ತನೆಯಿದೆ.ಮುಖಮಂಟಪದ ಮುಂಭಾಗದಲ್ಲಿ ಸುಮಾರು 3 ಅಡಿ ಪೀಠದ ಮೇಲೆ ಮರದಿಂದ ನಿರ್ಮಿಸಿರುವ 10 ಅಡಿ ಎತ್ತರದ ಧ್ವಜಸ್ತಂಭವಿದ್ದು ಅದರ ಮುಂದೆ ಬಲಿಪೀಠವಿದೆ.(ಚಿ.ಸಂ.64) ಮುಖಮಂಟಪದ ಮೇಲ್ಭಾಗದಲ್ಲಿ ದೇವಕೋಷ್ಟದಲ್ಲಿ ಗಾರೆ ಶಿಲ್ಪಗಳಿವೆ ಪೂರ್ವ ಕೋಷ್ಟಗಳಲ್ಲಿ ವಿನಾಯಕ, ವೀರಭದ್ರಸ್ವಾಮಿ, ದಕ್ಷಿಣಮೂರ್ತಿ, ದಕ್ಷಿಣ ಕೋಷ್ಟಗಳಲ್ಲಿ ಸುಬ್ರಮಣೇಶ್ವರ, ಉತ್ತರಕ್ಕೆ ದತ್ತಾತ್ರೇಯ ಗಾರೆ ಶಿಲ್ಪಗಳಿವೆ.[48]

# ವೈಷ್ಣವ ಧರ್ಮದ ದೇವಾಲಯಗಳು

ವೈಷ್ಣವ ಧರ್ಮವು ಭಾರತದ ಪ್ರಾಚೀನ ಧಾರ್ಮಿಕ ಪಂಥಗಳಲ್ಲಿ ಒಂದಾಗಿದೆ.ವೈಷ್ಣವ ಧರ್ಮವು ವಿಷ್ಣು ಮತ್ತು ಲಕ್ಷ್ಮೀಗೆ ಪ್ರಾಮುಖ್ಯತೆ ನೀಡುತ್ತದೆ.ಕರ್ನಾಟಕದಲ್ಲಿ ಸುಮಾರು ಕ್ರಿ.ಶ.3ನೇ ಶತಮಾನದಿಂದ ಭಾಗವತ ಧರ್ಮದವು ಪ್ರಸರಿಸಿತು ಎನ್ನಬಹುದು.ಬಾದಾಮಿ ಚಾಳುಕ್ಯರ ಅರಸ ಮಂಗಳೇಶನ ಕಾಲದಲ್ಲಿ ಬಾಗವತ ಧರ್ಮವು ನೆಲೆಯೂರಿತ್ತು.ಮಂಗಳೇಶನನ್ನು ಮಹಾಕೂಟ ಶಾಸನವು ಪರಮ ಭಾಗವತನೆಂದು ಕರೆದಿವೆ. ರಾಷ್ಟ್ರಕೂಟ ಅರಸರು ಪ್ರಾರಂಭದಲ್ಲಿ ವೈಷ್ಣವ ಮತಾವಲಂಬಿಗಳಾಗಿದ್ದಂತೆ ತೋರುತ್ತದೆ.[49] ವಿಷ್ಣುವನ್ನು ಕೇಶವ, ನಾರಾಯಣ, ಮಾಧವ, ಜನಾರ್ಧನ, ವೇಣುಗೋಪಾಲ ಮುಂತಾದ ಶಿಲ್ಪಗಳಾಗಿ ಕೆತ್ತಲಾಗಿದೆ.

## ಶ್ರೀ ವೇಣುಗೋಪಾಲಸ್ವಾಮಿ/ಮದನಗೋಪಾಲಸ್ವಾಮಿ ದೇವಾಲಯ-ದೇವನಹಳ್ಳಿ

ಈ ದೇವಾಲಯವು ದೇವನಹಳ್ಳಿಯ ಕೋಟೆ ಅಂಚಿನಲ್ಲಿದ್ದು ಆವತಿ ನಾಡಪ್ರಭುಗಳ ಕಾಲದಲ್ಲಿ ನಿರ್ಮಾಣಗೊಂಡಿದೆ ಎಂದುಗುರುತಿಸಬಹುದಾದ ದೇವಾಲಯವಾಗಿದೆ.ಇದು ನಾಡಿನ ದೇವಾಲಯದ ವಾಸ್ತುಶಿಲ್ಪ ಕಲೆಯಲ್ಲಿ ಉಲ್ಲೇಖಿಸಬಹುದಾದ ಒಂದು ಉತ್ತಮ ದೇವಾಲಯವಾಗಿದೆ.ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದುಪೂರ್ವಾಭಿಮುಖವಾಗಿದ್ದು ವಿಶಾಲವಾದ ಪ್ರಾಕಾರ, ಗರ್ಭಗುಡಿ, ಅಂತರಾಳ, ನವರಂಗ, ಚಿಕ್ಕ ಮುಖಮಂಟಪ ಮತ್ತು ರಾಯಗೋಪುರಗಳಿಂದ ಕೂಡಿದೆ.[50] (ಚಿ.ಸಂ.65)ಈ ದೇವಾಲಯವು ರುಕ್ಮಿಣಿ ಸತ್ಯಭಾಮ ಸಮೇತ ಮದನಗೋಪಾಲಸ್ವಾಮಿ ಎಂದು ಶಾಸನೋಕ್ತವಾಗಿದೆ.ವೇಣುಗೋಪಾಲನಿಗೆ 4 ಕೈಗಳಿದ್ದು ಮೇಲಿನ ಕೈಗಳಲ್ಲಿ ಚಕ್ರ ಮತ್ತು ಶಂಖವಿರುತ್ತದೆ. ಇವನು ನೋಡಲು ಮನ್ಮಥನಂತೆ ಸುಂದರವಾಗಿದ್ದು ಇವನನ್ನು ಮದನ ಗೋಪಾಲ ಎಂದು ಕರೆಯಲಾಗುತ್ತದೆ.[51] ಈ ದೇವಾಲಯವು ಒಂದು ರೀತಿ ಮುಂದುವರೆದ ಹೊಯ್ಸಳರ ತಳಪಾಯದ ಗುಣಲಕ್ಷ್ಣಗಳನ್ನು ಹೊಂದಿದ್ದರೂ ಕೂಡ ರಚನಾ ಶೈಲಿಯಲ್ಲಿ ದೇವಾಲಯಗಳ ಶಿಲ್ಪಗಳ ಕೆತ್ತನೆ ಮತ್ತು ಬಳಸಿರುವ ಕಲ್ಲುಗಳಲ್ಲಿ ಯಾವುದೇ ಹೊಯ್ಸಳರ ಕಾಲದ ಗುಣಲಕ್ಷಣಗಳು ಕಂಡುಬರುವುದಿಲ್ಲ. ಈ ದೇವಾಲಯವು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆ ಹಾಗೂ ಪುರಾತತ್ವ ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಸಂರಕ್ಷಣೆಗೆ ಒಳಪಟ್ಟಿದೆ.

**ಶಾಸನಗಳಲ್ಲಿ ಉಲ್ಲೇಖ**: ಆವತಿ ನಾಡಪ್ರಭುಗಳ ಕಾಲದ ಶಾಸನಗಳಲ್ಲಿ ರುಕ್ಮಿಣಿ ಸತ್ಯಭಾಮ ಸಮೇತ ಮದನಗೋಪಾಲಸ್ವಾಮಿ ದೇವಾಲಯವೆಂದು ಶಾಸನೋಕ್ತವಾಗಿದ್ದು ಈ ದೇವಾಲಯಕ್ಕೆ ದತ್ತಿಗಳನ್ನು ನೀಡಲಾಗಿದೆ.[52]

**ನಿರ್ಮಾಣ ಕಾಲ**:ವಿಜಯನಗರ ಕಾಲದಲ್ಲಿ ಸಾಮಂತನಾಗಿದ್ದ ಆವತಿ ನಾಡಪ್ರಭು ರಣಭೈರೇಗೌಡ ಎಂಬುವರು ಈ ದೇವಾಲಯವನ್ನು ನಿರ್ಮಿಸಿದರು[53]ಈ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ.

**ಗರ್ಭಗೃಹ**:ಗರ್ಭಗೃಹವು ಚೌಕಾಕಾರವಾಗಿದ್ದು ಉದ್ದ 8.3 ಅಡಿ ಮತ್ತು ಅಗಲ 8 ಅಡಿಗಳನ್ನು ಹೊಂದಿದೆ. ಗರ್ಭಗೃಹದ ಮಧ್ಯಭಾಗದಲ್ಲಿ ಒಂದು ಅಡಿ ಎತ್ತರದ ಪದ್ಮಪೀಠ ಮೇಲೆ ನಿಂತ ಭಂಗಿಯಲ್ಲಿರುವ ಹಿಂದೂ ತಲಮಾನ ಪದ್ಧತಿಯನ್ನು ಆದರಿಸಿರುವ ವಿಜಯನಗರ ಶೈಲಿಯ ಸುಮಾರು 4 ಅಡಿ ಎತ್ತರದ ಶ್ರೀವೇಣುಗೋಪಾಲ ಶಿಲ್ಪವಿದೆ.ವೇಣುಗೋಪಾಲನು 4 ಕೈಗಳನ್ನು ಹೊಂದಿದ್ದು ಎಡ ಮತ್ತು ಬಲಗೈಯ ಮುಂಗೈಕೊಳಲು ನುಡಿಸುತ್ತಿರುವಮತ್ತು ಎಡಗೈಯಲ್ಲಿ ಶಂಖವನ್ನು ಮತ್ತು ಬಲಗೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. ವೇಣುಗೋಪಾಲನ ಕಿರೀಟ ಎತ್ತರವಾಗಿದ್ದು ಸುತ್ತಲೂ ಸರಳವಾದ ಪ್ರಭಾವಳಿಯಿದ್ದು ಪ್ರಭಾವಳಿಯ ಮಧ್ಯಭಾಗದಲ್ಲಿ ಕೀರ್ತಿಮುಖವಿದೆ.ವೇಣುಗೋಪಾಲನ ಇಕ್ಕೆಲಗಳಲ್ಲಿ ರುಕ್ಮಿಣಿ ಸತ್ಯಭಾಮ ಶಿಲ್ಪಗಳಿವೆ.[54]ರುಕ್ಮಿಣಿಯು ಒಂದು ಅಡಿ ಪೀಠದ ಮೇಲೆ ನಿಂತಿರುವ ಭಂಗಿಯಲ್ಲಿದ್ದು ಸುಮಾರು 3 ಅಡಿ ಎತ್ತರವನ್ನು ಹೊಂದಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.ರುಕ್ಮಿಣಿಯು ಎರಡು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಕಮಲ ಮತ್ತು ಎಡಗೈಯನ್ನು ಓರೆಯಾಗಿರುವಂತೆ ಹಿಡಿದಿದ್ದಾಳೆ. ಸತ್ಯಭಾಮ ಶಿಲ್ಪವು ಒಂದು ಅಡಿ ಪೀಠದ ಮೇಲೆ ಸುಮಾರು 3 ಅಡಿ ಎತ್ತರದಲ್ಲಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ನಿಂತಿರುವ ಭಂಗಿಯಲ್ಲಿದ್ದು ಎರಡು ಕೈಗಳನ್ನು ಹೊಂದಿದ್ದು ಎಡಗೈಯಲ್ಲಿ ಕಮಲ ಇದ್ದು ಆಭರಣಗಳ ಕೆತ್ತನೆ ಕಂಡುಬರುತ್ತದೆ. ವಿಶೇಷವೇನೆಂದರೆ ಮೂಗಿನ ಎಡಭಾಗದ ತುದಿಯನ್ನು ಚುಚ್ಚಲಾಗಿದೆ.

**ಗರ್ಭಗುಡಿಯ ದ್ವಾರ**: ಗರ್ಭಗುಡಿ ದ್ವಾರವು ಸುಮಾರು ಐದುವರೆ ಅಡಿ ಎತ್ತರ ಮೂರುವರೆ ಅಡಿ ಅಗಲ ಮತ್ತು ಎರಡುವರೆ ಅಡಿ ದಪ್ಪವನ್ನು ಹೊಂದಿದೆ. ಗರ್ಭಗುಡಿ ದ್ವಾರ ಸರಳವಾಗಿದ್ದು ಭುವನೇಶ್ವರಿಯಲ್ಲಿ ಯಾವುದೇ ಅಲಂಕಾರಿಕ ಕೆತ್ತನೆ ಕಂಡುಬರುವುದಿಲ್ಲ. ದ್ವಾರದಲ್ಲಿ ಊರ್ಧ್ವಮುಖ ಮಾದರಿಯ ಪದ್ಮಕೆತ್ತನೆ ಇದ್ದು ಗರ್ಭಗುಡಿಯ ಮೇಲೆ ದ್ರಾವಿಡ ಶಿಖರವಿದೆ

**ಸುಖನಾಸಿ**: ಸುಖನಾಸಿಯು 9.6 ಅಡಿ ಉದ್ದ ಮತ್ತು 7.8ಅಡಿ ಅಗಲವನ್ನು ಹೊಂದಿದ್ದು ಆಯಾತಾಕಾರದಲ್ಲಿದೆ. ಭುವನೇಶ್ವರಿಯಲ್ಲಿ ವೃತ್ತಾಕಾರದ ಪದ್ಮದಳಗಳ ಕೆತ್ತನೆ ಇದೆ. ಸುಖನಾಸಿಯ ಭಿತ್ತಿಗೆ ಇತ್ತೀಚೆಗೆ ಚದರಬಿಲ್ಲೆಗಳನ್ನು ಹಾಕಿ ಮೂಲ ದೇವಾಲಯದ ಗುಣಲಕ್ಷಣಗಳನ್ನು ಮುಚ್ಚಲಾಗಿದೆ.ಸುಖನಾಸಿಯ ಎಡಭಾಗದ ಒಂದು ವೇದಿಕೆ ಮೇಲೆ 1 ಅಡಿ ಎತ್ತರದ ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ವಿಷ್ಣುಶಿಲ್ಪವಿದೆ. ಸುಖನಾಸಿಯ ದ್ವಾರವು ಏಳುವರೆ ಅಡಿ ಎತ್ತರವನ್ನು 5.3 ಅಡಿ ಅಗಲವನ್ನು ಹೊಂದಿದ್ದು ದ್ವಾರವು ಮೂರು ಪಟ್ಟಿಕೆಗಳನ್ನು ಒಳಗೊಂಡಅಲಂಕಾರಿಕ ಕೆತ್ತನೆಗಳಿಂದ ಕೂಡಿದ್ದು ದ್ವಾರ ಶಾಖೆಯ ಮಧ್ಯಭಾಗದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದ್ದು ಗಜಲಕ್ಷ್ಮಿಯು 4 ಕೈಗಳನ್ನು ಹೊಂದಿದ್ದು ಗಜಲಕ್ಷ್ಮಿಗೆ ತಮ್ಮ ಎಡ ಮತ್ತು ಬಲಗಾಲನ್ನು ಎತ್ತಿ ಅಭಿಷೇಕ ಮಾಡುತ್ತಿರುವ ಎರಡು ಗಜಗಳ ಶಿಲ್ಪವಿದೆ. ದ್ವಾರಶಾಖೆಯಲ್ಲಿ ಕೆಳಭಾಗದಲ್ಲಿ ಅಲಂಕಾರಿಕ ಕೆತ್ತನೆಗಳಿದ್ದು ಸರಳ ಪೀಠದ ಮೇಲೆ ಇಕ್ಕೆಲಗಳಲ್ಲಿ ನಿಂತಿರುವ ಭಂಗಿಯಲ್ಲಿರುವ ಇಬ್ಬರು ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಈ ಶಿಲ್ಪಗಳು ಸೌಮ್ಯಸ್ವರೂಪ ಮಾದರಿಯನ್ನು ಹೊಂದಿದ್ದು ಇವುಗಳ ಎತ್ತರ ಎರಡೂವರೆ ಅಡಿಗಳು ಮತ್ತು ಅಗಲ ಒಂದೂವರೆ ಅಡಿಗಳಾಗಿರುತ್ತದೆ.ಈ ದ್ವಾರಪಾಲಕರು 4 ಕೈಗಳನ್ನು ಹೊಂದಿದ್ದು ತಮ್ಮಎರಡು ಕೈಗಳಲ್ಲಿ ಶಂಖ, ಚಕ್ರ ಮತ್ತೊಂದು ಕೈಯಲ್ಲಿ ಗಧೆ ಮತ್ತು ಸೊಂಟದ ಕಟಿಬಂಧದ ಮೇಲೆ ಮತ್ತೊಂದು ಕೈ ಇಟ್ಟಿದ್ದಾರೆ.ಶಿಲ್ಪಗಳು ಪ್ರಭಾವಳಿಯನ್ನು ಹೊಂದಿದ್ದು ಮಧ್ಯಭಾಗದಲ್ಲಿಕೀರ್ತಿಮುಖವಿದೆ.ಸುಖನಾಸಿಯ ದ್ವಾರದ ಪೇದ್ಯವು ನಕ್ಷತ್ರಾಕಾರದಲ್ಲಿದ್ದು ಅದರ ಮೇಲ್ಭಾಗದಲ್ಲಿ ವೃತ್ತಾಕಾರದ ಹೂದಳ ಕೆತ್ತನೆಯಿದೆ.

**ಅರ್ಧಮಂಟಪ**: ಸುಖನಾಸಿಯ ಮುಂದೆ ಮತ್ತೊಂದು ತೆರೆದ ಮಾದರಿಯ ಸುಖನಾಸಿ ಇದ್ದು ಆಯಾತಾಕಾರದಲ್ಲಿದ್ದು ಉದ್ದ ಎಂಟೂವರೆ ಅಡಿ ಮತ್ತು ಏಳೂವರೆ ಅಡಿ ಅಗಲವನ್ನು ಹೊಂದಿದೆ. ಇದರಲ್ಲಿ ಯಾವುದೇ ಅಲಂಕಾರಕ ಕೆತ್ತನೆಗಳಾಗಲೀಭುವನೇಶ್ವರಿ ಶಿಲ್ಪಗಳಾಗಲೀ ಕಂಡುಬರುವುದಿಲ್ಲ. ಇಕ್ಕೆಲಗಳಲ್ಲಿ ಎರಡು ಅರೆಗಂಬಗಳಿದ್ದು ಇವುಗಳಲ್ಲಿ ಉಬ್ಬುಶಿಲ್ಪಗಳಿವೆ. ಈ ತೆರೆದ ಮಾದರಿಯ ಸುಖನಾಸಿಯ ಮೇಲ್ಭಾಗದಲ್ಲಿರುವ ವಾಜನದಲ್ಲಿ ಹೂಬಳ್ಳಿಯ ಕೆತ್ತನೆಯಿದ್ದು ಸುಖನಾಸಿಯ ಎಡ ಮತ್ತು ಬಲಭಾಗದಲ್ಲಿ 2 ಸಣ್ಣ ಗರ್ಭಗುಡಿಗಳಿವೆ.

**ನವರಂಗ**: ಅರ್ಧಮಂಟಪವು ನವರಂಗಕ್ಕೆ ಹೊಂದಿಕೊಂಡಿದ್ದು ನವರಂಗವು ಚೌಕಕಾರವಾಗಿದ್ದು ಉದ್ದ 25 ಅಡಿ ಮತ್ತು ಅಗಲ 25 ಅಡಿಗಳನ್ನು ಹೊಂದಿದೆ.2ನೇ ಸುಖನಾಸಿಯ ಇಕ್ಕೆಲಗಳಲ್ಲಿ, ನವರಂಗದ ಎಡ ಮತ್ತು ಬಲಭಾಗದಲ್ಲಿ ತಲಾ 1 ಗರ್ಭಗುಡಿಗಳಿವೆ.

**ಉತ್ತರ ದಿಕ್ಕಿನ ಗರ್ಭಗುಡಿ: ಬೆಣ್ಣೆ ಕೃಷ್ಣನ ದರ್ಪಣ ಮಂದಿರ**: ಇದು ಚೌಕಾಕಾರವಾಗಿದ್ದು ಉದ್ದ 5.5 ಅಡಿ ಮತ್ತು ಅಗಲ 5.5 ಅಡಿಗಳನ್ನು ಹೊಂದಿದ್ದು ಒಂದು ಅಡಿ ಪೀಠದ ಮೇಲೆ ನಿಂತ ಭಂಗಿಯಲ್ಲಿರುವ ಕಪ್ಪುಶಲೆಯಿಂದ ನಿರ್ಮಿಸಲ್ಪಟ್ಟಿರುವ ಸುಮಾರು 2 ಅಡಿ ಎತ್ತರದ ಬೆಣ್ಣೆಕೃಷ್ಣನ ಶಿಲ್ಪವಿದೆ. ಬೆಣ್ಣೆಕೃಷ್ಣನು 2 ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಬೆಣ್ಣೆ ಮತ್ತು ಎಡಗೈಯನ್ನು ಚಿತ್ರಿಸಲಾಗಿದ್ದು ಆಭರಣಗಳನ್ನು ಧರಿಸಿದ್ದಾನೆ. ಬೆಣ್ಣೆ ಕೃಷ್ಣನ ಬಲಗಾಲು ತಾವರೆ ಮೇಲಿಟ್ಟಿದ್ದು ಎಡಗಾಲು ಪೀಠದ ಮೇಲಿದೆ.ಶಿಲ್ಪದ ಸುತ್ತಲೂ ಪ್ರಭಾವಳಿಯಿದ್ದು ಕೀರ್ತಿಮುಖವಿದೆ.

**ದಕ್ಷಿಣ ದಿಕ್ಕಿನ ಗರ್ಭಗುಡಿ: ಮಹಾಲಕ್ಷ್ಮಿ ಗುಡಿ**: ಚೌಕಾಕಾರವಾಗಿದ್ದು ಉದ್ದ 6 ಅಡಿ ಮತ್ತು ಅಗಲ 6 ಅಡಿಗಳನ್ನು ಹೊಂದಿದ್ದು ಮಹಾಲಕ್ಷ್ಮಿಯು ಒಂದು ಅಡಿ ಪದ್ಮಪೀಠದ ಮೇಲೆ ನಿಂತಿರುವ ಭಂಗಿಯಲ್ಲಿದೆ. ಈ ಶಿಲ್ಪವು ಕಪ್ಪುಶಿಲೆಯಿಲ್ಲದ್ದು 4 ಕೈಗಳನ್ನು ಹೊಂದಿದ್ದು 2 ಕೈಗಳಲ್ಲಿ ಕಮಲದ ಹೂವು ಮತ್ತೊಂದು ಕೈ ಅಭಯ ಮತ್ತು ವರದಹಸ್ತದಿಂದ ಕೂಡಿದೆ.ಕಿರೀಟಕ್ಕೆ ಹಿತ್ತಾಳೆ ಕವಚವನ್ನು ಹಾಕಲಾಗಿದ್ದು ಪ್ರಭಾವಳಿ ಮತ್ತು ಕೀರ್ತಿಮುಖವಿದೆ.ಈ ಶಿಲ್ಪದ ವಿಶೇಷವೇನೆಂದರೆ ಮೂಗಿನ ಎರಡು ತುದಿಗಳಗೂ ಚುಚ್ಚಲಾಗಿದೆ.ಈ 2 ಗರ್ಭಗುಡಿಗಳ ಇಕ್ಕೆಲಗಳಲ್ಲಿ 2 ಅರೆಗಂಬಗಳಿದ್ದು ಈ ಕಂಬಗಳಲ್ಲಿ ವಿಜಯನಗರ ಶೈಲಿಯ ಚಾಚಿಕೊಂಡಿರುವ ಮತ್ತು ಕಮಲದ ಹೂಗಳ ಮೊಗ್ಗುಗಳನ್ನು ಹೊಂದಿರುವ ಬೋದಿಗೆ, ಬೋದಿಗೆ ಮೇಲೆ ತೊಲೆಗಳು ಕಂಡುಬರುತ್ತವೆ. ಈ ಕಂಬಗಳಲ್ಲಿ 3 ಹಂತಗಳಲ್ಲಿ ಉಬ್ಬುಶಿಲ್ಪಗಳಿವೆ. ಮಹಾಲಕ್ಷ್ಮಿ ಗರ್ಭಗುಡಿ ಎದುರಿನ ಅರೆಗಂಬದ ಮಧ್ಯಭಾಗದಲ್ಲಿ ರತಿಮನ್ಮಥರ ಶಿಲ್ಪದಲ್ಲಿ ರತಿಮನ್ಮಥರು ರಾಸಲೀಲೆಯಲ್ಲಿ ತೊಡಗಿದ್ದು ಅವರ ಕೂದಲು ವಿನ್ಯಾಸ, ಮಹಿಳೆ ಧರಿಸಿರುವ ಬಳೆ, ಉಡುಗೆ ತೊಡುಗೆ ಮತ್ತು ಪ್ರೀತಿಯಲ್ಲಿ ಮಗ್ನನಾಗಿರುವ ಮನ್ಮಥನು ಸೊಂಟಕ್ಕೆ ಕೈಹಾಕಿ ಎಳೆದುಕೊಂಡು ಚುಂಬಿಸುತ್ತಿರುವ ಉಬ್ಬುಶಿಲ್ಪ ಸ್ಪಷ್ಟವಾಗಿ ಕಂಡುಬರುತ್ತದೆ. ರತಿಮನ್ಮಥರ ಮೇಲ್ಭಾಗದಲ್ಲಿ ಒಂದು ಕಮಲದ ಹೂ ಮತ್ತು ಅದರ ತಳಭಾಗದಲ್ಲಿ ಸಿಂಹಮುಖ ಹೊಂದಿರುವ ವಿಜಯನಗರ ಶೈಲಿಯ ಕುಳಿತಿರುವ ಯಾಳಿ ಉಬ್ಬು ಶಿಲ್ಪವು ಆಕರ್ಷಕವಾಗಿವೆ. ಬೆಣ್ಣೆ ಕೃಷ್ಣನ ದರ್ಪಣ ಮಂದಿರ ಗರ್ಭಗುಡಿಯ ಅರೆಗಂಬದ ಮೇಲ್ಭಾಗದಲ್ಲಿ ಹಂಸ ಮಧ್ಯಭಾಗದಲ್ಲಿ ಅಸ್ಪಷ್ಟ ಶಿಲ್ಪ ಮತ್ತು ಕೆಳಭಾಗದಲ್ಲಿ ಸಿಂಹಮುಖ ಯಾಳಿ ಉಬ್ಬು ಶಿಲ್ಪಗಳಿವೆ.

ಈ ದೇವಾಲಯವನ್ನು ಹೊರಗಿನಿಂದ ನೋಡಿದರೆ ಏಕಕೂಟ ದೇವಾಲಯವಾಗಿದ್ದು ಮುಖ್ಯ ಗರ್ಭಗೃಹದ ಮೇಲ್ಭಾಗದಲ್ಲಿ ವಿಜಯನಗರ ಶೈಲಿಯ ಶಿಖರವಿದ್ದು, ಉಳಿದೆರೆಡು ಗರ್ಭಗೃಹಗಳಿಗೆ ಶಿಖರ ಕಂಡುಬರುವುದಿಲ್ಲ ಇದೊಂದು ದೇವಾಲಯದ ವಿಶೇಷ ಲಕ್ಷಣವಾಗಿದೆ.ಏಕೆಂದರೆ ಈ ರೀತಿಯ 3 ಗರ್ಭಗೃಹಗಳನ್ನು ಹೊಂದಿದ್ದು ಉತ್ತರ ಮತ್ತು ದಕ್ಷಿಣ

ಗರ್ಭಗುಡಿಗಳಿಗೆ ಯಾವುದೇ ಸುಖನಾಸಿ ಇಲ್ಲದಿರುವುದು ಮತ್ತು ನೇರವಾಗಿ ನವರಂಗಕ್ಕೆ ತೆರೆದುಕೊಳ್ಳುವ ಗುಣಲಕ್ಷಣಗಳನ್ನು ನಾವು ಕೇವಲ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಮಾತ್ರ ಕಾಣಬಹುದಾಗಿದೆ.

ನವರಂಗದಲ್ಲಿ 4 ಪ್ರಧಾನ ಕಂಬಗಳು ಮತ್ತು 8 ಅರೆಗಂಬಗಳಿವೆ. 4 ಮುಖ್ಯ ಕಂಬಗಳು ಚೌಕ, ಅಷ್ಟ, ಷೋಡಷ ಮಾದರಿಯಲ್ಲಿದ್ದು ಕಂಬಗಳ ಎತ್ತರ ಸುಮಾರು ಆರೂವರೆ ಅಡಿಗಳಾಗಿದ್ದು ಕಂಬಗಳಲ್ಲಿ ವಿಜಯನಗರ ಶೈಲಿಯ ಪುಷ್ಪ ಬೋದಿಗೆ, ಬೋದಿಗೆ ಮುಂದಕ್ಕೆ ಹೊರಚಾಚನ್ನು ಹೊಂದಿದ್ದು ಕಮಲದ ಹೂವಿನ ಮೊಗ್ಗುಗಳನ್ನು ಕೆತ್ತಲಾಗಿದೆ ಬೋದಿಗೆ ಮೇಲೆ ತೊಲೆಗಳಿವೆ. ಕಂಬಗಳು ಚೌಕಾಕಾರವಾಗಿದ್ದು ಅವುಗಳ ಮೇಲೆ ಕೋನಗಳು ನಂತರ ಅವುಗಳ ಮೇಲೆ ಮಧ್ಯ ಭಾಗದಲ್ಲಿ ವೃತ್ತಾಕಾರದ ಪಟ್ಟಿಯನ್ನು ಕೆತ್ತಲಾಗಿದೆ.

ನವರಂಗದ 4 ಕಂಬಗಳ ಮಧ್ಯಭಾಗದ ಮೂಲ ಮೇಲ್ಛಾವಣಿಯನ್ನು ತೆಗೆದು ಮೇಲ್ಛಾವಣಿಯ ಮೇಲೆ 4 ಭಾಗಗಳಲ್ಲಿ ಗೋಡೆಗಳನ್ನು ನಿರ್ಮಿಸಿ, ಕಬ್ಬಿಣದ ಜಾಲಾಂಧ್ರಗಳನ್ನು ಅಳವಡಿಸಲಾಗಿದ್ದು ಗೋಡೆಗಳನ್ನು ಸುಮಾರು 10 ಅಡಿಗಳಷ್ಟು ಹೆಚ್ಚು ಎತ್ತರಕ್ಕೆ ಏರಿಸಿ ಭುವನೇಶ್ವರಿಯನ್ನು ರಚನೆ ಮಾಡಿ ನವರಂಗಕ್ಕೆ ಬೆಳಕು ಬರುವಂತೆ ಮಾಡಲಾಗಿದೆ.

**ನಾಲ್ಕು ಪ್ರಧಾನ ಕಂಬಗಳಲ್ಲಿರುವ ಶಿಲ್ಪಗಳು**: ಮುಖ್ಯದ್ವಾರದಿಂದ ನವರಂಗಕ್ಕೆ ಪ್ರವೇಶಿಸಿದರೆ ನವರಂಗದ ಬಲಭಾಗದ ಮೊದಲನೆ ಕಂಬದಲ್ಲಿ 3 ಹಂತಗಳಲ್ಲಿ ಚೌಕಗಳಲ್ಲಿ ಉಬ್ಬುಶಿಲ್ಪಗಳಿವೆ. ಈ ಕಂಬದ ಮೇಲ್ಭಾಗದಲ್ಲಿ ಒರಿಸ್ಸಾದ ಶಿಲ್ಪಗಳಲ್ಲಿ ಕಂಡುಬರುವಂತೆ ವಿಶೇಷವಾದ ಮೃದಂಗ ಮಾಡುತ್ತಿರುವ ಸ್ತ್ರೀ ಶಿಲ್ಪ, ಇದೇ ಕಂಬದ ಮಧ್ಯಭಾಗದಲ್ಲಿ 4 ಕೈಗಳುಳ್ಳ ಬಲಭಾಗಕ್ಕೆ ಸೊಂಡಿಲನ್ನು ತಿರುಗಿಸಿಕೊಂಡಿರುವ ಒಂದು ಕಾಲನ್ನು ಮೇಲೆತ್ತಿ ಮತ್ತೊಂದು ಕಾಲಲ್ಲಿ ನೃತ್ಯ ಮಾಡುತ್ತಿರುವ ಗಣಪತಿ ಶಿಲ್ಪ. ಈ ಗಣಪತಿಗಾಗಿಯೇ ಒಂದು ಪೀಠವನ್ನು ಕೆತ್ತಿರುವುದು ಬಹಳ ಆಕರ್ಷಕ ಕೆತ್ತನೆಯಾಗಿದೆ. ಪೀಠದ ಮೇಲೆ ಆಸೀನರಾಗಿರುವ ತನ್ನ ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳಿರಿಸಿಕೊಂಡಿರುವ 4 ಕೈಗಳುಳ್ಳ ಉಬ್ಬು ಕೆತ್ತನೆಯ ಲಕ್ಷ್ಮಿನರಸಿಂಹ ಶಿಲ್ಪವು ಆಕರ್ಷಕವಾಗಿದೆ. ಇದೇ ಕಂಬದ ಮತ್ತೊಂದು ಭಾಗದಲ್ಲಿ ಕಿನ್ನರಶಿಲ್ಪ (ಕೆಳಭಾಗದ ದೇಹದ ಆಕಾರ ಪಕ್ಷಿ ರೂಪ ಮತ್ತು ಅರ್ಧಭಾಗ ಮನುಷ್ಯನ ರೂಪ) ಇದೇ ಕಂಬದ ಮೇಲ್ಭಾಗದಲ್ಲಿ ತನ್ನ ಎರಡು ಕೈಗಳನ್ನು ಮೇಲೆತ್ತಿರುವ ಆಲಸ್ಯ ಕನ್ಯೆಯ ಉಬ್ಬುಶಿಲ್ಪ, ಸಮಭಂಗಿಯಲ್ಲಿ ನಿಂತಿರುವ 4 ಕೈಗಳುಳ್ಳ ವಿಷ್ಣು ಶಿಲ್ಪ, ಉದ್ದನೆಯ ಗಡ್ಡವನ್ನು ಬಿಟ್ಟು ನೃತ್ಯಭಂಗಿಯಲ್ಲಿರುವ 2 ಕೈಗಳನ್ನುಳ್ಳ ಮತ್ತೊಂದು ಶಿಲ್ಪ, ನೃತ್ಯಭಂಗಿಯಲ್ಲಿರುವ ನರಸಿಂಹಮುಖ ಹೊಂದಿರುವ ಮತ್ತೊಂದು ಉಬ್ಬು ಶಿಲ್ಪವು ಆಕರ್ಷಕವಾಗಿದೆ. ನವರಂಗದ ಎಡಭಾಗದ ಮೊದಲನೆ ಪ್ರಧಾನ ಕಂಬದಲ್ಲಿ

ಮೃದಂಗವನ್ನು ನುಡಿಸುತ್ತಿರುವ ಸ್ತ್ರೀಶಿಲ್ಪ, ಬೆಣ್ಣೆ ಕದಿಯುತ್ತಿರುವ ಬಾಲಕೃಷ್ಣ, ಸಮಭಂಗಿಯಲ್ಲಿ ನಿಂತಿರುವ ವಿಷ್ಣು, ನವಿಲು, ನಾಲ್ಕು ಕೈಗಳುಳ್ಳ ವಿಷ್ಣು, ಮೇಲ್ಭಾಗದಲ್ಲಿ ಕಾಳಿಂಗ ಮರ್ಧನ ಉಬ್ಬು ಶಿಲ್ಪಗಳು ಆಕರ್ಷಕವಾಗಿವೆ.

ನವರಂಗದ ಬಲಭಾಗದ 2ನೇ ಕಂಬದ ಕೆಳಭಾಗದಲ್ಲಿ ಪ್ರೀತಿಯಿಂದ ತನ್ನ ಕರುವಿಗೆ ಹಾಲು ಉಣಿಸುತ್ತಿರುವ ಹಸುವಿನ ಶಿಲ್ಪ, ಮತ್ತೊಂದು ಭಾಗದಲ್ಲಿ ಬಹುಶಃ ಬಿಲ್ಲನ್ನು ಹಿಡಿದು ಬೇಟೆಗೆ ಹೊರಟಿರುವ ಕನ್ಯೆಯ ಎಡಗಾಲಿಗೆ ಚುಚ್ಚಿಕೊಂಡಿರುವ ಮುಳ್ಳನ್ನು ತೆಗೆಯಲು ಒಂದು ಕಾಲನ್ನು ವಜ್ರಾಸುರ ಮಾದರಿಯಲ್ಲಿ ಮಡಚಿಕೊಂಡು ಮತ್ತೊಂದು ಕಾಲನ್ನು ಮುಂದಕ್ಕೆ ಚಾಚಿ ವಿನಮ್ರವಾಗಿ ಕನ್ಯೆಯ ಕಾಲಿನಿಂದ ಮುಳ್ಳನ್ನು ತೆಗೆಯುತ್ತಿರುವ ಮತ್ತು ಆ ಕನ್ಯೆಯು ಗಂಡಸಿನ ಶಿರದ ಮೇಲೆ ತನ್ನ ಬಲಗೈ ಊರಿ ದೇಹದ ಸಮತೋಲನವನ್ನು ಕಾಯ್ದುಕೊಂಡಿರುವ ಶಿಲ್ಪವು ಆಕರ್ಷಕವಾಗಿ ಕಂಡರಿಸಲಾಗಿದ್ದು ನವರಂಗದ ಎಡಭಾಗದ 2ನೇಕಂಬದ ಮಧ್ಯಭಾಗದಲ್ಲಿ ರಾಮಾನುಜಚಾರ್ಯ ಮೇಲ್ಭಾಗದಲ್ಲಿ ನವಿಲು ಮತ್ತು ಕೆಳಭಾಗದಲ್ಲಿ ನರಸಿಂಹ ಶಿಲ್ಪಗಳು ಆಕರ್ಷಕವಾಗಿವೆ.

**ಅರೆಗಂಬಗಳ ಉಬ್ಬುಶಿಲ್ಪಗಳು**: ಮುಖ್ಯದ್ವಾರದಿಂದ ನವರಂಗ ಪ್ರವೇಶಿಸಿದರೆ ಇಕ್ಕೆಲಗಳ ಭಿತ್ತಿಯಲ್ಲಿ 8 ಅರೆಗಂಬಗಳಿದ್ದು ಈ ಅರೆಗಂಬಗಳಲ್ಲಿ ಕಂಡುಬರುವ ಉಬ್ಬುಶಿಲ್ಪಗಳೆಂದರೆ, ಬಲಭಾಗದ ಮೊದಲನೆ ಅರೆಗಂಬದಲ್ಲಿ 2 ವಾನರ ರಚನೆಯಲ್ಲಿ ಮೂಡಿಬಂದಿರುವ 4 ವಾನರ ಶಿಲ್ಪ, 2ನೇ ಅರೆಗಂಬದಲ್ಲಿ ಹಸು ಕರುವಿಗೆ ಹಾಲು ಉಣಿಸುತ್ತಿರುವ ಶಿಲ್ಪ, ಸಿಂಹಮುಖ, ಕಾಳಿಂಗಮರ್ಧನ ಶಿಲ್ಪಗಳು, 3ನೇ ಕಂಬದಲ್ಲಿ ಯಾವುದೇ ಶಿಲ್ಪಗಳ ಕಂಡುಬರುವುದಿಲ್ಲ, 4ನೇ ಕಂಬದಲ್ಲಿ ಕುದುರೆ ಮತ್ತು ನರ್ತಕಿ ಶಿಲ್ಪಗಳು ಕಂಡುಬರುತ್ತವೆ.ನವರಂಗದ ಎಡಭಾಗದಲ್ಲಿ ಭಿತ್ತಿಯಲ್ಲಿರುವ ಅರೆಗಂಬಗಳಲ್ಲಿ ಕಂಡುಬರುವ ಶಿಲ್ಪಗಳೆಂದರೆ 1ನೇ ಅರೆಗಂಬದಲ್ಲಿ ಸಿಂಹಮುಖ ಯಾಳಿ, ಬೆಣ್ಣೆಕೃಷ್ಣ, 2ನೇ ಅರೆಗಂಬದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ, 3ನೇ ಅರೆಗಂಬದ ಮೇಲ್ಭಾಗದಲ್ಲಿ ಪದ್ಮದಳ ಮತ್ತು ನರ್ತಕಿ, 4ನೇ ಅರೆಗಂಬದಲ್ಲಿ ಪದ್ಮದಳ, ನವಿಲು, ಸಿಂಹಮುಖಯಾಳಿ ಶಿಲ್ಪಗಳು ಆಕರ್ಷಕವಾಗಿ ಕೆತ್ತಲ್ಪಟ್ಟಿವೆ.

ನವರಂಗದ ದ್ವಾರವು ಸೂಕ್ಷ್ಮ ಕೆತ್ತನೆಗಳ 5 ಪಟ್ಟಿಕೆಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ.ದ್ವಾರದ ಇಕ್ಕೆಲಗಳಲ್ಲಿ ದ್ವಾರ ಪಾಲಕರ ಉಬ್ಬುಶಿಲ್ಪಗಳು ನೀಳವಾಗಿದ್ದು ಇವರು ಕಿರೀಟ ದೊಡ್ಡ ಕಿವಿ ಓಲೆ ವಿವಿಧ ಆಭರಣಳನ್ನು ಧರಿಸಿ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧೆಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ ನಿಂತಿದ್ದಾರೆ.ದ್ವಾರದ ಇಕ್ಕೆಲಗಳಲ್ಲಿ ಅಲಂಕಾರಿಕ ಕೆತ್ತನೆಗಳಿವೆ.

**ನವರಂಗದ ಹೊರಭಾಗದ ಭಿತ್ತಿಯಲ್ಲಿನ ಶಿಲ್ಪಗಳು**: ನವರಂಗದ ಹೊರಭಾಗದ ಭಿತ್ತಿಯ ಇಕ್ಕೆಲಗಳಲ್ಲಿ ಉಬ್ಬುಶಿಲ್ಪಗಳಿದ್ದು ಬಲಭಾಗದ ಭಿತ್ತಿಯಲ್ಲಿ 8 ಉಬ್ಬು ಶಿಲ್ಪಗಳಿದ್ದು ಅವುಗಳಲ್ಲಿ ವಿಶ್ವಾಮಿತ್ರ ಋಷಿಯನ್ನು ದಶರಥ ಮಹಾರಾಜರು ಬರಮಾಡಿಕೊಳ್ಳುತ್ತಿರುವ ಶಿಲ್ಪ ಎಡಭಾಗದಲ್ಲಿ ರಾಮಲಕ್ಷ್ಮಣ ಭರತ ಶತ್ರುಘ್ನ ಕೌಶಲ್ಯ ಕೈಕೇಯಿ ಸುಮಿತ್ರರವರ ಉಬ್ಬು ಶಿಲ್ಪಗಳಿವೆ. ದೇವಾಲಯದ ಒಳಭಾಗದಲ್ಲಿ ಇತ್ತೀಚಿನ ದಿನಗಳಲ್ಲಿ ಗರ್ಭಗುಡಿ, ಸುಖನಾಸಿ, ಅರ್ಧಮಂಟಪ, ನವರಂಗಗಳಲ್ಲಿ ಗ್ರಾನೈಟ್ ಶಿಲೆಯನ್ನು ಹಾಕಲಾಗಿದೆ ಎಂದು ಈ ದೇವಾಲಯದ ಅರ್ಚಕರಾದ ಡಿ.ಎಸ್.ಗೋಪಾಲಕೃಷ್ಣ ಭಟ್ (ಕಣ್ಣನ್) ಎಂಬುವರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮಾಹಿತಿ ನೀಡಿದರು.

**ಮುಖಮಂಟಪ/ತೆರೆದ ಮಂಟಪ**: ನವರಂಗಕ್ಕೆ ಹೊಂದಿಕೊಂಡು ತೆರೆದ ಮುಖಮಂಟಪವಿದ್ದು ಆಯತಾಕಾರದಲ್ಲಿದ್ದುಎರಡು ಭಾಗಗಳಾಗಿ ರಚನೆಯಾಗಿದೆ ಇದರ ವಿಸ್ತೀರ್ಣವು ಪೂರ್ವ ಪಶ್ಚಿಮ 9 ಅಡಿಗಳು ಮತ್ತು ಉತ್ತರ ದಕ್ಷಿಣ 36 ಅಡಿಗಳಾಗಿರುತ್ತದೆ. (ಚಿ.ಸಂ.66)ಈ ಮಂಟಪದ ಮುಂಭಾಗದ ಅಂಚಿನಲ್ಲಿ ಸಾಲಾಗಿ 4 ಕಂಬಗಳನ್ನು ನಿರ್ಮಿಸಲಾಗಿದೆ. ಇದರಲ್ಲಿ 2 ಸಿಂಹ ಕಂಬಗಳು ಮತ್ತು 2 ಉಪಕಂಬಗಳಿದ್ದು (ಸಂಯುಕ್ತ ಕಂಬಗಳು) ಏಕಶಿಲೆಯಲ್ಲಿ ನಿರ್ಮಾಣವಾಗಿದ್ದು ಬಹಳ ಆಕರ್ಷಣೀಯವಾಗಿದೆ.ಈ 4 ಕಂಬಗಳಲ್ಲಿ 2 ಹಂಸಕಂಬಗಳಾಗಿದ್ದು ಇವುಗಳ ಎತ್ತರ ಪೀಠ ಸೇರಿ 7 ಅಡಿ ಮತ್ತು ಅಗಲ ಸುಮಾರು 3 ಅಡಿಗಳಾಗಿರುತ್ತದೆ.ಈ 4 ಕಂಬಗಳು ಆಕರ್ಷಣೀಯವಾಗಿದೆ. ಮಂಟಪಕ್ಕೆ ಪ್ರವೇಶಿಸುವ ಸೋಪಾನಗಳ ಇಕ್ಕೆಲಗಳಲ್ಲಿ ಇರುವ ಸಿಂಹಕಂಬಗಳಲ್ಲಿ ಪೀಠದ ಮೇಲೆ ಮಂಡಿಯೂರಿ ಕುಳಿತಿರುವ ಆನೆಯ ಮೇಲೆ ಹಿಂಭದಿಯ ಕಾಲನ್ನು ಇಟ್ಟು ಮುಂಬದಿಯ ತನ್ನ ಎರಡು ಕಾಲುಗಳಿಂದ ನೆಗೆಯುತ್ತಿರುವ ಸಿಂಹಶಿಲ್ಪಗಳು ಈ ಸಿಂಹಗಳಿಗೆ ಉದ್ದನೆಯ ಕೇಶ ದೊಡ್ಡಗಾತ್ರದ ಕಣ್ಣು ಇದ್ದು ಈ ಸಿಂಹಗಳ ಮೇಲೆ ಕಿರೀಟ ವಿವಿಧ ಆಭರಣಗಳನ್ನು ಧರಿಸಿ ಒಂದು ಕೈಯಲ್ಲಿ ಖಡ್ಗ ಹಿಡಿದು ಮತ್ತೊಂದು ಕೈಯಲ್ಲಿ ಲಗಾಮು ಹಿಡಿದು ಕುಳಿತಿರುವ ಸವಾರ ಶಿಲ್ಪಗಳು 2 ಪಾರ್ಶ್ವಗಳಲ್ಲಿವೆ. ಈ ಸಿಂಹ ಕಂಬಗಳಲ್ಲಿ ಒಂದು ಕಂಬದಲ್ಲಿ ಒಂದು ಕಡೆ ಹಂಸ ಇದ್ದರೆ ಮತ್ತೊಂದು ಸಿಂಹ ಕಂಬದಲ್ಲಿ ಎರಡು ಕಡೆ ಹಂಸಗಳ ಉಬ್ಬು ಕೆತ್ತನೆಗಳಿವೆ. ಈ ಕಂಬಗಳ ತಳಭಾಗದ ಅಗಲವು ಕಿರಿದಾಗಿದ್ದು ಮೇಲ್ಭಾಗವು ದೊಡ್ಡದಾಗಿದೆ. ಈ ಮಾದರಿಯ ಸಿಂಹಕಂಬಗಳ ಬಳಕೆ ಬಹಳ ವಿರಳವಾಗಿದ್ದು ಈ ಸಿಂಹ ಕಂಬಗಳು ಹಂಪಿಯ ವಿಜಯ ವಿಠಲನ ದೇವಾಲಯದಲ್ಲಿರುವ ಸಿಂಹ ಕಂಬಗಳಂತೆ ಇವೆ. (ಚಿ.ಸಂ.67)ಈ ಸಿಂಹಕಂಬಗಳ ಹಿಂಭಾಗದಲ್ಲಿ ಲಕ್ಷ್ಮಿನರಸಿಂಹ (ಉಗ್ರನರಸಿಂಹ) ಹಯಗ್ರೀವ, ಸಿಂಹಮುಖ, ಗಣೇಶ, ವೀಣಧಾರಿ, ಕಿನ್ನರ, ತನ್ನ ಕಾಲಿನಿಂದ ಮುಳ್ಳು ತೆಗೆಯುತ್ತಿರುವ ಸ್ತ್ರೀ, ಆಂಜನೇಯ, ಮಿಥುನ ಶಿಲ್ಪ ಮುಂತಾದ ಉಬ್ಬುಶಿಲ್ಪಗಳಿವೆ. [55] ಈ ಕಂಬಗಳಲ್ಲಿರುವ ಅತ್ಯಂತ ವಿಶೇಷವಾದ

ಉಬ್ಬು ಶಿಲ್ಪವೆಂದರೆ ಲಕ್ಷ್ಮೀ ನರಸಿಂಹ (ಉಗ್ರನರಸಿಂಹ) ಈ ಶಿಲ್ಪವು ಹಂಪಿಯಲ್ಲಿರುವ ಲಕ್ಷ್ಮೀನರಸಿಂಹ ಶಿಲ್ಪದ ಮಾದರಿಯಲ್ಲಿದೆ.

**ಉಪಕಂಬಗಳು**: ಇನ್ನುಳಿದ 2 ಕಂಬಗಳು ಸಿಂಹ ಶಿಲ್ಪಗಳ ಬದಲಾಗಿ ಉಪಕಂಬಗಳಾಗಿ ರಚನೆಯಾಗಿವೆ. ಇವು ವಿಜಯನಗರ ದೇವಾಲಯಗಳಲ್ಲಿ ಗುರುತಿಸುವ ಸಂಗೀತದ ಕಂಬಗಳಗೆ ಸಮಾನವಾಗಿದೆ. ಏಕಶಿಲೆಯಲ್ಲಿ ಮುಖ್ಯಕಂಬವನ್ನು ಕಂಡರಿಸಿ ಇನ್ನುಳಿದ ಅರ್ಧಭಾಗದಲ್ಲಿ ಒಂದು ಅಥವಾ ಒಂದಕ್ಕಿಂತಲೂ ಹೆಚ್ಚು ಸಂಯಕ್ತ ಕಂಬಗಳನ್ನು ಕಂಡರಿಸಲಾಗಿದೆ. ಈ ಉಪಕಂಬಗಳನ್ನು ಪೀಠದ ಮೇಲೆ ಜೋಡಿಸಲಾಗಿದ್ದು ಮೇಲ್ಭಾಗದಲ್ಲಿ ಪದ್ಮದಳದ ವಿನ್ಯಾಸದ ಚಿಕ್ಕ ಊರ್ಧ್ವ ಪೀಠವಿದೆ.ಇದರ ಮೇಲ್ಭಾಗದಲ್ಲಿ ಭಾರವಾಹಕ ಶಿಲ್ಪವಿದೆ. ವಿಜಯನಗರ ದೇವಾಲಯಗಳಲ್ಲಿ ಅಂದರೆ ಹಂಪಿಯ ವಿಜಯ ವಿಠಲನ ದೇವಾಲಯದಲ್ಲಿ ಕಂಡುಬರುವ ಸಂಗೀತ ಕಂಬಗಳ ಅನುಕರಣೆಯಂತೆ ಇರುವ ಈ ಕಂಬಗಳು ಅಲಂಕಾರಿಕವಾಗಿವೆ. ಈ ಕಂಬಗಳಲ್ಲಿ ಬೆಣ್ಣೆ ಕೃಷ್ಣ, ವೇಣುಗೋಪಾಲ, ನಮಸ್ಕರಿಸುತ್ತಿರುವ ಶಿಲ್ಪ ಮುಂತಾದ ಉಬ್ಬು ಶಿಲ್ಪಗಳಿವೆ.[56] ಮುಖಮಂಟಪದ ಮೇಲ್ಭಾಗದ ದಿಂಡುಗಳಲ್ಲಿಯು ಸಹ ಅಲಂಕಾರಿಕ ಕೆತ್ತನೆಗಳಿವೆ. ಮುಖಮಂಟಪದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಪದ್ಮಪಾದ, ಕಟಕ ವೃತ್ತ, ಕುಮುದ, ಗಳ ಮತ್ತು ಕಪೋತಗಳು ಕಂಡುಬರುತ್ತವೆ. ಅಧಿಷ್ಠಾನದ ನಾಲ್ಕನೆ ಪಟ್ಟಿಯಲ್ಲಿ ಅಲಂಕಾರಿಕ ಕೆತ್ತನೆಗಳಿವೆ.ಮುಖಮಂಟಪದ ಸಜ್ಜಾವು ಸರಳವಾಗಿದ್ದು ಬಾಗಿದ ಆಕಾರದಲ್ಲಿದೆ. ಮಂಟಪಕ್ಕೆ ಪ್ರವೇಶಿಸಲು ಸೋಪಾನಗಳಿವೆ. ಮಂಟಪದ ಕುಂಬಿ ಗೋಡೆಯಲ್ಲಿ 3 ಕೋಷ್ಟಗ:ಳನ್ನು ರಚಿಸಲಾಗಿದ್ದು ಇವುಗಳಲ್ಲಿ ಗಾರೆಯಿಂದ ಮಾಡಿರುವ ವೇಣುಗೋಪಾಲ, ವಿಷ್ಣು, ರಾಮ-ಲಕ್ಷ್ಮಣ-ಸೀತೆಯ ಶಿಲ್ಪಗಳಿವೆ.

**ಪ್ರದಕ್ಷಿಣ ಪಥ**:ದೇವಾಲಯದ ಹೊರಭಾಗದ ಪ್ರಾಂಗಣದಲ್ಲಿ ತೆರೆದ ಪ್ರದಕ್ಷಣ ಪಥವಿದೆ. ತೆರೆದ ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುವಂತೆ ಇಲ್ಲಿಯೂ ಸಹ ಹೊರಭಾಗದಲ್ಲಿ ಪ್ರಕ್ಷಣಾ ಪಥವಿದೆ. ವಿಜಯನಗರ ಕಾಲದ ದೇವಾಲಯಗಳು ಸಾಂದಾರ ಮತ್ತು ನಿರಾಂದಾರ ಶೈಲಿಯ ಪ್ರದಕ್ಷಣ ಪಥವನ್ನು ಹೊಂದಿದ್ದರೆ ಈ ದೇವಾಲಯವು ಕೇವಲ ನಿರಾಂದಾರ ಶೈಲಿಯ ಪ್ರದಕ್ಷಿಣ ಪಥವನ್ನು ಹೊಂದಿದೆ.

**ಅಧಿಷ್ಠಾನ**: ದೇವಾಲಯವು ಮಂಚಬಂಧ ಅಧಿಷ್ಠಾನವನ್ನು ಹೊಂದಿದ್ದು ಅಧಿಷ್ಠಾನವು ಉಪಾನ, ಜಗತಿ, ಕುಮುದ ಮತ್ತು ಕಪೋತಗಳಿಂದ ಕೂಡಿದೆ.

**ಭಿತ್ತಿ:** ಭಿತ್ತಿಯಲ್ಲಿ ರಾಮಾಯಣದ ದೃಶ್ಯಗಳನ್ನು ಉಬ್ಬು ಶಿಲ್ಪಗಳ ಮೂಲಕಕಂಡರಿಸಲಾಗಿದೆ.ಭಿತ್ತಿಯ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಬಾಲಕಾಂಡದ ಕಥಾನಕ ಶಿಲ್ಪಗಳಿವೆ. ರಾಮಾಯಣದ ಕಥನ ಶಿಲ್ಪಗಳನ್ನು ನವರಂಗ, ಅರ್ಧಮಂಟಪ, ಅಂತರಾಳ, ಗರ್ಭಗುಡಿಗಳ ಹೊರಭಾಗದ ಭಿತ್ತಿಯಲ್ಲಿ ಸಾಲಾಗಿ ಕೆತ್ತಲಾಗಿದೆ.ಈ ಶಿಲ್ಪ ಸಾಲುಗಳನ್ನು ಅಧಿಷ್ಠಾನದ ಮೇಲ್ಭಾಗದಿಂದ ಪ್ರಾರಂಭವಾಗುವ ಭಿತ್ತಿಯಲ್ಲಿ ರಚಿಸಲಾಗಿದೆ.ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ವಿಶ್ವಮಿತ್ರರೊಂದಿಗೆ ರಾಮಲಕ್ಷ್ಮಣ, ವಿಶ್ವಮಿತ್ರ ಯಾಗಕ್ಕೆ ರಾಮಲಕ್ಷಣರಿಂದ ರಕ್ಷಣೆ, ಅಹಲ್ಯ ಶಾಪ ವಿಮೋಚನೆ, ಸೀತಾ ಸ್ವಯಂವರ, ಆಂಜನೇಯ, ಲಕ್ಷ್ಮೀ ನರಸಿಂಹ, ಕೃಷ್ಣ ಮೊಸರು ಕಡೆಯುತ್ತಿರುವ ಶಿಲ್ಪ ಮುಂತಾದ ಕಥನಗಳನ್ನು ಉಬ್ಬುಶಿಲ್ಪಗಳ ಮೂಲಕ ಬಿಡಿಸಲಾಗಿದೆ. (ಚಿ.ಸಂ.68)

ಪಶ್ಚಿಮದ ಭಿತ್ತಿಯಲ್ಲಿ ವಾಲಿ-ಸುಗ್ರೀವ, ಋಷಿಮುನಿಗಳ ಉಬ್ಬು ಶಿಲ್ಪಗಳಿವೆ. ಉತ್ತರದ ಭಿತ್ತಿಯಲ್ಲಿ ಋಷ್ಯಶೃಂಗ ಮಹರ್ಷಿಯನ್ನು ಅಯೋಧ್ಯೆಗೆ ನೃತ್ಯಗಾರ್ತಿಯರು ಕರೆತರುತ್ತಿರುವುದು, ದಶರಥ ಮಹಾರಾಜನು ಋಷ್ಯಶೃಂಗ ಮುನಿಯ ಸಹಾಯದಿಂದ ಪುತ್ರಕಾಮೇಷ್ಠಿಯಾಗ ಯಾಗ ಮಾಡುತ್ತಿರುವುದು, ದಶರಥನು ಪ್ರಸಾದವನ್ನು ರಾಣಿಯರಿಗೆ ಹಂಚುತ್ತಿರುವುದು.ಕಾಳಿಂಗ ಮರ್ಧನ, ಬಾಲಕಾಂಡ, ವಿಷ್ಣುವಿನ ದಶವಾತಾರಗಳು ಮುಂತಾದ ಕಥನಗಳನ್ನು ಉಬ್ಬುಶಿಲ್ಪಗಳ ಮೂಲಕ ಕಂಡರಿಸಲಾಗಿದೆ.ಭಿತ್ತಿ ಮೇಲಿನ ಕಪೋತ ಅದರ ನಂತರ ಕೈಪಿಡಿ ಗೋಡೆಯನ್ನು ಜೀರ್ಣೋದ್ಧಾರ ಮಾಡಿ ದೇವಕೋಷ್ಠಗಳನ್ನು ರಚಿಸಲಾಗಿದೆ.

ಮುಖ್ಯಗರ್ಭಗುಡಿಯ ಮೇಲೆ ವಿಜಯನಗರ ಶೈಲಿಯ ದ್ರಾವಿಡ ಶಿಖರವಿದ್ದು ಸುಮಾರು 20 ಅಡಿ ಎತ್ತರವಾಗಿದ್ದು ಇದನ್ನು ಹೊಸದಾಗಿ ಜೀರ್ಣೋದ್ಧಾರ ಮಾಡಲಾಗಿದೆ.ಈ ಶಿಖರದಲ್ಲಿ ಗಾರೆಯ ಉಬ್ಬು ಶಿಲ್ಪಗಳಿವೆ.ಮುಖಮಂಟಪದ ಮುಂಭಾಗದಲ್ಲಿ ಮುಖ್ಯ ಗರ್ಭಗುಡಿಗೆ ಎದುರಾಗಿ ಗರುಡನ ಗುಡಿಯಿದೆ.ಸಮಭಂಗಿಯಲ್ಲಿರುವ ಗರುಡನು ತನ್ನ ರೆಕ್ಕೆಗಳನ್ನು ತೆರೆದುಕೊಂಡು ತನ್ನ ಎರಡು ಕೈಗಳನ್ನು ಎದೆಯ ಭಾಗಕ್ಕೆ ತಂದು ನಮಸ್ಕರಿಸುತ್ತಿರುವುದುವಿಶೇಷವಾಗಿದೆ.ಇದರ ಮೇಲ್ಭಾಗದಲ್ಲಿ ದೇವಾಲಯದ ಮೇಲೆ ಕಂಡುಬರುವ ಸ್ತೂಪಿ ಮತ್ತು ಅದರ ಮೇಲೆ 3 ಕಳಶಗಳನ್ನು ಇಡಲಾಗಿದೆ.

**ಪ್ರಾಕಾರ:** ದೇವಾಲಯದ ಪ್ರಾಕಾರವು ಆಯಾತಾಕಾರದಲ್ಲಿದ್ದು ಇದರ ಒಳಾಂಗಣದಲ್ಲಿ ಮುಖಮಂಟದ ಮುಂಭಾಗದಲ್ಲಿ ಗರ್ಭಗುಡಿಯ ನೇರಕ್ಕೆ ಗರುಡಗಂಬ, ಧ್ವಜಸ್ತಂಬ ಮತ್ತು ಬಲಿಪೀಠಗಳಿವೆ.

**ಗರುಡ ಗಂಭ**: ಪಾತಾಳಂಕಣದಲ್ಲಿ ಮೂರುವರೆ ಅಡಿ ಚೌಕಾಕಾರದ ಪೀಠದ ಮೇಲೆ ಸುಮಾರು 25 ಅಡಿ ಎತ್ತರದ ಕಲ್ಲಿನ ಕಂಬವಿದ್ದು ಅದನ್ನು ಹಿತ್ತಾಳೆಯ ಕವಚದಿಂದ ಮುಚ್ಚಲಾಗಿದೆ. (ಚಿ.ಸಂ.69)ಪಾತಾಳಂಕಣದಲ್ಲಿ ಎಡ ಮತ್ತು ಬಲ ಭಾಗದಲ್ಲಿ 2 ಮಂಟಪಗಳಿದ್ದು ಬಲಭಾಗದ ಮಂಟಪದ ಗೋಡೆಯಲ್ಲಿ ಗ್ರಾನೈಟ್ ಶಿಲೆಯಿಂದ ಕೆತ್ತಿರುವ ವೈಷ್ಣವ ಚಿಹ್ನೆಗಳಾದ ಶಂಖ, ಚಕ್ರಗಳನ್ನೊಂದಿರುವ ಶಾಸನವಿದೆ.[57] ಈ ಶಿಲಾ ಶಾಸನದಲ್ಲಿ ಈ ದೇವಾಲಯಕ್ಕೆ ದತ್ತಿ ನೀಡಿದ ವಿವರಗಳಿವೆ. ಹಿಂಬದಿಯ ಪ್ರಾಕಾರದಲ್ಲಿ ಕಂಬಗಳಿಂದ ನಿರ್ಮಿಸಿದ ಕೈಸಾಲೆಯಿದೆ.

**ದ್ವಾರಮಂಟಪ ಮತ್ತು ದ್ವಾರ ಗೋಪುರ**: ವಿಜಯನಗರ ಶೈಲಿಯ ದ್ವಾರಮಂಟಪವಿದ್ದು ಅದು 12 ಅಡಿ ಎತ್ತರ 18 ಅಡಿ ಉದ್ದ ಮತ್ತು 8 ಅಡಿ ಅಗಲವನ್ನು ಹೊಂದಿದೆ. ಮಂಚಬಂದ ಅಧಿಷ್ಠಾನವಿದೆ.ದ್ವಾರಮಂಟಪದ ಭಿತ್ತಿಯಲ್ಲಿ ಕುಂಭಪಂಜರಗಳ ಕೆತ್ತನೆ ಇದ್ದು ಸ್ತಂಭಪಂಜರಗಳು ಹಂಪಿಯ ವಿಠಲನ ಗುಡಿಯ ಹಿಂಭಾಗದ ಭಿತ್ತಿಯಲ್ಲಿರುವ ಸ್ತಂಭಪಂಜರಗಳನ್ನು ಹೋಲುತ್ತವೆ.ದ್ವಾರಶಾಖೆಯು ಅಲಂಕಾರಿಕ ಪಟ್ಟಿಕೆಗಳು ಮತ್ತು ಬಳ್ಳಿ ಸುರುಳಿಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪ ಹೊಂದಿದೆ. ದ್ವಾರಶಾಖೆಯ ಕೆಳಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿದ್ದು ಅವುಗಳು ಪ್ರಭಾವಳಿ ಮತ್ತು ಕೀರ್ತಿಮುಖ ಹೊಂದಿದೆ.ದ್ವಾರಶಾಖೆಯ ಪಾರ್ಶ್ವಗಳಲ್ಲಿ ಬಳ್ಳಿ ಸುರುಳಿಯ ಅಲಂಕಾರಿಕ ಕೆತ್ತನೆಯಿದ್ದು ಅದರ ಕೆಳಗಡೆ ನಿಂತಿರುವ ಭಂಗಿಯಲ್ಲಿರುವ ಗಂಗಾ-ಯಮುನ ಶಿಲ್ಪಗಳಿವೆ. ಅವುಗಳ ಮೇಲೆ ಲತಾಸುರುಳಿ ಬಳ್ಳಿಗಳಿವೆ. ಮಂಟಪದ ಪೂರ್ವ ಮತ್ತು ಪಶ್ಚಿಮ ಭಿತ್ತಿಯಲ್ಲಿ 6 ಕುಂಭಪಂಜರಗಳಿವೆ.

**ದ್ವಾರಗೋಪುರ**: ದ್ವಾರಮಂಟಪದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಗೋಪುರವಿದ್ದು ಇದನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದ್ದು ಗಾರೆಯ ಉಬ್ಬು ಶಿಲ್ಪಗಳಿವೆ ಮೇಲ್ಭಾಗದಲ್ಲಿ ಕೀರ್ತಿಮುಖಗಳಿಂದ ಕೂಡಿದ ಉದ್ದನೆಯ ಸ್ತೂಪಿ ಅದರ ಮೇಲೆ 5 ಕಳಸಗಳ ಕೋಷ್ಟ (ಜಾಲಾಂಧ್ರ) ವಿದೆ.ದ್ವಾರಮಂಟಪದ ಮುಂಬದಿಯ ಇಕ್ಕೆಲಗಳಲ್ಲಿ ಸುಮಾರು ಒಂದೂವರೆ ಮೀ.ಎತ್ತರದ ಎರಡು ವಿಷ್ಣು ಶಿಲ್ಪಗಳಿವೆ. ಇವು ಪ್ರಾಚೀನ ಗಂಗರ ಶೈಲಿಯಲ್ಲಿವೆ. (ಚಿ.ಸಂ.70) ಇವು ಮೂಲತಹ ಗಂಗವಾರ ಗ್ರಾಮದಲ್ಲಿದ್ದು ಇವುಗಳನ್ನು ದೇವನಹಳ್ಳಿಯ ಈ ದೇವಾಲಯಕ್ಕೆ ತರಲಾಗಿದೆ.ಅವು ಪಲ್ಲವರ ಶಿಲ್ಪದ ಪ್ರಭಾವವನ್ನು ತೋರುತ್ತವೆ[58] ದ್ವಾರದ ಮುಂಭಾಗದಲ್ಲಿ ಎರಡು ಪಾರ್ಶ್ವಗಳಲ್ಲಿ ಮಕರ ಸೋಪಾನವಿದೆ.ಮಕರ ಸೋಪಾನದ ನಂತರ ಮೆಟ್ಟಿಲುಗಳ ಬಳಿ ಇಕ್ಕೆಲಗಳಲ್ಲಿ ಎರಡು ಗಜ ಶಿಲ್ಪಗಳಿವೆ.

**ದ್ವಾರದ ಎಡ ಮತ್ತು ಬಲ ಭಾಗದ ಮಂಟಪಗಳು**: ದ್ವಾರದ ಬಲಭಾಗದಲ್ಲಿ ಸಾಧಾರಣ ನಾಲ್ಕು ಕಂಬಗಳನ್ನು ಹೊಂದಿರುವ ಮಂಟಪವಿದ್ದು ಇದರಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಇದು ಬಹುಶಃ ಯಾತ್ರಾರ್ಥಿಗಳು ತಂಗಲು ಮಾಡಿರುವ ಸ್ಥಳವಾಗಿದೆ. ಈ ಮಂಟಪದ ಮೇಲೆ ಒಂದು ಕೋಷ್ಠವನ್ನು ಮಾಡಲಾಗಿದ್ದು ಇದರಲ್ಲಿ ಸೀತಾ ರಾಮ ಕಲ್ಯಾಣದ ಶಿಲ್ಪವಿದೆ.ದ್ವಾರದ ಎಡಭಾಗದಲ್ಲಿ ವಿಜಯನಗರ ಶೈಲಿಯ 4 ಕಂಬಗಳನ್ನು ಹೊಂದಿರುವ ಮಂಟಪವಿದ್ದು ಈ ಮಂಟಪದ ಮೇಲಿನ ಕೋಷ್ಟದಲ್ಲಿ ಹಾವಿನ ಹೆಡೆಯ ಮೆಲೆ ಮಲಗಿರುವ ಶ್ರೀಲಕ್ಷ್ಮೀ ರಂಗನಾಥ ಶಿಲ್ಪವಿದೆ.

**ಉಯ್ಯಾಲೆ ಮಂಟಪ**: ಶ್ರೀವೇಣುಗೋಪಾಲಸ್ವಾಮಿ ದೇವಾಲಯ ದ್ವಾರದ ಮುಂಭಾಗದಲ್ಲಿ ಸುಮಾರು 12 ಅಡಿ ಎತ್ತರದ ನಾಲ್ಕು ಕಂಬಗಳಿಂದ ಕೂಡಿದ ಉಯ್ಯಾಲೆ ಮಂಟಪವಿದ್ದು ಮಂಟಪದ ಕಂಬಗಳು ಚೌಕ, ಷೋಡಶ ಮತ್ತು ಚೌಕದ ಮಾದರಿಯಲ್ಲಿದೆ. ಕಂಬಗಳ ಮೇಲ್ಭಾಗದಲ್ಲಿ ವರ್ತುಲಾಕಾರದ ವಿನ್ಯಾಸ ಪೀಠ ಮತ್ತು ತರಂಗ ಆಕಾರದ ಬೋದಿಗೆ ಇದೆ.ಬೋದಿಗೆಯ ಮೇಲೆ ನಕ್ಷತ್ರಾಕಾರದ ಭುವನೇಶ್ವರಿಯಿದ್ದು ಮಧ್ಯಭಾಗದಲ್ಲಿ ವೃತ್ತಕಾರದ ಪದ್ಮದಳ ಕೆತ್ತನೆ ಇದ್ದು ಮಂಟಪದ ಮೇಲ್ಭಾಗದಲ್ಲಿ ಚಿಕ್ಕಗಾತ್ರದ ದ್ರಾವಿಡ ಶೈಲಿಯ ಶಿಖರವಿದೆ.ದೇವಾಲಯದ ಗೋಪುರ ದ್ವಾರದ ಹೊರ ಭಾಗದಲ್ಲಿ ಇದನ್ನು ನಿರ್ಮಿಸಲಾಗಿದ್ದು ಇದು ಆಕರ್ಷಕವಾಗಿದೆ.ಈ ಉಯ್ಯಾಲೆ ಮಂಟಪವು ಆವತಿಯ ಚನ್ನಕೇಶವ ದೇವಾಲಯದ ಮುಂಭಾಗದಲ್ಲಿರುವ ಉಯ್ಯಾಲೆ ಮಂಟಪ ಹಾಗೂ ಗೋಣೂರು ಜಿ. ಹೊಸಹಳ್ಳಿ ಗ್ರಾಮದಲ್ಲಿರುವ ಉಯ್ಯಾಲೆ ಮಂಟಪವನ್ನು ಹೋಲುತ್ತದೆ.

**ಚನ್ನಕೇಶವ ದೇವಾಲಯ-ಆವತಿ**

ಆವತಿ ದೇವನಹಳ್ಳಿ ತಾಲೂಕಿನ ಕಸಬಾ ಹೋಬಳಿಗೆ ಸೇರಿದ ಒಂದು ಗ್ರಾಮವಾಗಿದ್ದು, ಬೆಂಗಳೂರು-ಹೈದ್ರಾಬಾದ್ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 7ರಲ್ಲಿದೆ. ಆವತಿ ಗ್ರಾಮವು ಬೆಟ್ಟದ ತಪ್ಪಲಿನಲ್ಲಿದ್ದು ದೇವನಹಳ್ಳಿಯಿಂದ ಉತ್ತರಕ್ಕೆ ಸುಮಾರು 4 ಕಿ.ಮೀ. ದೂರದಲ್ಲಿದೆ ಸ್ಥಳೀಯರುನೀಡಿದ ಮಾಹಿತಿಯಂತೆ ಆವತಿ ಗ್ರಾಮವು ಈ ಹಿಂದೆ ಹಾವು-ಹತ್ತಿ ಎಂದು ಹೆಸರಾಗಿದ್ದು ಕಾಲಕ್ರಮೇಣ ಆವುತಿ ನಂತರ ಆವತಿ ಎಂದು ಅಪಭ್ರಂಶ ಹೊಂದಿತು.ಆವತಿ ಮೂಲತಃ ಆವತಿ ನಾಡಪ್ರಭುಗಳ ಮೂಲಸ್ಥಾನ ಎಂದು ಕರೆಯಲ್ಪಟ್ಟಿದೆ.ಸ್ಥಳೀಯ ಚರಿತ್ರೆಯ ಪ್ರಕಾರ ರಣಭೈರೆಗೌಡ ಎಂಬುವನು ಕಂಚಿ ಬಳಿಯ ಎಣಮಂಜಿ ಪುತ್ತೂರಿನಿಂದ ತನ್ನ ಕುಟುಂಬ ಸಮೇತ ಆಗಮಿಸಿ ಆವತಿಗೆ ಬಂದು ನೆಲೆಸಿದನು ಮತ್ತು ಆವತಿಯಲ್ಲಿ ತನ್ನದೇ ಆದ ಪ್ರಭುತ್ವವನ್ನು ಸ್ಥಾಪಿಸಿದನು.ಆವತಿ ನಾಡಪ್ರಭು ಮಲ್ಲಭೈರೇಗೌಡನ ವಂಶಕ್ಕೆ ಸೇರಿದವರು ಕಾಲಕ್ರಮೇಣ

ಬೆಂಗಳೂರು, ಯಲಹಂಕ ಸುಗಟೂರು ಮುಂತಾದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದರು.ಆವತಿ ನಾಡಪ್ರಭುಗಳ ಕಾಲದಲ್ಲಿ ಹಲವಾರು ದೇವಾಲಯಗಳು ಆವತಿ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ನಿರ್ಮಾಣವಾದವು, ಅವುಗಳೆಂದರೆ ಚನ್ನಕೇಶವ, ಆಂಜನೇಯ ಮತ್ತು ಈಶ್ವರ ದೇವಾಲಯಗಳು ಮುಖ್ಯವಾದವುಗಳು.ಚನ್ನಕೇಶವ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು ಉತ್ತರ ದಿಕ್ಕಿಗಿದೆ.ಈ ದೇವಾಲಯವನ್ನು ರಣಭೈರೆಗೌಡನ ಕಾಲದಲ್ಲಿ ನಿರ್ಮಿಸಲಾಯಿತು.[59] ಇದುಏಕಕೂಟ ದೇವಾಲಯವಾಗಿದ್ದು ವಿಜಯನಗರ ಕಾಲದ ವಾಸ್ತುಶೈಲಿಯ ಲಕ್ಷಣಗಳನ್ನು ಹೊಂದಿದ್ದು ಗರ್ಭಗುಡಿ, ಅಂತರಾಳ, ನವರಂಗ ಮತ್ತು ಆಯತಾಕಾರದ ಮುಖಮಂಟಪಗಳನ್ನು ಹೊಂದಿದ್ದು ಪ್ರಸ್ತುತ ಜೀರ್ಣೋದ್ಧಾರಗೊಂಡಿದೆ.

**ಗರ್ಭಗುಡಿ:** ಗರ್ಭಗುಡಿಯು ಚೌಕಕಾರವಾಗಿದ್ದು ಗರ್ಭಗುಡಿಯಲ್ಲಿ ಚನ್ನಕೇಶವ ಸಮೇತ ಶ್ರೀದೇವಿ–ಭೂದೇವಿ ಮೂಲವಿಗ್ರಹಗಳಿದ್ದು ಗರ್ಭಗೃಹದ ದ್ವಾರದ ಬಾಗಿಲುವಾಡದಲ್ಲಿ ವೈಷ್ಣವ ದ್ವಾರಪಾಲಕರ ಚಿಕ್ಕಗಾತ್ರದ ಉಬ್ಬುಶಿಲ್ಪಗಳಿವೆ. ಗರ್ಭಗೃಹದ ಮುಖ್ಯದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ವಿಷ್ಣುವಿನ ದಶಾವಾತಾರಗಳನ್ನು ಕೆತ್ತಲಾಗಿದೆ.ದ್ವಾರಪಾಲಕರಾದ ಜಯವಿಜಯರ ಶಿಲ್ಪಗಳನ್ನು ಸೇರಿಸಿ ಪಂಚಲೋಹದಲ್ಲಿ ಕವಚವನ್ನು ಮಾಡಿ ಮುಚ್ಚಲಾಗಿದೆ. (ಚಿ.ಸಂ.71) ಈ ದೇವಾಲಯವು ಮೂಲತ ಪುರಾತನ ದೇವಾಲಯವಾಗಿದ್ದು ಇತ್ತೀಚಿನ ದಿನಗಳಲ್ಲಿ ನವೀಕರಿಸಲಾಗಿದೆ.ದೇವಾಲಯದಲ್ಲಿ ಸುಖನಾಸಿಯು ಕಂಡುಬರುವುದಿಲ್ಲ.

**ನವರಂಗ:** ನವರಂಗವು ಚೌಕಕಾರವಾಗಿದ್ದುನವರಂಗದ ಮಧ್ಯದಲ್ಲಿನ ನಾಲ್ಕು ಕಂಬಗಳು ಸರಳವಾಗಿದ್ದು ಯಾವುದೇ ಅಲಂಕಾರಿಕ ಕೆತ್ತನೆಗಳನ್ನು ಹೊಂದಿಲ್ಲ. ನವರಂಗದ ದ್ವಾರವು ಮೂರು ಅಲಂಕಾರಿಕ ಪಟ್ಟಿಕೆಗಳಿಂದ ಕೂಡಿದ್ದು ದ್ವಾರದ ಬಾಗಿಲುವಾಡದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ.

**ಮುಖಮಂಟಪ:**ನವರಂಗಕ್ಕೆ ಹೊಂದಿಕೊಂಡಂತೆ ತೆರೆದ ಮುಖಮಂಟಪವಿದ್ದು ಆಯತಾಕಾರವಾಗಿದೆ. ಇಲ್ಲಿ ನಾಲ್ಕು ಕಂಬಗಳಿದ್ದುಇವುಗಳಲ್ಲಿ ಎರಡು ಕಡೆಯ ಕೊನೆಯ ಕಂಬಗಳನ್ನು ಹೊಸದಾಗಿ ನಿರ್ಮಿಸಿದ ಗೋಡೆಗೆ ಸೇರಿಸಲಾಗಿದ್ದು ಈ ಮಂಟಪದ ಕಂಬಗಳು ಸರಳವಾಗಿದ್ದು ಒಂದು ಕಂಬದಲ್ಲಿ ಆಂಜನೇಯನ ಶಿಲ್ಪವಿದೆ.ಮುಖಮಂಟಪದ ಎದುರಿಗೆ ಧ್ವಜಸ್ತಂಭ ಮತ್ತು ಬಲಿಪೀಠವಿದೆ.

**ಉಯ್ಯಾಲೆ ಮಂಟಪ:**ಇದು ಚನ್ನಕೇಶವ ದೇವಾಲಯದ ಮುಂಭಾಗದಲ್ಲಿದ್ದು ಈ ಉಯ್ಯಾಲೆ ಮಂಟಪವನ್ನು ಎತ್ತರವಾದ 4 ಕಂಬಗಳಿಂದ ನಿರ್ಮಿಸಲಾಗಿದೆ.4 ಕಂಬಗಳು 5

ಮೀ.ಎತ್ತರವಾಗಿದ್ದು ಸುಮಾರು ಅರ್ಧ ಮೀ.ದಪ್ಪವಾಗಿದ್ದು ಚೌಕ ಅಷ್ಟ ಮಾದರಿ ಮತ್ತು ಬೋದಿಗೆಯನ್ನು ಹೊಂದಿವೆ. (ಚಿ.ಸಂ.72)ಕಂಬಗಳಲ್ಲಿ ಲಜ್ಜೆಗೌರಿ, ನರ್ತಕಿ, ದ್ವಾರಪಾಲಕ, ಆಂಜನೇಯ ಮುಂತಾದ ಉಬ್ಬುಶಿಲ್ಪಗಳಿವೆ. ಮಂಟಪದ ಮೇಲ್ಛಾವಣಿಯಲ್ಲಿ ಭುವನೇಶ್ವರಿ ಕೆತ್ತನೆ ಇದೆ. ಈ ಮಂಟಪದ ಮೇಲೆ ಇತ್ತೀಚೆಗೆ ನಿರ್ಮಿಸಿರುವ ಚೌಕಾಕಾರದ ಶಿಖರವಿದೆ.ಉಯ್ಯಾಲೆ ಮಂಟಪದಲ್ಲಿ ಉತ್ಸವಗಳನ್ನು ಆಚರಿಸಲಾಗುತ್ತಿದೆ.ಇದೇ ವಿನ್ಯಾಸದ ಉಯ್ಯಾಲೆ ಮಂಟಪವನ್ನು ದೇವನಹಳ್ಳಿಯ ಶ್ರೀವೇಣುಗೋಪಾಲಸ್ವಾಮಿ ದೇವಾಲಯದ ಮುಂಭಾಗದಲ್ಲಿ ಇರುವುದನ್ನು ಕಾಣಬಹುದಾಗಿದೆ.

**ಸೌಮ್ಯಕೇಶವ/ಚನ್ನಕೇಶವ ದೇವಾಲಯ–ವಿಜಯಪುರ:**

ಇದೊಂದು ವೈಷ್ಣವ ದೇವಾಲಯವಾಗಿದ್ದು ಏಕಕೂಟ ದೇವಾಲಯವಾಗಿದೆ.ಈ ದೇವಾಲಯವು ವಿಜಯಪುರ ಪಟ್ಟಣದ ಮಧ್ಯಭಾಗದಲ್ಲಿದ್ದು ಪೂರ್ವಾಭಿಮುಖವಾಗಿದ್ದು ಮೈಸೂರು ಒಡೆಯರ್ ಕಾಲದ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದೆ.ಈ ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ನಿರ್ಮಿಸಲ್ಪಟ್ಟಿತು.ಆವತಿ ನಾಡಪ್ರಭುಗಳು ಈ ದೇವಾಲಯಕ್ಕೆ ಹಲವಾರು ದತ್ತಿಗಳನ್ನು ನೀಡಿದ್ದಾರೆ.ಈ ದೇವಾಲಯವು ಕಾಲಕಾಲಕ್ಕೆ ವಿಸ್ತರಣೆ ಮತ್ತು ಜೀರ್ಣೋದ್ಧಾರಗೊಂಡಿದೆ.ಈ ದೇವಾಲಯದಲ್ಲಿ ಗರ್ಭಗುಡಿ, ಸುಖನಾಸಿ, ನವರಂಗ, ಮುಖಮಂಟಪ, ದ್ವಾರಮಂಟಪ ಮತ್ತು ಗೋಪುರಗಳಿವೆ. (ಚಿ.ಸಂ73) ಈ ದೇವಾಲಯವು ಎರಡು ಮುಖಮಂಟಪಗಳನ್ನು ಹೊಂದಿದ್ದು ಒಳಮುಖಮಂಟಪವು ವಿಜಯನಗರ ಶೈಲಿಯ ಕಂಬಗಳನ್ನು ಹೊಂದಿದ್ದು ಕಂಬಗಳಲ್ಲಿ ಸುಂದರವಾದ ಉಬ್ಬು ಕೆತ್ತನೆಗಳನ್ನು ಕಂಡರಿಸಲಾಗಿದೆ. ಹೊರಮುಖಮಂಟಪವನ್ನು ಬಹುಶಃ ಮೈಸೂರು ಅರಸರು ಸೇರ್ಪಡೆಗೊಳಿಸಿದ್ದು ಕಂಬಗಳಲ್ಲಿ ದಶಾವತಾರ ಶಿಲ್ಪಗಳು ಮತ್ತು ಬುದ್ಧನ ಶಿಲ್ಪವನ್ನು ಒಳಗೊಂಡಿದೆ.[60]

**ಗರ್ಭಗುಡಿ**:ಗರ್ಭಗುಡಿಯು ಚೌಕಾಕಾರವಾಗಿದ್ದು ಉದ್ದ 8 ಅಡಿ ಮತ್ತು ಅಗಲ 8 ಅಡಿಗಳನ್ನು ಹೊಂದಿದೆ.ಗರ್ಭಗೃಹದಲ್ಲಿ ಸಮಭಂಗಿಯಲ್ಲಿ ನಿಂತಿರುವ ಸುಮಾರು 3 ಅಡಿ ಎತ್ತರದ ಚನ್ನಕೇಶವ ಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ.ಈತನು 4 ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಪದ್ಮ ಮತ್ತು ವರದ ಹಸ್ತವನ್ನು ಹೊಂದಿದ್ದಾನೆ. ಚನ್ನಕೇಶವನ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿ ಶಿಲ್ಪಗಳಿವೆ. ಗರ್ಭಗುಡಿಯ ದ್ವಾರವು ಸರಳವಾಗಿದ್ದು ಯಾವುದೇ ಅಲಂಕಾರಿಕ ಕೆತ್ತನೆಗಳು ಕಂಡು ಬಂದಿರುವುದಿಲ್ಲ.

**ಸುಖನಾಸಿ**: ಸುಖನಾಸಿಯು ಚೌಕಾಕಾರವಾಗಿದ್ದು ಸುಮಾರು ಉದ್ದ 8 ಅಡಿ ಮತ್ತು ಅಗಲ 8 ಅಡಿಗಳನ್ನು ಹೊಂದಿದೆ. ಸುಖನಾಸಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಸುಖನಾಸಿಯು ದ್ವಾರವು ಸರಳವಾಗಿದ್ದು ಇತ್ತೀಚಿಗೆ ಪಂಚಲೋಹಗಳ ಲೇಪನ ಮಾಡಲಾಗಿದೆ.ಸುಖನಾಸಿಯ ದ್ವಾರದ ಮಧ್ಯದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಬಲಪಾರ್ಶ್ವದಲ್ಲಿ ಶಂಖ, ಮತ್ತು ಎಡಪಾರ್ಶ್ವದಲ್ಲಿ ಚಕ್ರ, ಹಾಗೂ ಕೆಳಭಾಗದಲ್ಲಿ ಸುಮಾರು 8 ಅಡಿ ಎತ್ತರ ಸೌಮ್ಯರೀತಿಯಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳನ್ನು ಕಂಡರಿಸಲಾಗಿದೆ.ಕೀರ್ತಿಮುಖದ ಹೂಬಳ್ಳಿ ಕೆತ್ತನೆಯಲ್ಲಿ ಎಡಪಾರ್ಶ್ವಕ್ಕೆ ಆಂಜನೇಯ ಬಲ ಪಾರ್ಶ್ವದಲ್ಲಿ ಭಕ್ತಿಯಿಂದ ಕೈಬೀಸಿ ರೆಕ್ಕೆ ಬಿಚ್ಚಿರುವ ಮಾನವ ಸ್ವರೂಪದ ಗರುಡ ಶಿಲ್ಪವಿದ್ದು ಆಂಜನೇಯನ ಮಧ್ಯಭಾಗದಲ್ಲಿ ಶಂಖ ಮತ್ತು ಮೇಲ್ಭಾಗದಲ್ಲಿ ಚಕ್ರ ಹಾಗೂ ಎರಡು ಪಾರ್ಶ್ವಗಳ ಮೇಲ್ಭಾಗದಲ್ಲಿ ಹೂಗಳಿವೆ.

**ನವರಂಗ**: ನವರಂಗವು ಚೌಕಾಕಾರವಾಗಿದ್ದು ಉದ್ದ 18 ಅಡಿ ಮತ್ತು ಅಗಲ 15 ಅಡಿಗಳನ್ನು ಹೊಂದಿದೆ.ನವರಂಗದಲ್ಲಿ 6.9 ಅಡಿ ಎತ್ತರದ 4 ಕಂಬಗಳಿದ್ದು ಕಂಬಗಳು ಚೌಕ ಅಷ್ಟ ಷೋಡಷ ಮಾದರಿಯಲ್ಲಿದ್ದು ಕಂಬಗಳ ಮೇಲ್ಭಾಗದ ಬೋದಿಗೆಗಳು ಹೊರಚಾಚಿ ಬಾಗಿರುತ್ತದೆ.ಅದರಲ್ಲಿ ಕಮಲದ ಹೂವಿನ ಮೊಗ್ಗನ್ನು ಕಾಣಬಹುದಾಗಿದೆ.ಕಂಬಗಳ ಕೆಳಭಾಗವು ಚೌಕಾಕಾರವಾಗಿದ್ದು ಮಧ್ಯಭಾಗವು ವೃತ್ತಾಕಾರವಾಗಿದೆ.ಕಂಬಗಳಲ್ಲಿ ಸಿಂಹ, ನರ್ತಕಿಯರು, ಕಾಳಿಂಗಮರ್ಧನ, ವೇಣುಗೋಪಾಲ, ವಿಷ್ಣು, ಲಕ್ಷ್ಮಿ, ರಾಮಲಕ್ಷ್ಮಣ, ಆಂಜನೇಯ, ಸರ್ಪಬಂಧ, ಕಾಮಧೇನು, ನವಿಲು, ಪದ್ಮ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಈ ಉಬ್ಬು ಶಿಲ್ಪಗಳಲ್ಲಿ ಕೆಲವು ಶಿಲ್ಪಗಳನ್ನು ಉದಾಹರಿಸುವುದಾದರೆ ಗಣಪತಿ ವಿಷ್ಣು ಮತ್ತು ಲಕ್ಷ್ಮೀಯನ್ನು ತನ್ನ ತೊಡೆಯ ಮೇಲೆ ಕುಳರಿಸಿಕೊಂಡಿರುವುದು ನಾಲ್ಕು ಕೈಗಳನ್ನು ಹೊಂದಿರುವ ಕೃಷ್ಣನು ತನ್ನ ಎರಡು ಕೈಗಳಲ್ಲಿ ಕೊಳಲನ್ನು ಮತ್ತೆರೆಡು ಕೈಗಳಲ್ಲಿ ಶಂಖ, ಚಕ್ರ ಹಿಡಿದಿರುವ ಉಬ್ಬು ಶಿಲ್ಪ, ಕಾಳಿಂಗ ಮರ್ಧನ, ಶ್ರೀಕೃಷ್ಣನ ಬಾಲ್ಯ ಲೀಲೆಗಳು ಬೆಣ್ಣೆ ಕದಿಯುತ್ತಿರುವ ಕೃಷ್ಣನು ಗೋಪಿಕೆಯರಿಗೆ ತೊಂದರೆ ಕೊಡುತ್ತಿರುವ ಉಬ್ಬು ಶಿಲ್ಪಗಳು ಮನೋಜ್ಞವಾಗಿ ಮೂಡಿಬಂದಿವೆ. ನವರಂಗದ ಮೇಲ್ಛಾವಣಿಯಲ್ಲಿ 3 ಹಂತದ ಚೌಕಾಕಾರದ ಭುವನೇಶ್ವರಿ ಕೆತ್ತನೆ ಇದೆ. ನವರಂಗದ ಎಡಭಾಗದಲ್ಲಿ ಆಂಜನೇಯ ಮತ್ತು ಆಳ್ವರ ಶಿಲ್ಪಗಳು ಬಲಭಾಗದಲ್ಲಿ ನರ್ತಕಿ ಶಿಲ್ಪಗಳಿವೆ. ನವರಂಗ ದ್ವಾರದಲ್ಲಿ ಮಧ್ಯಭಾಗದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವು ಇಕ್ಕೆಲೆಗಳಲ್ಲಿ ಬಳ್ಳಿ ಸುರುಳಿ ಪೂರ್ಣಕುಂಬ ಕೆತ್ತನೆಗಳು ಕೆಳಭಾಗದಲ್ಲಿ ದ್ವಾರಪಾಲಕರಾದ ಜಯ-ವಿಜಯರ ಉಬ್ಬು ಕೆತ್ತನೆಗಳಿವೆ. ದ್ವಾರದ ಮುಂಭಾಗದಲ್ಲಿ ಜಯವಿಜಯರ ಮೂರ್ತಿ ಶಿಲ್ಪಗಳನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿ ಪೀಠದ ಮೇಲೆ ನಿಲ್ಲಿಸಲಾಗಿದೆ.

**ಮಹಾಮಂಟಪ**: ಇದು ವಿಸ್ತರಣೆಯಾಗಿರುವ ಮಂಟಪವಾಗಿದ್ದು 16 ಕಂಬಗಳಿವೆ ಈ ಕಂಬಗಳು 6 ಅಡಿ ಎತ್ತರವಿದ್ದು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು ಮತ್ತು ಕಂಬಗಳ ಮೇಲ್ಭಾಗದಲ್ಲಿ ಸರಳ ಬೋದಿಗೆ ಇದೆ. ಮಹಾಮಂಟಪದ ಎಡಭಾಗದಲ್ಲಿ ಇತ್ತೀಚೆಗೆ ನಿರ್ಮಿಸಿರುವ ಮಂಟಪ ಮತ್ತು ಉತ್ಸವ ಮೂರ್ತಿಗಳನ್ನು ಕಾಣಬಹುದಾಗಿದೆ.ಮಹಾಮಂಟಪದ ಎಡಭಾಗದಲ್ಲಿ ವರಲಕ್ಷ್ಮಿ, ಆದಿಶೇಷ ಕಾಳಿಂಗ ಮರ್ಧನ ಶಿಲ್ಪಗಳನ್ನು ಒಂದು ಅಡಿ ಪೀಠದ ಮೇಲೆ ನಿರ್ಮಿಸಿರುವುದು ಕಂಡುಬರುತ್ತದೆ.

**ಮುಖಮಂಟಪ**: ಮುಖಮಂಟಪವು ಬಹುಶಃ ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾದಂತೆ ಕಂಡುಬರುತ್ತದೆ. ಇದರಲ್ಲಿ ಸುಮಾರು 8 ಅಡಿ ಎತ್ತರದ 6 ಕಂಬಗಳಿದ್ದು ಈ ಕಂಬಗಳು ಚೌಕ, ಅಷ್ಟ ಮತ್ತು ಷೋಡಶ ಮಾದರಿಯಲ್ಲಿದ್ದು ಈ ಕಂಬಗಳಲ್ಲಿ ಸಿಂಹ, ವಿಷ್ಣು, ಕೇಶವ, ಪದ್ಮ, ಗರುಡ ಆಂಜನೇಯ ನರಸಿಂಹ, ಮತ್ಸ್ಯ ಸುಂದರಿ, ಸರ್ಪಮಂಡಲ, ಅಶ್ವ ಗಂಡಬೇರುಂಡ, ಶಿವಲಿಂಗ ವರಹ, ಕಾಮಧೇನು ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. (ಚಿ.ಸಂ.74) ಮುಖಮಂಟಪದ ಮುಂಭಾಗದಲ್ಲಿ 2 ಅಡಿ ವೇದಿಕೆ ಮೇಲೆ ಗರುಡನ ಗುಡಿಯಿದೆ.ಇಲ್ಲಿರುವ ಗರುಡನು ಕಪ್ಪುಶಿಲೆಯಲ್ಲಿ ನಿರ್ಮಿಸಲ್ಪಟ್ಟಿದ್ದು ಸಮಭಂಗಿಯಲ್ಲಿ ನಿಲ್ಲಿಸಲಾಗಿದ್ದು ಕೈಮುಗಿದು ನಿಂತಿರುವ ಭಂಗಿಯಲ್ಲಿದೆ. ತೆರೆದ ಮುಖಮಂಟಪದಲ್ಲಿ ದಶವಾತಾರ ಶಿಲ್ಪಗಳಿವೆ. ಮತ್ತೊಂದು ವಿಶೇಷವೆಂದರೆ ದೇವಾಲಯದ ದ್ವಾರದ ಎಡಭಾಗದ ಕಂಬದ ಕೆಳಭಾಗದಲ್ಲಿ ಉಬ್ಬು ಕೆತ್ತನೆಯ ವೀರಭದ್ರ ಶಿಲ್ಪ ವಿಷ್ಣು ಶಿಲ್ಪ ಎರಡು ನಾಗರಹಾವಿನ ಶಿಲ್ಪಗಳು ಎರಡು ಹಾವಿನ ಮಧ್ಯಭಾಗದಲ್ಲಿಕಮಲದ ಹೂ ಕಂಡುಬಂದಿದ್ದು ಸಾಮಾನ್ಯವಾಗಿ ಇಂತಹ ಶಿಲ್ಪಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತಿದ್ದು ಇವುಗಳಿಗೆ ಪೂಜೆ ಮಾಡುವ ವಾಡಿಕೆಯಿದೆ. ತೆರೆದ ಮುಖಂಟಪದ ವಿಶೇಷವೆಂದರೆ ಎಡಭಾಗದ ಮಧ್ಯದ ಕಂಬದಲ್ಲಿ ಉಬ್ಬು ಕೆತ್ತನೆಯ ಗಂಡುಬೇರುಂಡ ಶಿಲ್ಪಗಳನ್ನು ಕೆತ್ತಿದ್ದು ಇದು ನಮ್ಮ ರಾಜ್ಯದ ರಾಜಲಾಂಛನವಾಗಿದ್ದು ಮೈಸೂರು ಒಡೆಯರ ಕೊಡುಗೆಯೆಂದು ಸ್ಪಷ್ಟವಾಗಿ ಕರೆಯಬಹುದಾಗಿದೆ.

**ಭಿತ್ತಿ**: ಮೂಲದೇವಾಲಯದ ಹೊರ ಭಾಗದ ಅಧಿಷ್ಠಾನವು ಗಾರೆಯಿಂದ ಮುಚ್ಚಲ್ಪಟ್ಟಿದೆ.ಅಧಿಷ್ಠಾನದ ಕಲ್ಲು ಭಾಗದಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.ದೇವಾಲಯದ ಎಡಭಾಗದ ಭಿತ್ತಿಯಲ್ಲಿ ಆಂಜನೇಯ, ಕಾಳಿಂಗಮರ್ಧನ ಕೃಷ್ಣ ಆನೆ ಮುಂತಾದ ಉಬ್ಬು ಶಿಲ್ಪಗಳಿವೆ. ದೇವಾಲಯದ ಬಲಭಾಗದ ಭಿತ್ತಿಯಲ್ಲಿ ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವ ಸ್ತ್ರೀ ಶಿಲ್ಪ ಅದನ್ನು ನೋಡಿ ನಾಚಿಕೊಳ್ಳುತ್ತಿರುವ ಮಂಗ, ಅದನ್ನು ದೃಷ್ಟಿಸಿ ನೋಡುತ್ತಿರುವ ಸ್ತ್ರೀ ಶಿಲ್ಪ ಮುಖ್ಯವಾಗಿದೆ.

(ಚಿ.ಸಂ.75) ಗರ್ಭಗುಡಿಯ ಹಿಂಭಾಗದ ಭಿತ್ತಿಯಲ್ಲಿ ಬೆಣ್ಣೆ ಕದಿಯುತ್ತಿರುವ ಕೃಷ್ಣ, ಗೋಪಿಕಾ ಸ್ತ್ರೀಯರು ಯೋಗನರಸಿಂಹ ಸುಖಭಾಷಿಣಿ ವಾಮನ ಮುಂತಾದ ಉಬ್ಬು ಶಿಲ್ಪಗಳಿವೆ.

ಈ ದೇವಾಲಯದ ಆವರಣ ಎಡಭಾಗದಲ್ಲಿ ಒಂದು ಶಾಸನವಿದೆ. ಇದರ ಪ್ರಕಾರ ಕ್ರಿ.ಶ.1729ರಲ್ಲಿ ಆವತಿ ನಾಡಪ್ರಭು ಗೋಪಾಲಗೌಡ ಮತ್ತು ಅವನ ಧರ್ಮಪತ್ನಿ ಕೆಂಪಮ್ಮನವರ ಪುತ್ರರಾದ ದೊಡ್ಡಭೈರಪ್ಪಗೌಡರಾಯ/ದೊಡ್ಡಭೈರೇಗೌಡ ಎಂಬುವನು ಈ ಶಾಸನವನ್ನು ಹೊರಡಿಸಿದ್ದು ಇದರಲ್ಲಿ ದೇವಣಪುರ ರಾಜ್ಯಕ್ಕೆ ಸೇರಿದ ವಡಿಗೇನಹಳ್ಳಿಯ ಚನ್ನಕೇಶವನಿಗೆ ಸೇವೆ ಮಾಡಲು ಶೆಟ್ಟಿಹಳ್ಳಿ ಮತ್ತು ಅಂಗಟ್ಟ ಗ್ರಾಮಗಳನ್ನು ದಾನ ನೀಡಿರುವುದರ ಬಗ್ಗೆ ಉಲ್ಲೇಖಿಸುತ್ತದೆ.ಈ ಶಾಸನದ ಮೇಲ್ಭಾಗದಲ್ಲಿ ಐದು ಹೆಡೆ ಸರ್ಪದ ಮೇಲೆ ಭೂದೇವಿ ಮತ್ತು ಶ್ರೀದೇವಿಯರ ಶಿಲ್ಪವಿದೆ.[61]

ಈ ದೇವಾಲಯದ ಆವರಣದ ಎಡಭಾಗದಲ್ಲಿ ಬನ್ನಿವೃಕ್ಷವಿದೆ..ಬನ್ನಿಮರವು ದಸರಾ ಉತ್ಸವದಿಂದಾಗಿ ಪ್ರಾಮುಖ್ಯತೆ ಪಡೆದಿದೆ.ಈ ದೇವಾಲಯದ ಮತ್ತೊಂದು ವಿಶೇಷವೆಂದರೆ ಒಂದು ಗರುಡ ಮಂಟಪವಿದ್ದು, ಇದರಲ್ಲಿ ಕಿಂಡಿ ಇದ್ದು ಇದರ ಮೂಲಕ ಸೂರ್ಯನ ಕಿರಣಗಳು ನೇರವಾಗಿ ಮುಖ್ಯ ಗರ್ಭಗೃಹದ ಅಂಗವನ್ನು ಸ್ಪರ್ಶಿಸುತ್ತದೆ ಎಂದು ಈ ದೇವಾಲಯದ ಅರ್ಚಕರಾದ ಮುರುಳಿಧರ ಭಟ್ಟಾಚಾರ್ಯ ಎಂಬುವರು ಮಾಹಿತಿ ನೀಡಿರುತ್ತಾರೆ. ವಿಷ್ಣುವಿನ ದೇವಾಲಯಗಳಲ್ಲಿ ಕಂಡುಬರುವಂತೆ ಇಲ್ಲಿ ಕೂಡ ಹೊರಪ್ರಾಕಾರದ ನೈಋತ್ಯ ದಿಕ್ಕಿನಲ್ಲಿ ವೈಕುಂಠ ದ್ವಾರವಿದೆ.ಇದು ಸ್ವರ್ಗದ ಬಾಗಿಲು ಎಂದು ಹೆಸರಾಗಿದ್ದು ಸಾಮಾನ್ಯವಾಗಿ ಏಕಾದಶಿ ಮತ್ತು ವಿಶೇಷ ಪೂಜೆ ಸಂದರ್ಭಗಳಲ್ಲಿ ಇದು ಮಹತ್ವ ಪಡೆದುಕೊಂಡಿರುತ್ತದೆ.

**ಪ್ರಾಕಾರ**: ದೇವಾಲಯದ ಪಾತಾಳಂಕಣದಲ್ಲಿ ಇತ್ತೀಚಿನ ಮರದ ಏಕಧ್ವಜಸ್ತಂಬವಿದ್ದು ಮೇಲ್ಭಾಗದಲ್ಲಿ ತಗಡಿನ ಲೇಪನ ಮಧ್ಯಭಾಗದಲ್ಲಿ ಬಲಿಪೀಠ ಮತ್ತು ಅಲಂಕಾರಿಕ ಕೆತ್ತನೆಗಳಿವೆ. ಗರ್ಭಗುಡಿಯ ನೇರವಾಗಿ ಮತ್ತೊಂದು ಗುಡಿಯ ರೂಪದಲ್ಲಿ ಕಲ್ಲಿನಲ್ಲಿ ಕಟ್ಟಿದ್ದು ನಾಲ್ಕು ಕಂಬಗಳು ಮಣ್ಣಿನ ಗೋಡೆ ಕಲ್ಲಿನ ತೊಲೆಗಳು ಶಿಖರದ ಮಾದರಿಯನ್ನು ಅಚ್ಚುಗಲ್ಲಿನಿಂದ ಮಾಡಿ ಶಿಲ್ಪಗಳನ್ನು ಬಿಡಿಸಿದ್ದಾರೆ. ದ್ವಾರ ಮಂಟಪದ ಮೇಲೆ ಮೈಸೂರು ಒಡೆಯರ ಕಾಲದ ಅನೇಕ ಅಚ್ಚು ಮತ್ತು ಗಾರೆಯ ಸ್ಟುಕೋ ಶಿಲ್ಪಗಳಿಂದ ಅಲಂಕರಿಸಿದ್ದು ಇವುಗಳನ್ನು ಈಗಿನ ಕಾಲದ ಬಣ್ಣದಿಂದ ಲೇಪನ ಮಾಡಿದ್ದಾರೆ. (ಚಿ.ಸಂ.76)

**ಗೋಪುರ**: ಗೋಪುರವು ಇತ್ತೀಚಿಗೆ ಜೀರ್ಣೋದ್ಧಾರಗೊಂಡಿದ್ದು ಐದು ಕಳಸಗಳಿದ್ದು ಶಿಖರದ ಮೇಲ್ಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖ ಹೂಬಳ್ಳಿ ಮತ್ತು ಇತರೆ ಶಿಲ್ಪಗಳನ್ನು ಅಚ್ಚು

ಗಾರೆಯಿಂದ ನಿರ್ಮಿಸಲಾಗಿದೆ. (ಚಿ.ಸಂ.77)ಗೋಪುರದ ಎತ್ತರ ಸುಮಾರು 50 ಅಡಿ ಮತ್ತು ಅಗಲ ಸುಮಾರು 22 ಅಡಿಗಳಾಗಿರುತ್ತದೆ.

**ತಿಮ್ಮರಾಯಸ್ವಾಮಿ ದೇವಾಲಯ-ಯಂಬ್ರಹಳ್ಳಿ:**

ದೇವನಹಳ್ಳಿ ತಾಲೂಕಿಗೆ ಸೇರಿದ ಈಗಿನ ಯಂಬ್ರಹಳ್ಳಿ-ದಾಸರಹಳ್ಳಿ-ಕೋಡಗುರ್ಕಿ ಮತ್ತು ಆವತಿ ಈ ನಾಲ್ಕು ಗ್ರಾಮಗಳ ಎಲ್ಲೆಗಳ ಮಧ್ಯದಲ್ಲಿ ಇರುವ ಬೆಟ್ಟವೇ (ತಿಮ್ಮರಾಯಸ್ವಾಮಿ ಬೆಟ್ಟ) ಈಗ ಇದನ್ನು ಯಂಬ್ರಹಳ್ಳಿ ಬೆಟ್ಟ ಎಂದು ಕರೆಯಲಾಗುತ್ತಿದೆ.ಅವತಿ ಗ್ರಾಮದ ಈಶಾನ್ಯ ದಿಕ್ಕಿಗೆ ಬೆಟ್ಟಗಳ ಸಂಕೀರ್ಣವಿದೆ. ಈ ಬೆಟ್ಟವು ಸಪ್ತಗಿರಿಗಳಾದ ಬ್ರಹ್ಮಗಿರಿ, ಚನ್ನಗಿರಿ, ಮಂದಿಗಿರಿ, ದಿಬ್ಬಗಿರಿ, ಗೋವರ್ಧನ ಗಿರಿ, ಕುಕುಟಗಿರಿ ಮತ್ತು ಗೌತಮ ಗಿರಿಗಳ ಶ್ರೇಣಿಯಲ್ಲಿ ಒಂದಾಗಿದ್ದು ಪವಿತ್ರ ಯಾತ್ರಸ್ಥಳವು ಮತ್ತು ಪ್ರೇಕ್ಷಣೀಯ ಸ್ಥಳವಾಗಿದೆ. ಈ ಪ್ರದೇಶದಲ್ಲಿ ಪ್ರತಿವರ್ಷ ಹಲವಾರು ಮದುವೆ ಮುಂತಾದ ಶುಭ ಸಮಾರಂಭಗಳನ್ನು ನೆರವೇರಿಸಿಕೊಂಡು ಬರಲಾಗುತ್ತಿದೆ.ಈ ಬೆಟ್ಟವು ಗೌತಮ ಕ್ಷೇತ್ರವೆಂದು ಹೆಸರಾಗಿದೆ.

ಈ ಗೌತಮಗಿರಿ ಬೆಟ್ಟದ ಮೇಲೆ ಶ್ರೀನಿವಾಸ, ಅಂದರೆ ತಿಮ್ಮರಾಯಸ್ವಾಮಿ ದೇವಾಲಯವನ್ನು ಗೌತಮಮಹರ್ಷಿಗಳು ಪ್ರತಿಷ್ಠಾಪಿಸಿದರು ಎಂಬ ಪ್ರತೀತಿ ಇದೆ.[62] ಈ ದೇವಾಲಯವು ದೇವನಹಳ್ಳಿಯಿಂದ ಸುಮಾರು 7 ಕಿ. ಮೀ ದೂರದಲ್ಲಿದ್ದು ಆವತಿ ಗ್ರಾಮದಿಂದ ಸುಮಾರು ಎರಡೂವರೆ ಕಿ.ಮೀ ದೂರದಲ್ಲಿದೆ. ತಿಮ್ಮರಾಯಸ್ವಾಮಿ ದೇವಾಲಯವು ಹೆಸರೆ ಸೂಚಿಸುವಂತೆ ಒಂದು ವೈಷ್ಣವ ದೇವಾಲಯ, ಇದನ್ನು ಬೆಟ್ಟದ ಮೇಲಿನ ಬಯಲಿನಲ್ಲಿ ನಿರ್ಮಿಸಲಾಗಿದ್ದು ವಿಜಯನಗರ ಶೈಲಿಯಲ್ಲಿದ್ದು ಏಕಕೂಟ ದೇವಾಲಯವಾಗಿದೆ.(ಚಿ.ಸಂ.78)ಆವತಿ ನಾಡಪ್ರಭುಗಳ ಕಾಲದಲ್ಲಿ ರಚನೆ, ವಿಸ್ತರಣೆ ಮತ್ತು ಜೀರ್ಣೋದ್ಧಾರಗೊಂಡಿತು.ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮುಖಮಂಟಪಗಳನ್ನು ಹೊಂದಿದೆ.

**ಗರ್ಭಗೃಹ:** ಇದರ ಉದ್ದ 10 ಅಡಿ ಮತ್ತು ಅಗಲ 10 ಅಡಿಗಳಾಗಿದ್ದು ಚೌಕಕಾರವಾಗಿದೆ. ಗರುಡ ಪೀಠದ ಮೇಲೆ ಸುಮಾರು 5 ಅಡಿ ಎತ್ತರದ ಸಾಲಿಗ್ರಾಮ ಶಿಲೆಯಿಂದ ಕೆತ್ತಿರುವ ತಿಮ್ಮರಾಯಸ್ವಾಮಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ.(ಚಿ.ಸಂ.79)ಈ ಶಿಲ್ಪವು ಕಪ್ಪು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಚತುರ್ಭುಜವನ್ನು ಹೊಂದಿದ್ದು ಸಮಭಂಗಿಯಲ್ಲಿದೆ. ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದೆ, ಬಲಗೈಯಲ್ಲಿ ಅಭಯ ಹಸ್ತವನ್ನು ಹೊಂದಿದ್ದು ವಿಜಯನಗರ ಶೈಲಿಯ ಉದ್ದನೆಯ ಕಿರೀಟ ಮತ್ತು ವಿವಿಧ ಆಭರಣಗಳಾದ ಭುಜಬಂಧ, ಕಾಲ್ಗಡಗ, ಕಂಠೀಹಾರ,

ಉದರಬಂಧ ಹಾಗೂ ಯಜ್ಞೋಪವಿತವನ್ನು ಹೊಂದಿದ್ದಾನೆ. ತಿಮ್ಮರಾಯಸ್ವಾಮಿ ಶಿಲ್ಪದ ಸುತ್ತಲೂ ಕಮಾನಿನಾಕಾರದ ಪ್ರಭಾವಳ ಇದ್ದು ಮೇಲ್ಭಾಗದಲ್ಲಿ ಸಿಂಹಮುಖದ ಕೀರ್ತಿಮುಖ ಇದ್ದು ಪ್ರಭಾವಳಿ ಒಳಗೆ ಶಂಖ, ಚಕ್ರ ಸೇರಿರುವುದು ವಿಶೇಷವಾಗಿದೆ.

ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು ಕಮಲ ಮತ್ತು ಇತರೆ ಕೆತ್ತನೆಗಳಿಂದ ಕೂಡಿದ್ದು ಗರ್ಭಗೃಹದ ದ್ವಾರದ ಬಾಗಿಲುವಾಡವು ಮೂರು ಪಟ್ಟಿಕೆಗಳ ಅಲಂಕರಣೆಯಿಂದ ಕೂಡಿದೆ.ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಬಳ್ಳಿ ಸುರುಳಿಗಳ ಮತ್ತು ಪೂರ್ಣಕುಂಬಗಳ ಉಬ್ಬು ಕೆತ್ತನೆಗಳಿವೆ.

**ಸುಖನಾಸಿ**: ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲ ಹೊಂದಿದ್ದು ಸರಳವಾಗಿದೆ. ಸುಖನಾಸಿಯ ಎಡಭಿತ್ತಿಯಲ್ಲಿ 5 ಆಳ್ವಾರರ ಪ್ರತಿಮೆಗಳಿದ್ದು ಇವುಗಳನ್ನು ದೇವಕೋಷ್ಠಕದಲ್ಲಿ ಸೇರಿಸಲಾಗಿದ್ದು ಮಧ್ಯದಲ್ಲಿ ಆಳ್ವರ ಶಿಲ್ಪವು ಸಮಭಂಗಿಯಲ್ಲಿದ್ದು ಉಳಿದವು ಪದ್ಮಾಸನದಲ್ಲಿ ಭಕ್ತಿಯಿಂದ ನಮಸ್ಕರಿಸುತ್ತಿರುವಂತಿವೆ. ಸಾಮಾನ್ಯವಾಗಿ ಆಳ್ವಾರ್ ಶಿಲ್ಪಗಳು ಕುಳಿತಿರುವುದು ಹೆಚ್ಚು ಆದರೆ ಮಧ್ಯಭಾಗದಲ್ಲಿರುವ ಆಳ್ವರ್ ಶಿಲ್ಪ ಮಾತ್ರ ಸಮಭಂಗಿಯಲ್ಲಿ ನಿಂತಿರುವುದು ವಿಶೇಷವಾಗಿದೆ. ಇತ್ತೀಚೆಗೆ ಬಣ್ಣ ಲೇಪನ ಮಾಡಿರುವುದರಿಂದ ಸೂಕ್ಷ್ಮ ಕೆತ್ತನೆಗಳು ಸರಿಯಾಗಿ ಕಾಣಿಸುವುದಿಲ್ಲ.

ಸುಖನಾಸಿಯ ಮುಂಭಾಗದಲ್ಲಿ ಮತ್ತೊಂದು ಅಂತರಾಳ ಇದ್ದು ಇದರ ಎಡಭಾಗದಲ್ಲಿರುವ ಮತ್ತೊಂದು ಗರ್ಭಗುಡಿಯಲ್ಲಿ ಕಪ್ಪು ಶಿಲೆಯಿಂದ ಕೂಡಿರುವ ಲಕ್ಷ್ಮಿವಿಗ್ರಹವಿದ್ದು ಈ ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು ಕಮಲ, ಅಭಯಹಸ್ತ, ವರದಹಸ್ತ ಹೊಂದಿದೆ.ಅಂತರಾಳದ ದ್ವಾರದ ಬಾಗಿಲುವಾಡದಲ್ಲಿ ವೈಷ್ಣವ ದ್ವಾರಪಾಲಕರ ಚಿಕ್ಕಗಾತ್ರದ ಉಬ್ಬು ಶಿಲ್ಪಗಳಿವೆ. ಶಂಖ, ಚಕ್ರ, ಗಧೆಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಶಿಲ್ಪಗಳಲ್ಲಿ ಉದ್ದನೆಯ ಕಿರೀಟಗಳನ್ನು ಕೆತ್ತಲಾಗಿದೆ.ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಯಾವುದೇ ಭುವನೇಶ್ವರಿ ಕಂಡುಬಂದಿರುವುದಿಲ್ಲ.

**ನವರಂಗ**: ನವರಂಗದ ಉದ್ದ 20 ಅಡಿ ಮತ್ತು ಅಗಲ 40 ಅಡಿಗಳು ಆಗಿದ್ದು ನವರಂಗದ ಮಧ್ಯಭಾಗದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳು ಕಂಡುಬರುತ್ತವೆ. ಈ ಕಂಬಗಳು ಪೀಠವನ್ನು ಹೊಂದಿದ್ದು ಚೌಕ ಅಷ್ಟ ಷೋಡಶ ಮಾದರಿಯನ್ನು ಮತ್ತು ಪುಷ್ಪ ಬೋದಿಗೆಯನ್ನು ಹೊಂದಿದ್ದು ನವರಂಗದ ಗೋಡೆಗಳಲ್ಲಿ 12 ಅರೆಗಂಭಗಳಿವೆ. ನವರಂಗದ ಕಂಬಗಳು ಎರಡು ಮೀ. ಎತ್ತರ ಮತ್ತು 50 ಸೆಂ.ಮೀ.ದಪ್ಪವಾಗಿದ್ದು ಇವುಗಳನ್ನು ಕಿರುಪೀಠಗಳ ಮೇಲೆ

ಜೋಡಿಸಲಾಗಿದೆ.(ಚಿ.ಸಂ.80) ಈ ನಾಲ್ಕು ಕಂಬಗಳು ಚೌಕ ಅಷ್ಟ ಚೌಕ ಶೈಲಿಯಲ್ಲಿವೆ. ಕಂಬಗಳ ಮೇಲ್ಭಾಗವು ವಿಜಯನಗರ ಶೈಲಿಯ ಬೋಧಿಗೆಯನ್ನು ಹೊಂದಿದ್ದು ಕಂಬಗಳಲ್ಲಿನ ಶಿಲ್ಪಗಳು ಗಾತ್ರದಲ್ಲಿ 35 ಸೆಂ.ಮೀ ಉದ್ದ ಮತ್ತು 15-18 ಸೆಂ.ಮೀ ಅಗಲವಾಗಿದೆ.ಇವುಗಳಲ್ಲಿ ಕೃಷ್ಣನ ಬಾಲ ಲೀಲೆಗಳು, ವಿಷ್ಣುವಿನ ಅವತಾರಗಳು, ನೃತ್ಯಗಾರರು, ಪುಷ್ಪ ಮತ್ತು ಕಾಡುಪ್ರಾಣಿಗಳ ಉಬ್ಬುಶಿಲ್ಪಗಳು ಕಂಡುಬಂದಿದ್ದು ಇಲ್ಲಿ ಕೂರ್ಮ ಅವತಾರ, ನರಸಿಂಹ, ಹಯಗ್ರೀವ, ಕಾಳಿಂಗ ಮರ್ದನ, ಮತ್ಸ್ಯವತಾರ, ಚಂಚುಲಕ್ಷ್ಮಿ, ಆಂಜನೇಯ ಶಿಲ್ಪ, ಯಾಳಿ, ಶಿಲ್ಪಗಳನ್ನು ಕಂಡರಿಸಲಾಗಿದೆ. ವಿಶೇಷವೇನೆಂದರೆ ನವರಂಗದ ದ್ವಾರದ ಬಲಭಾಗದ ಅರೆಗಂಭದಲ್ಲಿ ಲಜ್ಜೆಗೌರಿ, ಎಡಭಾಗದ ಅರೆಗಂಭದಲ್ಲಿ ಎರಡು ನಾಗರಹಾವು (ಸರ್ಪ) ಒಂದಕ್ಕೊಂದು ಸುತ್ತಿಕೊಂಡಿರುವಂತೆ ಕಂಡರಿಸಲಾಗಿದೆ.ಲಜ್ಜೆಗೌರಿ ಮೇಲೆ ನವಿಲು, ನಾಗರಹಾವು ಹಾಗೂ ಮೇಲ್ಭಾಗದಲ್ಲಿ ಗೋವಿನ ಶಿಲ್ಪವಿದೆ.ಲಜ್ಜೆಗೌರಿ ಮುಖಮುಚ್ಚಿಕೊಳ್ಳದೆ ತನ್ನ ಎಡಗೈಯನ್ನು ತೊಡೆಯ ಸಂಧಿಯಲ್ಲಿ ಸೇರಿಸಿಕೊಂಡಿರುವುದು ವಿಶೇಷ. ನವರಂಗದ 4 ಕಂಬಗಳ ಮಧ್ಯಭಾಗದಲ್ಲಿ 3 ಹಂತದಲ್ಲಿ ಕೂಡಿರುವ ಭುವನೇಶ್ವರಿ ಇದ್ದು ಭುವನೇಶ್ವರಿಯಲ್ಲಿ ಅರಳಿದ ಕಮಲದ ಕೆತ್ತನೆ ಇದೆ.ನವರಂಗದ ಪೀಠವು ನಕ್ಷತ್ರಾಕಾರದ ಮಾದರಿಯಲ್ಲಿದ್ದು ನವರಂಗದ ದ್ವಾರವು 5 ಪಟ್ಟಿಕೆಗಳಿಂದ ಅಲಂಕರಣಗೊಂಡಿದೆ.ಪದ್ಮ ಬಳ್ಳಿ ಮತ್ತಿತರ ವಿನ್ಯಾಸದ ಪಟ್ಟಿಕೆಗಳನ್ನು ಬಾಗಿಲುವಾಡದಲ್ಲಿ ಕೆತ್ತಲಾಗಿದೆ.ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ ದ್ವಾರದ ಇಕ್ಕೆಲಗಳಲ್ಲಿ ತ್ರಿಭಂಗ ಮುದ್ರೆಯಲ್ಲಿ ನಿಂತಿರುವ ದ್ವಾರಪಾಲಕರ ಶಿಲ್ಪಗಳಿದ್ದು ಇವು ಎತ್ತರವಾಗಿದ್ದು ಇವರು 4 ಕೈಗಳನ್ನು ಹೊಂದಿದ್ದು ತಮ್ಮ ಕೈಗಳಲ್ಲಿ ಶಂಖ ಚಕ್ರ ಗಧೆಗಳನ್ನು ಹಿಡಿದಿದ್ದಾರೆ. ಇವರ ಕಿರೀಟಗಳು ಉದ್ದ ಆಕಾರದಲ್ಲಿದ್ದು ಕಿವಿಯಲ್ಲಿ ದೊಡ್ಡ ಗಾತ್ರದ ಓಲೆಗಳಿವೆ. ಕೊರಳಲ್ಲಿ ಕಂಠಿಹಾರ ದೇಹದ ಮೇಲೆ ಯಜ್ಞೋಪವೀತ ಭುಜಬಂಧ ಕೈಬಳೆ ಕಾಲ್ಕಡಗ ಉದರಬಂದ ಮುಂತಾದ ಆಭರಣಗಳನ್ನು ಧರಿಸಿದ್ದಾರೆ.ದ್ವಾರಶಾಖೆಯಲ್ಲಿ ಅಲಂಕಾರಿಕ ಪಟ್ಟಿಕೆಗಳು ಮತ್ತು ವರ್ತುಲಾಕಾರದ ಕಮಲ ಪುಷ್ಪದ ಕೆತ್ತನೆಗಳಿವೆ. ನವರಂಗದ ದ್ವಾರಶಾಖೆಯಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮತ್ತು ಇಕ್ಕೆಲಗಳಲ್ಲಿ ಮಣಿಸರ ಕೆತ್ತನೆ ಮತ್ತು ಎಡಭಾಗದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ.

**ಮುಖಮಂಟಪ:** ಇತ್ತೀಚಿನ ದಿನಗಳಲ್ಲಿ ತೆರೆದ ಮುಖಮಂಟಪವನ್ನು ಸೇರಿಸಲಾಗಿದೆ. ಮುಖಮಂಟಪವು ಸಂಪೂರ್ಣವಾಗಿ ಗ್ರಾನೈಟ್ ಶಿಲೆಯ ನೆಲಹಾಸನ್ನು ಹೊಂದಿದ್ದು ಕಬ್ಬಿಣದ ಗ್ಯಾಲರಿಯನ್ನು ಮುಂಭಾಗದಲ್ಲಿ ಅಳವಡಿಸಲಾಗಿದೆ. (ಚಿ.ಸಂ.81)

**ಅಧಿಷ್ಠಾನ;** ಅಧಿಷ್ಠಾನದಲ್ಲಿ ಉಪಾನ, ಜಗತಿವಿದ್ದು ತ್ರಿಪಟ್ಟ ಕುಮುದ, ಗಳ, ಕಂಠಗಳ ಭಾಗಗಳಿವೆ, ಅವುಗಳಲ್ಲಿ ಉಪಾನ ಮತ್ತು ಜಗತಿ ಭೂಮಿಯಲ್ಲಿ ಹೂತು ಹೋಗಿದೆ.

**ಭಿತ್ತಿ ಶಿಲ್ಪಗಳು:**

ದೇವಾಲಯದ ಹೊರಭಿತ್ತಿಯು ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಾಲಯದಂತೆ ಮಹಾಕಾವ್ಯಗಳು ಮತ್ತು ಪುರಾಣಗಳ ಕಥಾನಕ ಶಿಲ್ಪಗಳನ್ನು ಬಿಡಿಸಲಾಗಿದೆ.ದೇವಾಲಯದ ಹೊರಗೋಡೆ ಭಿತ್ತಿಯಲ್ಲಿ ರಾಮಾಯಣ ಮತ್ತು ಬಾಲಕೃಷ್ಣನ ಲೀಲೆಗಳ ಕಥನಗಳನ್ನು ತಿಳಿಸುವ ಉಬ್ಬುಶಿಲ್ಪಗಳಿವೆ. ನವರಂಗದ ಹೊರಗೋಡೆಯ ಭಿತ್ತಿಯಲ್ಲಿ ವಾಲಿಸಂಹಾರ ರಾಮಾಯಣದ ನಿರೂಪಣೆಯ ಉಬ್ಬು ಶಿಲ್ಪಗಳು ವಾಲಿ ಸುಗ್ರೀವರ ಹೋರಾಟದಲ್ಲಿ ರಾಮನು ಬಿಲ್ಲಿನಿಂದ ವಾಲಿಯ ವಧೆ ಮಾಡುತ್ತಿರುವುದು ವಾಲಿ ಸುಗ್ರೀವರು ಇಬ್ಬರೂ ಸಂಭಾಷಣೆ ನಡೆಸಿ ಪ್ರಯೋಜನವಾಗದೆ ನಂತರ ರಾಮಲಕ್ಷ್ಮಣರನ್ನು ಭೇಟಿಯಾಗುವುದು ನಮಸ್ಕರಿಸುತ್ತ ರಾಮನ ಸ್ನೇಹ ಬೆಳೆಸಿಕೊಳ್ಳುವುದು ಅನಂತರ ಯುದ್ಧಕ್ಕೆ ಅಣಿಯಾಗುವುದು ಭಿತ್ತಿಯಲ್ಲಿ ಕಂಡರಿಸಲಾಗಿದೆ.

ಗರ್ಭಗುಡಿ ಮತ್ತು ಸುಖನಾಸಿಯ ಹೊರ ಭಿತ್ತಿಯಲ್ಲಿ ಕೃಷ್ಣನ ಲೀಲೆಗಳು, ಗೋಪಿಕ ಸ್ತ್ರೀಯರ ಬಟ್ಟೆಗಳನ್ನು ತೆಗೆದುಕೊಂಡು ಮರದ ಮೇಲೆ ಕುಳಿತಿರುವ ಕೃಷ್ಣ, ತಮ್ಮ ವಸ್ತ್ರಗಳಿಗೋಸ್ಕರ ನಮಸ್ಕರಿಸಿ ಬೇಡುತ್ತಿರುವ ಮತ್ತು ತಮ್ಮ ಗುಪ್ತಾಂಗವನ್ನು ಮುಚ್ಚಿಕೊಂಡಿರುವ ಕನ್ಯೆ, ಕೊಳದಲ್ಲಿ ಇದ್ದು ತಮ್ಮ ವಸ್ತ್ರಕ್ಕಾಗಿ ಬೇಡುತ್ತಿರುವ ಕನ್ಯೆಯ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಗರ್ಭಗುಡಿಯ ಹೊರಗೋಡೆಯಲ್ಲಿ ಮೊಸರು ಕುಡಿದು ಬೆಣ್ಣೆಯನ್ನು ಕದಿಯುತ್ತಿರುವ ಕೃಷ್ಣ, ಪದ್ಮಾಸನದಲ್ಲಿ ಕುಳಿತು ಬೆಣ್ಣೆಯನ್ನು ತಿನ್ನುತಿರುವ ಕೃಷ್ಣನ ಉಬ್ಬುಶಿಲ್ಪಗಳಿವೆ. ಹೊರಗೋಡೆಯ ಎಡಭಾಗದಲ್ಲಿ ಮತ್ಸ್ಯವತಾರ, ಗೋವರ್ಧನ ಗಿರಿಧಾರಿ, ಯೋಗಪಟದಲ್ಲಿ ಕುಳಿತಿರುವ ಯೋಗನರಸಿಂಹ ಮುಂತಾದ ಉಬ್ಬುಶಿಲ್ಪಗಳಿವೆ.

ನವರಂಗದ ಉತ್ತರ ದಿಕ್ಕಿನ ಭಿತ್ತಿಯಲ್ಲಿ ನರಸಿಂಹ ಹಿರಣ್ಯ ಕಶ್ಯಪುವನ್ನು ಸಂಹರಿಸುವ ಕಥಾನಕ ಶಿಲ್ಪಗಳಿವೆ. ಅವುಗಳಲ್ಲಿ ಕಂಬದಿಂದ ನರಸಿಂಹ ಹೊರಬರುತ್ತಿರುವುದು, ಹಿರಣ್ಯ ಕಶ್ಯಪುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಆತನ ಹೊಟ್ಟೆಯನ್ನು ಬಗೆಯುತ್ತಿರುವ ಮತ್ತು ನರಸಿಂಹ ಲಕ್ಷ್ಮಿಯೊಂದಿಗೆ ಇರುವುದನ್ನು ತೋರಿಸಿ ಅವರ ಪಕ್ಕದಲ್ಲಿ ಪ್ರಹ್ಲಾದ ಮತ್ತು ಋಷಿ ವಂದಿಸುತ್ತಿರುವ ಉಬ್ಬು ಶಿಲ್ಪಗಳಿವೆ.[63] ದೇವಾಲಯದ ಮುಂಭಾಗದಲ್ಲಿ ಸುಮಾರು 15 ಅಡಿ ಎತ್ತರದ ಧ್ವಜಸ್ತಂಭ ಮತ್ತು ಬಲಿಪೀಠಗಳಿವೆ. (ಚಿ.ಸಂ.82)

**ಗುಹಾಂತರ ದೇವಾಲಯ:**

ಇದು ತಿಮ್ಮರಾಯಸ್ವಾಮಿ ದೇವಾಲಯದ ಹಿಂಬದಿಯ ಬೆಟ್ಟದಲ್ಲಿದೆ.ಇದನ್ನು ಸ್ಥಳೀಯವಾಗಿ ತಿಮ್ಮರಾಯಸ್ವಾಮಿ ಪಾದವೆಂದು ಹೇಳಲಾಗುತ್ತಿದೆ.ಇದು ಬಂಡೆಯಲ್ಲಿನ ನೈಸರ್ಗಿಕ ಗುಹೆಯಾಗಿದ್ದು ಇದಕ್ಕೆ ಮಂಟಪವನ್ನು ನಿರ್ಮಿಸಿ ಒಂದು ಚಿಕ್ಕ ದೇವಾಲಯವನ್ನಾಗಿ ರಚಿಸಲಾಗಿದೆ.ಈ ದೇವಾಲಯವು ಎರಡು ಆಯತಾಕಾರದ ಕೋಣೆಗಳಿಂದ ಕೂಡಿದ್ದು ಬಲಭಾಗದ ಕೋಣೆ ಅಂದರೆ ಉತ್ತರದ ಕೋಣೆಯು ಗರ್ಭಗುಡಿಯಾಗಿದೆ.ಗರ್ಭಗುಡಿಯ ಅಗಲ ಒಂದೂವರೆ ಮೀ.ಅಗಲ ಮತ್ತು ಉದ್ದ 3 ಮೀ ಆಗಿದೆ.ಈ ಗರ್ಭಗುಡಿಯ ಎಡಕ್ಕೆ ಹೊಂದಿಕೊಂಡಂತೆ ಇನ್ನೊಂದು ಆಯತಾಕಾರದ ಕೋಣೆಯಿದೆ.ಈ ಎರಡು ಕೋಣೆಗಳ ಮಧ್ಯೆ ಗೋಡೆಗಳಲ್ಲಿ ಗರ್ಭಗುಡಿಯನ್ನು ಪ್ರವೇಶಿಸಲು ದ್ವಾರಬಾಗಿಲು ಮಾಡಲಾಗಿದೆ.ಈ ದ್ವಾರ ಬಾಗಿಲಲ್ಲಿ ಬಳ್ಳಿಗಳಿಂದ ಕೂಡಿದ ಕೆತ್ತನೆಯಿದೆ.ಗರ್ಭಗುಡಿಯ ಒಳಭಾಗದಲ್ಲಿ ಒಂದು ಕಂಬವಿದೆ.ಎಡಭಾಗದ ಕೋಣೆ 3 ಮೀ.ಅಗಲ ಮತ್ತು 2.70 ಮೀ.ಉದ್ದವಾಗಿದೆ.ಇದಕ್ಕೆ ಪ್ರವೇಶಿಸಲು ದ್ವಾರ ಮಾಡಲಾಗಿದೆ.ದ್ವಾರದ ಮೇಲೆ ವೈಷ್ಣವ ಮುದ್ರೆಗಳಿಂದ ಕೂಡಿದ ದ್ವಾರಪಾಲಕ ಶಿಲ್ಪಗಳಿವೆ. ದೇವಾಲಯದ ಹೊರಭಾಗದ ಅಧಿಷ್ಠಾನದಲ್ಲಿ ಆಂಜನೇಯ, ಆನೆ ಮುಂತಾದ ಉಬ್ಬು ಶಿಲ್ಪಗಳಿವೆ. ಬೆಟ್ಟದ ಕೆಳಭಾಗದಿಂದ ಗುಹಾಂತರ ದೇವಾಲಯದವರೆಗೆ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ.[64]

**ಪುಷ್ಕರಣಿಗಳು**

ತಿಮ್ಮರಾಯಸ್ವಾಮಿ ಬೆಟ್ಟದ ಮೇಲೆ ಶಂಖತೀರ್ಥ, ಲಕ್ಷ್ಮೀತೀರ್ಥ ಮತ್ತು ಚಕ್ರತೀರ್ಥವೆಂಬ ಮೂರು ತೀರ್ಥಗಳಿವೆ. ಈ ತೀರ್ಥಗಳನ್ನು ದೇವಾಲಯದ ಧಾರ್ಮಿಕ ಆಚರಣೆಗೆ ಉಪಯೋಗಿಸಲಾಗುತ್ತಿದೆ.ಶಂಖುತೀರ್ಥವನ್ನು ಶಂಖುದೋಣೆಯೆಂದು ಸ್ಥಳೀಯವಾಗಿ ಕರೆಯಲಾಗುತ್ತಿದ್ದು ಇದು ಸುಮಾರು 10 ಅಡಿ ವ್ಯಾಸವನ್ನು ಹೊಂದಿದೆ.ಇದು ಶಂಖುವಿನಂತೆ ಸುರುಳಾಕಾರ ಹೊಂದಿದ್ದು ನೋಡಲು ಬಾವಿಯೆಂತೆಯೂ ಗುಹೆಯೆಂತೆಯೂ ಕಂಡುಬರುತ್ತದೆ.ಇದು ಸರ್ವಕಾಲದಲ್ಲಿ ನೀರು ಕಂಡುಬರುತ್ತದೆ.ಶಂಖತೀರ್ಥದ ಪಕ್ಕದಲ್ಲೇ ಲಕ್ಷ್ಮೀ ತೀರ್ಥವಿದ್ದು ಇದನ್ನು ಲಕ್ಷ್ಮೀದೋಣೆಯೆಂದು ಸ್ಥಳೀಯವಾಗಿ ಹೇಳಲಾಗುತ್ತಿದೆ.ಇದು ಸುಮಾರು 2 ಅಡಿ ವ್ಯಾಸವನ್ನು ಹೊಂದಿದ್ದು ಪಶ್ಚಿಮಾಭಿಮುಖವಾಗಿದೆ.ಇಲ್ಲೂ ಕೂಡ ನೀರು ಕೈಗೆಟುಕುವಂತಿದೆ.ಶಂಖತೀರ್ಥ ಮತ್ತು ಲಕ್ಷ್ಮೀತೀರ್ಥಗಳಿಂದ ದಕ್ಷಿಣಕ್ಕೆ ಸುಮಾರು 250 ಅಡಿಗಳ ದೂರದಲ್ಲಿ ಚಕ್ರತೀರ್ಥವಿದ್ದು ಇದನ್ನು ಸ್ಥಳೀಯವಾಗಿ ಚಕ್ರದೋಣೆ ಎಂದು ಹೇಳಲಾಗುತ್ತದೆ. ಇದನ್ನು ಮೇಲಿನಿಂದ ಗಮನಿಸಿದರೆ ಚಕ್ರದಂತೆ ಕಂಡುಬಂದಿದ್ದು, ಹೆಚ್ಚು ವಿಸ್ತಾರ ಹೊಂದಿದ್ದು, ಇದು ಕಲ್ಯಾಣಿ ಮಾದರಿಯಲ್ಲಿದೆ.[65]

**ಚನ್ನಕೇಶವಸ್ವಾಮಿ ದೇವಾಲಯ-ಬಿದಲೂರು:**

ಬಿದಲೂರು ದೇವನಹಳ್ಳಿ-ನಂದಿಬೆಟ್ಟ ರಸ್ತೆಯಲ್ಲಿ ಕಂಡುಬರುವ ಒಂದು ಗ್ರಾಮವಾಗಿದ್ದು ದೇವನಹಳ್ಳಿಯಿಂದ ಸುಮಾರು 5 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಚನ್ನಕೇಶವ ಸ್ವಾಮಿ ಎಂಬ ಪ್ರಾಚೀನ ದೇವಾಲಯವಿದ್ದು ಪೂರ್ವಾಭಿಮುಖವಾಗಿದೆ (ಚಿ.ಸಂ.83)ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ. ಈ ದೇವಾಲಯವು ವಿಜಯನಗರ ಕಾಲಕ್ಕೆ ಸೇರಿದುದಾಗಿದ್ದು ದೇವಾಲಯದಲ್ಲಿ ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಗೋಪುರಗಳು ಇದ್ದು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ.

**ಗರ್ಭಗುಡಿ:** ಚೌಕಾಕಾರವಾಗಿದ್ದು ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು. ಗರ್ಭಗುಡಿಯ ಮಧ್ಯಭಾಗದಲ್ಲಿ ಪೀಠದ ಮೇಲೆ ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟರುವ ಸಮಭಂಗಿಯಲ್ಲಿ ನಿಂತಿರುವ ಚನ್ನಕೇಶವ ಸ್ವಾಮಿ ಶಿಲ್ಪವಿದ್ದು ಚನ್ನಕೇಶವನು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ, ಚಕ್ರ, ಅಭಯ ಹಸ್ತ, ವರದ ಹಸ್ತಗಳನ್ನು ಹೊಂದಿದ್ದಾನೆ. ಚನ್ನಕೇಶವನ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪವಿದೆ.(ಚಿ.ಸಂ.84)ಗರ್ಭಗುಡಿಯಲ್ಲಿ ಸರಳವಾದ ಭುವನೇಶ್ವರಿ ಇದ್ದು ಗರ್ಭಗುಡಿಯ ದ್ವಾರವು ಸರಳವಾಗಿದೆ.

**ಸುಖನಾಸಿ:** ಇದರ ಉದ್ದ 6 ಅಡಿ ಮತ್ತು ಅಗಲ 6 ಅಡಿಗಳು ಆಗಿದ್ದುಸುಖನಾಸಿಯ ಎಡಭಾಗದಲ್ಲಿ 1 ಅಡಿ ಎತ್ತರದ ವೇದಿಕೆ ಮೇಲೆ ಶಂಕರಚಾರ್ಯ, ಮಧ್ವಾಚಾರ್ಯ ಮತ್ತು ರಾಮಾನುಜ ಚಾರ್ಯರ ಶಿಲ್ಪಗಳಿವೆ. ಸುಖನಾಸಿಯ ದ್ವಾರದ ಮೇಲ್ಭಾಗದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ದ್ವಾರಶಾಖೆಯ ಕೆಳಭಾಗದಲ್ಲಿ ದ್ವಾರಪಾಲಕರಾದ ಜಯವಿಜಯರ ಉಬ್ಬುಕೆತ್ತನೆಯ ಶಿಲ್ಪಗಳಿವೆ. ಸುಖನಾಸಿಯ ಮುಂಭಾಗದಲ್ಲಿ ತೆರೆದ ಒಂದು ಚಿಕ್ಕದಾದ ಅಂತರಾಳವಿದೆ. ಇದರ ವಿಸ್ತೀರ್ಣವು ಉದ್ದ 6 ಅಡಿ ಮತ್ತು ಅಗಲ 6 ಅಡಿಗಳಾಗಿದ್ದು ಈ ಭಾಗಕ್ಕೆ ಚದರಬಿಲ್ಲೆಯನ್ನು ಹಾಕಲಾಗಿದೆ.

**ನವರಂಗ:** ನವರಂಗದಲ್ಲಿ 4 ಪ್ರಧಾನ ಆಧಾರ ಸ್ತಂಭಗಳಿದ್ದು ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಅವು ಚೌಕ, ಅಷ್ಟ ಮಾದರಿಯಲ್ಲಿದ್ದು ಸರಳ ಬೋದಿಗೆಯನ್ನು ಹೊಂದಿವೆ.ಈ ಕಂಬಗಳಲ್ಲಿ ಶಂಖ, ಚಕ್ರ, ಕಾಳಿಂಗ ಮರ್ಧನ, ಕೃಷ್ಣ, ಕಮಲ ದಳ ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ.(ಚಿ.ಸಂ.85)ನವರಂಗದ ಬಲಭಾಗದಲ್ಲಿ ನಾಗಶಿಲ್ಪಗಳು ಮತ್ತು ಎಡಭಾಗದಲ್ಲಿ ಇತ್ತೀಚೆಗೆ ಗಣೇಶ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.ನವರಂಗದಿಂದ ಉತ್ತರಕ್ಕೆ ಮತ್ತೊಂದು

ಪ್ರವೇಶದ್ವಾರವಿದೆ. ನವರಂಗದ ದ್ವಾರದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ದ್ವಾರ ಶಾಖೆಯ ಕೆಳಭಾಗದಲ್ಲಿ ಜಯವಿಜಯರ ಉಬ್ಬುಶಿಲ್ಪಗಳಿವೆ.

**ಮುಖಮಂಟಪ**: ಇದರ ಉದ್ದ 8 ಅಡಿ ಮತ್ತು ಅಗಲ 20 ಅಡಿಗಳು ಆಗಿದ್ದುಮುಖಮಂಟಪದಲ್ಲಿ 4 ಪ್ರಧಾನ ಕಂಬಗಳಿದ್ದು ಅವುಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಅವು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು ಕಂಬಗಳಲ್ಲಿ ಶಂಖ, ಚಕ್ರ, ಹಂಸ, ನರಸಿಂಹ, ಆಂಜನೇಯ, ಹಲ್ಲಿ, ಕಾಳಿಂಗ ಮರ್ಧನ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ದೇವಾಲಯದ ಹೊರಭಾಗಕ್ಕೆ ಚದರಬಿಲ್ಲೆಯನ್ನು ಹಾಕಿರುವುದು ಕಂಡುಬರುತ್ತದೆ.

**ಪ್ರಾಕಾರ**: ಗರ್ಭಗುಡಿಯ ಹಿಂಭಾಗದ ಭಿತ್ತಿಯಲ್ಲಿ ಎರಡು ಮತ್ಸ್ಯಗಳ ಉಬ್ಬು ಕೆತ್ತನೆ, ಉತ್ತರಕ್ಕೆ ಹೊಯ್ಸಳ ಲಾಂಛನದ ಉಬ್ಬು ಕೆತ್ತನೆ ಮಾಡಲಾಗಿದೆ.ಗರ್ಭಗುಡಿಯ ಮೇಲೆ ಇತ್ತೀಚಿಗೆ ಶಿಖರವನ್ನು ನಿರ್ಮಿಸಲಾಗಿದೆ.ಉತ್ತರಕ್ಕೆ ಎರಡು ಗರುಡಸ್ತಂಭಗಳಿವೆ. ಒಂದು ಕಂಬದಲ್ಲಿ ಶಂಖ, ಆಂಜನೇಯ, ಅರಳಿದ ಪದ್ಮ ಕೆತ್ತನೆಯಿದ್ದು ಎರಡನೇ ಕಂಬದಲ್ಲಿ ಆಂಜನೇಯ ಶಿಲ್ಪವಿದ್ದು ಅದರ ಮುಂಭಾಗದಲ್ಲಿ ನಂದಿ ಶಿಲ್ಪವಿದೆ.ದೇವಾಲಯದ ಹೊರಭಾಗದಲ್ಲಿ ಉತ್ತರ ದಿಕ್ಕಿನಲ್ಲಿ ಒಂದು ಶಿಲಾಶಾಸನ ಇದ್ದು ಉದ್ದ 4 ಅಡಿ ಮತ್ತು ಅಗಲ 4 ಅಡಿಗಳು ಆಗಿರುತ್ತದೆ.

**ದ್ವಾರಮಂಟಪ ಮತ್ತು ಗೋಪುರ**: ಇತ್ತೀಚಿಗೆ ದ್ವಾರಮಂಟಪ ಮತ್ತು ಗೋಪುರಗಳನ್ನು ನಿರ್ಮಿಸಲಾಗಿದ್ದು ಗೋಪುರವು ದ್ರಾವಿಡ ಶೈಲಿಯಲ್ಲಿದ್ದು ಸುಮಾರು 60 ಅಡಿ ಎತ್ತರವನ್ನು ಹೊಂದಿದೆ. (ಚಿ.ಸಂ.86)ಗೋಪುರದಲ್ಲಿ ದೇವತೆಗಳ ಮತ್ತು ಇತರೆ ಮೂರ್ತಿಗಳ ಗಾರೆ ಶಿಲ್ಪಗಳಿವೆ.[66]

**ಶ್ರೀರಂಗನಾಥಸ್ವಾಮಿ ದೇವಾಲಯ-ದೇವನಹಳ್ಳಿ:**

ಈ ದೇವಾಲಯವು ದೇವನಹಳ್ಳಿಯ ಮರಳುಬಾಗಿಲಿನಲ್ಲಿದ್ದು ಪೂರ್ವಾಭಿಮುಖವಾಗಿದ್ದು ಏಕಕೂಟ ದೇವಾಲಯವಾಗಿದೆ. (ಚಿ.ಸಂ.87)ಈ ದೇವಾಲಯವು ಮುಜರಾಯಿ ಇಲಾಖೆಗೆ ಒಳಪಟ್ಟಿದೆ.ಈ ದೇವಾಲಯದ ವಾಸ್ತುರಚನೆಯನ್ನು ಗಮನಿಸಿದಾಗ ವಿಜಯನಗರ ಕಾಲಕ್ಕೆ ಸೇರಿದ್ದಾಗಿದೆ ಎಂದು ಕಂಡುಬಂದಿದ್ದು ಇತ್ತೀಚಿಗೆ ಜೀರ್ಣೋದ್ಧಾರಗೊಂಡಿದೆ.ದೇವಾಲಯವು ಗರ್ಭಗೃಹದ, ನವರಂಗ ಹಾಗೂ ಮುಂತಾದವುಗಳನ್ನು ಹೊಂದಿದೆ.

**ಗರ್ಭಗೃಹ**: ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು. ಗರ್ಭಗುಡಿಯಲ್ಲಿ ಅನಂತಶಯನ ರಂಗನಾಥಸ್ವಾಮಿ ಮೂರ್ತಿಯಿದ್ದು ಈ ಮೂರ್ತಿಯು ಕಪ್ಪು ಮತ್ತು ಬಿಳಿ ಮಿಶ್ರಿತ ಕಣಶಿಲೆಯಿಂದ

ನಿರ್ಮಿಸಲ್ಪಟ್ಟಿದೆ.(ಚಿ.ಸಂ.88)ಈ ಮೂರ್ತಿಯು 9 ಅಡಿ ಉದ್ದ ಮತ್ತು ಎತ್ತರ ನಾಲ್ಕುವರೆ ಅಡಿಗಳಾಗಿರುತ್ತವೆ. ಏಕಶಿಲೆಯಿಂದ ನಿರ್ಮಿತವಾಗಿದೆ.ಈ ಮೂರ್ತಿಯ ಪಕ್ಕದಲ್ಲಿ ಭೂದೇವಿ ಮತ್ತು ಶ್ರೀದೇವಿ ಶಿಲ್ಪಗಳಿವೆ. ಈ ಮೂರ್ತಿಯಲ್ಲಿ ಕಂಡುಬರುವ ವಿಶೇಷವೇನೆಂದರೆ ಈ ಮೂರ್ತಿಯ ಕೆಳಭಾಗದಲ್ಲಿ ಹಲವು ಶಿಲ್ಪಗಳಿವೆ. ಗರ್ಭಗುಡಿಯ ದ್ವಾರಕ್ಕೆ ಚದರಬಿಲ್ಲೆಯನ್ನು ಹಾಕಲಾಗಿದೆ.ಈ ದೇವಾಲಯದಲ್ಲಿರುವ ರಂಗನಾಥಸ್ವಾಮಿ ಮೂರ್ತಿಯನ್ನು ದೊಡ್ಡಬಳ್ಳಾಪುರ ತಾಲೂಕಿನ ಮಧುರೆ ಬಳಿಯ ಚನ್ನಅಗ್ರಹಾರ ಎಂಬ ಸ್ಥಳದಿಂದ ತಂದು ಪ್ರತಿಷ್ಠಾಪಿಸಲಾಗಿದೆ ಎಂದು ಈ ದೇವಾಲಯದ ನಿರ್ವಾಹಕರಾದ ಗೋಪಾಲಪ್ಪ ಎಂಬುವರು ತಿಳಿಸಿರುತ್ತಾರೆ.

**ಸುಖನಾಸಿ:** ಇದರ ಉದ್ದ 6 ಅಡಿ ಮತ್ತು ಅಗಲ 6 ಅಡಿಗಳು. ಸುಖನಾಸಿಯ ಎಡಭಾಗದಲ್ಲಿ ಉತ್ಸವ ಮೂರ್ತಿಗಳಿದ್ದು(ಚಿ.ಸಂ.89)ಇವು ಸುಮಾರು 500ವರ್ಷಕ್ಕಿಂತ ಹಳೆಯದೆಂದು ಈ ದೇವಾಲಯದ ನಿರ್ವಾಹಕರು ತಿಳಿಸಿರುತ್ತಾರೆ.ಸುಖನಾಸಿಯು ನಕ್ಷತ್ರಾಕಾರದ ಪೇದ್ಯವನ್ನು ಹೊಂದಿದ್ದು ಅದರ ಮಧ್ಯ ಅರಳಿದ ಪದ್ಮದಳ ಕೆತ್ತನೆಯಿದೆ.ದ್ವಾರಬಂಧದ ಇಕ್ಕೆಲಗಳಲ್ಲಿ ಸುಮಾರು ಒಂದು ಅಡಿ ಎತ್ತರದ ಪೀಠದ ಮೇಲೆ ನಿಂತಿರುವ ಭಂಗಿಯಲ್ಲಿರುವ ಜಯವಿಜಯರ ಶಿಲ್ಪಗಳಿದ್ದು, ಅದರ ಮೇಲ್ಭಾಗದಲ್ಲಿ ಸಾಲಾಂಕೃತ ಕೆತ್ತನೆಗಳಿದ್ದು ಅದರ ಮಧ್ಯಭಾಗದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.

**ನವರಂಗ:** ಇದರ ಉದ್ದ 25 ಅಡಿ ಮತ್ತು ಅಗಲ 15 ಅಡಿಗಳು.ಭಿತ್ತಿಗೆ ಹೊಂದಿಕೊಂಡಂತೆ ಎರಡು ಕಂಬಗಳು ಮತ್ತು ನವರಂಗದ ಮಧ್ಯಭಾಗದಲ್ಲಿ ಎರಡು ಕಂಬಗಳಿದ್ದು ಅವುಗಳ ಎತ್ತರ ಸುಮಾರು 8 ಅಡಿಗಳಾಗಿದ್ದು ಕಂಬಗಳು ಚೌಕ, ಅಷ್ಟ, ಷೋಡಷ ಮಾದರಿಯಲ್ಲಿದ್ದು ಕಂಬಗಳಲ್ಲಿ ಕುಂಭ, ಕಮಲ, ಕಾಳಿಂಗ ಮರ್ದನ, ಶಿವಲಿಂಗ, ವಾದ್ಯಗಾರರ ತಾಳಕ್ಕೆ ಕುಣಿಯುತ್ತಿರುವ ನರ್ತಕಿ ಗಣೇಶ, ಗರುಡ, ಚಕ್ರ, ಆನೆ, ವೇಣುಗೋಪಾಲ, ನಾಗಬಂಧ, ನರಸಿಂಹ ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ.(ಚಿ.ಸಂ.90) ಮುಖ್ಯಗರ್ಭಗೃಹದ ಎಡ ಮತ್ತು ಬಲಪಾರ್ಶ್ವದ ಗುಡಿಗಳಲ್ಲಿ ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ಶ್ರೀದೇವಿ ಮತ್ತು ಭೂದೇವಿಯ ಶಿಲ್ಪಗಳಿವೆ. ನವರಂಗದ ಎಡಭಾಗದಲ್ಲಿ ಕಲ್ಲು ಪೀಠದ ಮೇಲೆ ಎರಡು ಆಳ್ವಾರರ ಶಿಲ್ಪಗಳಿವೆ. ನವರಂಗದ ದ್ವಾರಶಾಖೆಯಲ್ಲಿ ಬಳ್ಳಿ ಸುರುಳಿಗಳು ಪೂರ್ಣಕುಂಬ ಮಾದರಿ ಮತ್ತು ಮೇಲ್ಬಾಗದಲ್ಲಿ ಲಲಾಟಬಿಂಬದಲ್ಲಿ ಪದ್ಮದ ಕೆತ್ತನೆ ಇದೆ.[67]

ದೇವಾಲಯದ ಮುಖ್ಯಗರ್ಭಗುಡಿಗೆ ಎದುರಾಗಿ ಪೀಠದಲ್ಲಿ ಕೈಮುಗಿಯುತ್ತಿರುವ ನಿಂತಿರುವ ಭಂಗಿಯಲ್ಲಿರುವ ಗರುಡ ಶಿಲ್ಪವಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ.ಇತ್ತೀಚೆಗೆ ಗರುಡಗಂಭವನ್ನು ಪ್ರತಿಷ್ಠಾಪಿಸಲಾಗಿದ್ದು ಅದರ ಎತ್ತರ ಸುಮಾರು 20

ಅಡಿಗಳಾಗಿದ್ದು(ಚಿ.ಸಂ.91) ಮೂಲಗರುಡಗಂಭವು ಮುರಿದು ಹೋಗಿದ್ದರಿಂದ ಹೊಸದಾಗಿ ಗರುಡಗಂಭವನ್ನು ನಿರ್ಮಿಸಲಾಗಿದೆ.

**ಚನ್ನರಾಯಸ್ವಾಮಿ ದೇವಾಲಯ-ನಲ್ಲೂರು:**

ನಲ್ಲೂರು ದೇವನಹಳ್ಳಿ ತಾಲೂಕು ಚನ್ನರಾಯಪಟ್ಟಣ ಹೋಬಳಿಯ ಒಂದು ಗ್ರಾಮವಾಗಿದ್ದು ದೇವನಹಳ್ಳಿಯಿಂದ ದಕ್ಷಿಣಕ್ಕೆ ಸುಮಾರು 9 ಕಿ.ಮೀ. ಮತ್ತು ವಿಜಯಪುರದಿಂದ ಸುಮಾರು 9 ಕಿ.ಮೀ ಹಾಗೂ ಬೆಂಗಳೂರು ನಗರದಿಂದ ಈಶಾನ್ಯ ದಿಕ್ಕಿಗೆ ಸುಮಾರು 46 ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ನಲ್ಲೂರನ್ನು ನಲ್ಲೂರು ಪಾರು, ನಲ್ಲೂರು ನಾಡು, ನಲ್ಲೂರು ಸೀಮೆ, ನಲ್ಲೂರು ರಾಜ್ಯ ಮತ್ತು ನಲ್ಲೂರು ಹೋಬಳಿಯೆಂದು ಉಲ್ಲೇಖಿಸಲಾಗಿದೆ. ಹಾಳುಬಿದ್ದ ನಲ್ಲೂರು ಪ್ರದೇಶವನ್ನು ನಲ್ಲೂರು ಕೋಟೆಯೆಂದು ಗುರುತಿಸಲಾಗುತ್ತದೆ. ನಲ್ಲೂರು ವ್ಯಾಪ್ತಿಯಲ್ಲಿ ಗಂಗಾದೇವಿ ದೇವಾಲಯ ಈ ದೇವಾಲಯದ ಆಗ್ನೇಯ ದಿಕ್ಕಿಗೆ ಹುಣಸೆಮರದ ತೋಪಿನಲ್ಲಿ ಚನ್ನರಾಯಸ್ವಾಮಿ ದೇವಾಲಯ ಮತ್ತು ಸುಮಾರು 400 ವರ್ಷಗಳ ಹಳೆಯದಾದ ಹುಣಸೆ ಮರಗಳ ತೋಪು ಇದೆ.ಈಪ್ರದೇಶವು ಈ ಹಿಂದೆ ನಲ್ಲೂರು ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿತ್ತು.ಸ್ಥಳ ಚರಿತ್ರೆ ಪ್ರಕಾರ ಇವರ ಕಾಲ ಕ್ರಿ.ಶ.1000 ದಿಂದ 1750 ವರೆಗೆ ಕಂಡುಬರುತ್ತದೆ.ನಲ್ಲೂರು ಕೋಟೆ ಪ್ರದೇಶವು ಈ ಹಿಂದೆ ಚೌಡರಾಯ ಎಂಬ ಪಾಳೆಗಾರನ ಆಳ್ವಿಕೆಗೆ ಒಳಪಟ್ಟಿತ್ತು.

**ನಿರ್ಮಾಣ ಕಾಲ**:ನಲ್ಲೂರು ಕೋಟೆ ಪ್ರದೇಶದ ಹುಣಸೆ ತೋಪುಗಳ ಮಧ್ಯದಲ್ಲಿ ಪಶ್ಚಿಮಾಭಿಮುಖವಾಗಿ ಈ ದೇವಾಲಯ ನಿರ್ಮಿಸಲ್ಪಟ್ಟಿದೆ.[68] ಈ ದೇವಾಲಯವು ಪ್ರಸ್ತುತ ಶಿಥಿಲಗೊಂಡಿದೆ.(ಚಿ.ಸಂ.92)ನಲ್ಲೂರು ರಾಮಸ್ವಾಮಿ ದೇವಾಲಯದ ಮುಂಭಾಗದ ಗರುಡಗಂಭದ ಬಳಿ ಇರುವ 1386ರ ಶಾಸನ ಮತ್ತು ಇದೇ ಸ್ಥಳದಲ್ಲಿರುವ 1401ರ ಶಾಸನಗಳಲ್ಲಿ ತಿರುಮಲನಾಥನನ್ನು ಉಲ್ಲೇಖಿಸಲಾಗಿದೆ. ತಿರುಮಲನಾಥ ಎದುರಿಗೆ ದೀಪಮಾಲೆ ಕಂಬ ಮತ್ತಿತರ ಶಿಲ್ಪ ಸೇವೆ ಬಗ್ಗೆ ಈ ಶಾಸನವು ಹೇಳುತ್ತವೆಯೇ ಹೊರತು ದೇವಾಲಯದ ನಿರ್ಮಾಣ ಕಾಲವಲ್ಲ. ಹೊಯ್ಸಳರ ಆಡಳಿತ ಅವಧಿಯ ಕೊನೆಯ ಭಾಗ ಅಥವಾ ವಿಜಯನಗರ ಅರಸರ ಆರಂಭಿಕ ಕಾಲದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ ಎಂಬ ಸುಳಿವು ಈ ಶಾಸನಗಳಿಂದ ಸಿಗುತ್ತದೆ.[69]

ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ ಮತ್ತು ಮುಖಮಂಟಪಗಳಿವೆ. ದೇವಾಲಯದ ವಿಸ್ತೀರ್ಣವು 26.9 ಅಡಿಗಳು ಮತ್ತು 14.7 ಅಡಿಗಳಾಗಿರುತ್ತದೆ.ಈ

ದೇವಾಲಯದ ಗರ್ಭಗೃಹಉದ್ದ 4.45 ಅಡಿ ಮತ್ತು ಅಗಲ 4.45 ಅಡಿಗಳಾಗಿದ್ದು ಮುಖಮಂಟಪದ ವಿಸ್ತೀರ್ಣವು ಉದ್ದ 2.7 ಮೀ.ಮತ್ತು ಅಗಲ 4.3 ಮೀಗಳಾಗಿರುತ್ತವೆ. ಗರ್ಭಗೃಹದ ಭಿತ್ತಿಯ ಮೇಲಿರುವ ಪ್ರಸ್ತರದ ಭಾಗ ಅಸ್ತಿತ್ವದಲ್ಲಿದ್ದು ಮುಖಮಂಟಪದ ಭಿತ್ತಿಯ ಮೇಲಿರುವ ಪ್ರಸ್ತರ ಬಿದ್ದು ಹೋಗಿರುತ್ತದೆ.ಬೋದಿಗೆಯ ತುಂಡು ಕಲ್ಲುಗಳು ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿವೆ. ಆಯಾತಾಕಾರದ ಬಿಳಿಗ್ರಾನೈಟ್ ಕಲ್ಲನ್ನು ಬಳಸಿ ದೇವಾಲಯವನ್ನು ನಿರ್ಮಿಸಲಾಗಿದೆ.ಕಲ್ಲುಗೋಡೆಯ ಮಧ್ಯದಲ್ಲಿ ಅಲ್ಲಲ್ಲಿ ಸುಟ್ಟ ಇಟ್ಟಿಗೆಗಳನ್ನು ಬಳಸಿದ್ದಾರೆ.ದೇವಾಲಯದ ಹಿಂಭಾಗದ ಎಡ ಭಿತ್ತಿ ಸುಸ್ಥಿತಿಯಲ್ಲಿದ್ದು ಬಲಭಾಗದ ಭಿತ್ತಿಯು ಶಿಥಿಲವಾಗಿದೆ.ಎಡ–ಬಲ–ಹಿಂಬದಿ ಭಿತ್ತಿಗಳ ಮೇಲೆ ಸುಂದರವಾದ ಶಿಲ್ಪಗಳನ್ನು ಕಂಡರಿಸಲಾಗಿದೆ.ಮುಖಮಂಟಪದ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ 2 ಅರ್ಧಕಂಬ ಮಾದರಿ ಮತ್ತು 2 ಮೂಲೆಗಂಬ ಮಾದರಿಗಳು ಕಂಡುಬಂದಿದ್ದು ಈ ಕಂಬಗಳ ಮೇಲೆ ಕಂಠ, ಮುಚ್ಚಳ, ಬೋಧಿಗೆಗಳನ್ನು ತೋರಿಸಲಾಗಿದ್ದು ಭಿತ್ತಿ ಮಾತ್ರ ನಿರಾಲಂಕಾರವಾಗಿದೆ.ಮುಖಮಂಟಪದ ಎಡಭಿತ್ತಿಯಲ್ಲಿ ಒಂದು ಮೂಲೆಗಂಬ, ಒಂದು ಅರ್ಧಗಂಬ ಒಂದು ದೇವಕೋಷ್ಟ ಎರಡು ಅರ್ಧಗಂಬ ಮಾದರಿಗಳಿರುತ್ತವೆ. ಗರ್ಭಗೃಹದ ಎಡಭಿತ್ತಿಯಲ್ಲಿ ಎರಡು ಮೂಲೆಗಂಬ, ನಾಲ್ಕು ಅರ್ಧಗಂಬ, ಒಂದು ದೇವಕೋಷ್ಟ ಕಂಡುಬರುತ್ತದೆ. ಇದೇ ಕ್ರಮವು ಬಲಬದಿಯಲ್ಲಿ ಅನುಸರಿಸಲ್ಪಟ್ಟಿದೆ.[70]

ಈ ದೇವಾಲಯದ ಉತ್ತರ ಮತ್ತು ಪಶ್ಚಿಮದ ಹೊರಗೋಡೆಗಳು ಬಿದ್ದುಹೋಗಿವೆ. ಮೇಲ್ಥಾವಣಿಯ ಕಲ್ಲುಗಳು ಚೆಲ್ಲಾಪಿಲ್ಲಿಯಾಗಿವೆ. ಈ ದೇವಾಲಯದ ಗರ್ಭಗುಡಿ, ನವರಂಗ, ಮುಖಮಂಟಪ ಭಾಗಗಳು ಕಳಚಿ ಬಿದ್ದಿವೆ. ಗರ್ಭಗುಡಿಯು ಹಾಳಾಗಿದ್ದು ಗರ್ಭಗುಡಿಯ ಮುಂಭಾಗ ಮತ್ತು ನವರಂಗಗಳು ಸರಿಯಾಗಿ ಗೋಚರಿಸುವುದಿಲ್ಲ. ಈ ದೇವಾಲಯದ ವಿಶೇಷವೇನೆಂದರೆ ಹೊಯ್ಸಳರ ಕಾಲದ ದೇವಾಲಯದಂತೆ ಒಳಗೋಡೆ ಮತ್ತು ಹೊರಗೋಡೆಗಳಿಂದ ನಿರ್ಮಿಸಲ್ಪಟ್ಟಿದೆ. ಒಳ ಮತ್ತು ಹೊರಗೋಡೆಗಳ ಮಧ್ಯೆ 1.3 ಇಂಚಿನ ಅಂತರವಿದೆ.ಈ ಜಾಗದಲ್ಲಿ ಇಟ್ಟಿಗೆ ಚೂರುಗಳು ಮಣ್ಣು ಇತ್ಯಾದಿ ಪರಿಕರಗಳನ್ನು ಹಾಕಿ ಸದಾಕಾಲ ಹವಾನಿಯಂತ್ರಣ ವ್ಯವಸ್ಥೆ ಇರುವಂತೆ ಮಾಡಿರುವುದು ಕಂಡುಬಂದಿದೆ.ಇದು ಗಂಗರ ಕಾಲದ ದೇವಾಲಯವೇ ಆಗಿದ್ದಲ್ಲಿ ಹವಾನಿಯಂತ್ರಿತ ಪದ್ಧತಿಯು ಹೊಯ್ಸಳರಿಗಿಂತ ಮುಂಚಿತವಾಗಿಯೇ ಗಂಗರ ಕಾಲದಲ್ಲಿಯೇ ಇತ್ತೆಂದು ಹೇಳಲು ಈ ದೇವಾಲಯವು ಸ್ಪಷ್ಟ ನಿದರ್ಶನವಾಗಿದೆ ಎಂದು ಹೇಳಬಹುದು.

ಅಧಿಷ್ಠಾನದ ಹೆಚ್ಚಿನ ಭಾಗವು ಭೂಮಿಯಲ್ಲಿ ಹೂತು ಹೋಗಿದೆ.ದೇವಾಲಯದ ಭಿತ್ತಿಗಳಲ್ಲಿ ಅಲಂಕಾರಿಕ ಉಬ್ಬು ಕೆತ್ತನೆಗಳನ್ನು ಮಾಡಲಾಗಿದೆ. ಹೊರಗೋಡೆಯ ಭಿತ್ತಿಯಲ್ಲಿ ದೇವಕೋಷ್ಟಗಳನ್ನು ನಿರ್ಮಿಸಿದ್ದು ಇವು ಯಾವುದೇ ಶಿಲ್ಪಗಳನ್ನು ಹೊಂದಿಲ್ಲ. ಪೂರ್ವಭಾಗದ ಪೂರ್ವಕೋಷ್ಟದ ಭಾಗ ಕಳಚಿ ಬಿದ್ದಿದ್ದು ಹೊರಗೋಡೆ ಮತ್ತು ಒಳಗೋಡೆಯ ಭಾಗಗಳು ಸ್ಪಷ್ಟವಾಗಿ ಕಾಣುತ್ತವೆ. (ಚಿ.ಸಂ.93)

**ಭಿತ್ತಿಯಲ್ಲಿನ ಶಿಲ್ಪಗಳು**

ಗರ್ಭಗೃಹದ ಬಲಭಿತ್ತಿಯ ಮೇಲಿರುವ ಶಿಲ್ಪದಲ್ಲಿ ವ್ಯಕ್ತಿಯು ಬಲಪಾದವನ್ನು ಬಲಕ್ಕೆ 45 ° ಡಿಗ್ರಿ ಮತ್ತು ಎಡಪಾದವನ್ನು 45 ° ಡಿಗ್ರಿಯಷ್ಟು ತಿರುಗಿಸುತ್ತಿದ್ದಾನೆ. ಪಾದಗಳಿಗೆ ಬಳೆಯಾಕಾರದ ಆಭರಣ, ಕಾಲ್ಗಡ, ಸೊಂಟಕ್ಕೆ ಗೆಜ್ಜೆ, ಉದರಬಂಧ, ಕಂಠಿಹಾರ, ಕೈಕಡಗ, ತೋಳ್ಬಂದಿ ಇದ್ದು ತಲೆಯ ಮೇಲಿನ ಜಡೆಯು ಕಿವಿಯ ಮೇಲೆ ಇಳಿಬಿದ್ದಿರುತ್ತದೆ.ತಲೆಗೂದಲಿನ ಕೊನೆಯಲ್ಲಿ ಕಟ್ಟಿದ ಮಣಿಸರದ ಅಂಚುಗಳು ಎರಡು ಭುಜಗಳ ಮೇಲೆ ಇಳಿಬಿದ್ದಿವೆ. ಕೈಗಳ ಕಿರುಬೆರಳನ್ನು ಗದ್ದದ ಮೇಲಿಟ್ಟು ತೋರು ಬೆರಳುಗಳನ್ನು ಕರ್ಣಕುಂಡಲಕ್ಕೆ ಸ್ಪರ್ಶಿಸಿರುತ್ತಾನೆ.

ಇನ್ನೊಂದು ಉಬ್ಬುಶಿಲ್ಪದಲ್ಲಿ ಎಡಗಾಲು ಮಡಚಿ ಬಲಗಾಲನ್ನು ಕೆಳಗೆ ಇಳಿಬಿಟ್ಟು ಕುಳಿತ ವ್ಯಕ್ತಿ (ಬಾಲಕೃಷ್ಣ) ಯು ತನ್ನ ಎಡಗೈಯಲ್ಲಿ ಹಿಡಿದುಕೊಂಡಿದ್ದ ಪಾತ್ರೆಯಿಂದ ಬೆಣ್ಣೆ ತಿನ್ನುತ್ತಿದ್ದಾನೆ.ಕಾಲ್ಗಡಗ, ಸೊಂಟಕ್ಕೆ ಡಾಬು, ತೋಳುಬಂದಿ, ಕರ್ಣಕುಂಡಲ ಕೇಶರಾಶಿಯನ್ನು ಬಿಡಿಸಲಾಗಿದ್ದು ಶರೀರದ ಅವಯವಗಳು ಬಾಲಕೃಷ್ಣನನ್ನು ಹೋಲುತ್ತಿದ್ದರೆ ಮುಖಮಾತ್ರ ಈ ಶಿಲ್ಪದಲ್ಲಿ ವಯಸ್ಕನಂತೆ ಕಂಡುಬರುತ್ತದೆ.

ಮತ್ತೊಂದು ಶಿಲ್ಪವೆಂದರೆ ಜಲಕ್ರೀಡೆಯ ಸಂದರ್ಭದಲ್ಲಿ ಗೋಪಿಕಾ ಸ್ತ್ರೀಯರನ್ನು ಕೃಷ್ಣನು ಕಾಡುತ್ತಿರುವುದು ಕೃಷ್ಣನು ಮರದ ಮೇಲೆ ಹತ್ತಿ ಗೋಪಿಕಾ ಸ್ತ್ರೀಯರ ಬಟ್ಟೆಗಳನ್ನು ಹಿಡಿದುಕೊಂಡಿರುವುದು ಗೋಪಿಕಾ ಸ್ತ್ರೀಯರಲ್ಲಿ ಒಬ್ಬಳು ಎರಡು ಕೈಗಳಿಂದ ಬಟ್ಟೆಗಳನ್ನು ಕೊಡಬೇಕೆಂದು ಬೇಡುತ್ತಿರುವುದು ಮತ್ತೊಬ್ಬಳು ಚಿಂತಾಕ್ರಾಂತಾಳಾಗಿರುವುದು ಕಂಡುಬರುತ್ತದೆ.ಜಲಕ್ರೀಡೆಯ ಪಕ್ಕದ ಜಾಗದಲ್ಲಿ ಜಲಚರಗಳನ್ನು ಕೆತ್ತಲು ಮಾಡಿಕೊಂಡಿರುವ ಕಚ್ಚಾ ಕೆತ್ತನೆಗಳನ್ನು ರೇಖಾಚಿತ್ರದಲ್ಲಿ ಬಿಡಿಸಲಾಗಿರುವುದು ಕಂಡುಬರುತ್ತದೆ.

ಮತ್ತೊಂದು ಪ್ರಮುಖ ಶಿಲ್ಪವೆಂದರೆ ಕೊಳಲು ನುಡಿಸುತ್ತಿರುವ ಕೃಷ್ಣ, ನೃತ್ಯದಲ್ಲಿ ಭಾಗಿಯಾಗಿರುವ ಸ್ತ್ರೀಪುರುಷರು, ಹೆಂಗಸಿನ ಬಲಗೈಯಲ್ಲಿ ನೃತ್ಯದ ಭದ್ರಚಿಹ್ನೆ, ಸ್ತ್ರೀ ಪುರುಷರ ಉಡುಗೆಗಳು, ಸ್ತ್ರೀಯರ ಸೀರೆ ಮತ್ತು ಜಡೆಯನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ.ಸ್ತ್ರೀಯರ ಆಭರಣದ

ಕಂಠಿಹಾರ, ಕಾಲುಬಂಧಿಗಳು ಆಕರ್ಷಕವಾಗಿ ಕೆತ್ತಲ್ಪಟ್ಟಿವೆ. ಇತರೆ ಶಿಲ್ಪಗಳೆಂದರೆ ಕೃಷ್ಣನು ಕೊಳಲನ್ನು ಹಿಡಿದಿರುವುದು ಮತ್ತು ಗೋವುಗಳು ಕತ್ತೆತ್ತಿ ಆತನನ್ನು ನೋಡುತ್ತಿರುವುದು, ಕಾಳಿಂಗ ಮರ್ಧನ ಮುಂತಾದವು.[71](ಚಿ.ಸಂ.94)

**ಕೋದಂಡರಾಮಸ್ವಾಮಿ ದೇವಾಲಯ–ವಿಜಯಪುರ:**

ಇದು ವೈಷ್ಣವ ದೇವಾಲಯವಾಗಿದ್ದು ವಿಜಯಪುರ ಪಟ್ಟಣದ ಗಾಂಧಿಚೌಕದ ಬಳಿಯಿದೆ, ಈ ದೇವಾಲಯವು ನಗರೇಶ್ವರ ದೇವಾಲಯಕ್ಕೆ ತಾಕಿಕೊಂಡಿದ್ದುದಕ್ಷಿಣಾಭಿಮುಖವಾಗಿದೆ.(ಚಿ.ಸಂ.95)ಈ ದೇವಾಲಯವು ಮೈಸೂರು ಒಡೆಯರ ಕಾಲಕ್ಕೆ ಸೇರಿದ್ದುಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ.ಈ ದೇವಾಲಯವನ್ನು ಮಧುರೈ ಚನ್ನಬಸಪ್ಪ ಎಂಬುವರು ನಿರ್ಮಿಸಿದರು ಎಂದು ಈ ದೇವಾಲಯದ ನಿರ್ವಾಹಕರಾದ ಚಂದ್ರಕಾಂತ್ ಮತ್ತು ಅರ್ಚಕರಾದ ಕೇಶವಭಟ್ಟಚಾರ್ಯ ಎಂಬುವರು ತಿಳಿಸಿರುತ್ತಾರೆ.ಈ ದೇವಾಲಯವು ತ್ರಿಕೂಟಚಲವಾಗಿದ್ದು 3 ಗರ್ಭಗುಡಿಗಳನ್ನು ಹೊಂದಿದೆ.ಮುಖ್ಯ ಗರ್ಭಗುಡಿಯಲ್ಲಿ ಕೋದಂಡರಾಮನ ಶಿಲ್ಪವಿದ್ದು ಕೋದಂಡರಾಮನನ್ನು ಪೀಠದ ಮೇಲೆ ಪ್ರತಿಷ್ಠಾಪಿಸಿದ್ದು ಸಮಭಂಗಿಯಲ್ಲಿ ನಿಲ್ಲಿಸಲಾಗಿದೆ.ಕೋದಂಡರಾಮನು ಎರಡು ಕೈಗಳಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದಿದ್ದಾನೆ. ಪ್ರಭಾವಳಿಯಲ್ಲಿ ಮಣಿಸರ ಅಲಂಕರಣೆಗಳು ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಕೋದಂಡ ರಾಮನ ಎಡಭಾಗದಲ್ಲಿ ಸೀತೆ ಮತ್ತು ಬಲಭಾಗದಲ್ಲಿ ಲಕ್ಷ್ಮಣರ ಶಿಲ್ಪಗಳಿವೆ. (ಚಿ.ಸಂ.96)ರಾಮಲಕ್ಷ್ಮಣ ಸೀತೆಯ ಶಿಲ್ಪಗಳು ಮದ್ದೂರಿನ ಹೊಯ್ಸಳರ ಕಾಲದ ಉಗ್ರನರಸಿಂಹ ಮತ್ತು ವಿಜಯನಗರದ ಕಾಲದ ರಾಮಲಕ್ಷ್ಮಣ ಸೀತೆ ಶಿಲ್ಪಗಳಿಗೆ ಸ್ಪಷ್ಟವಾಗಿ ಹೋಲುತ್ತದೆ.[72]ಗರ್ಭಗುಡಿಯ ಭುವನೇಶ್ವರಿಯಲ್ಲಿ ಅರಳಿದ ಕಮಲದ ಕೆತ್ತನೆಯಿದೆ ಗರ್ಭಗುಡಿಯ ದ್ವಾರವು ಉದ್ದ 3 ಅಡಿ ಮತ್ತು ಅಗಲ 6 ಅಡಿಗಳನ್ನು ಹೊಂದಿದೆ. ದ್ವಾರಶಾಖೆಯ ಲಲಾಟಬಿಂಬದಲ್ಲಿ ಕಮಲ ಮತ್ತು ಲಲಾಟಬಿಂಬದ ಕಪೋತ ಭಾಗದಲ್ಲಿ ಕಮಲ ಮತ್ತು ಮಹಾನಾಸಿಯ ಕೆತ್ತನೆ ದ್ವಾರ ಶಾಖೆಯ ಕೆಳಭಾಗದಲ್ಲಿ ಸುದರ್ಶನ ಚಕ್ರ ಮತ್ತು ಪೂರ್ಣಕುಂಬಗಳ ಕೆತ್ತನೆಗಳು ಕಂಡುಬರುತ್ತವೆ.

ಮುಖ್ಯಗರ್ಭಗುಡಿಯ ಬಲಭಾಗದಲ್ಲಿ ಭಕ್ತ ಆಂಜನೇಯನ ಶಿಲ್ಪವಿದ್ದು ರಾಮಕೋಟಿಗೋಸ್ಕರ ಇದನ್ನು ಪ್ರತಿಷ್ಠಾಪಿಸಲಾಗಿದೆ.ಮುಖ್ಯಗರ್ಭಗೃಹದ ಎಡಭಾಗದಲ್ಲಿ ವಿಶ್ವಕ್‌ಸೇನರ ಗುಡಿಯಿದೆ.ಅದರ ಎಡಭಾಗದಲ್ಲಿ ಯಮುನಚಾರ್ಯ, ನಮ್ಮಾಳ್ವಾರ್,ಗರುಡರಶಿಲ್ಪಗಳಿವೆ. ಸುಖನಾಸಿಯು ಕಂಡುಬರುವುದಿಲ್ಲ.

**ನವರಂಗ:** ನವರಂಗದ ಉದ್ದ 30 ಅಡಿ ಮತ್ತು ಅಗಲ 12 ಅಡಿಗಳಾಗಿದ್ದುನವರಂಗದಲ್ಲಿ 6 ಕಂಬಗಳಿದ್ದು ಅವುಗಳ ಎತ್ತರ ಸುಮಾರು 8 ಅಡಿಗಳಾಗಿದ್ದು ಚೌಕ ಅಷ್ಟ ಮುಷ್ಠಿಬಂದ ಬೋದಿಗೆ ಹೊಂದಿದ್ದು ಸರಳವಾಗಿದೆ.(ಚಿ.ಸಂ.97)ನವರಂಗ ದ್ವಾರದಲ್ಲಿ ಬಳ್ಳಿ ಸುರುಳಿ ಕೀರ್ತಿಮುಖ ಚಕ್ರ ಪದ್ಮಬಂದ ಕೆತ್ತನೆಗಳಿದ್ದು ದ್ವಾರಶಾಖೆಯ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರಾದ ಜಯವಿಜಯರ ಶಿಲ್ಪಗಳಿವೆ.

**ಮುಖಮಂಟಪ:** ಆಯಾತಾಕಾರದಲ್ಲಿದ್ದು ಇದರ ವಿಸ್ತೀರ್ಣವು ಉದ್ದ 30 ಅಡಿ ಮತ್ತು 8 ಅಡಿಗಳಾಗಿರುತ್ತದೆ. ಮುಖಮಂಟಪದಲ್ಲಿ 6 ಕಂಬಗಳಿದ್ದು ಅವುಗಳ ಎತ್ತರ ಸುಮಾರು 8 ಅಡಿಗಳಾಗಿದ್ದು(ಚಿ.ಸಂ.98)ಈ ಕಂಬಗಳು ಚೌಕ ಅಷ್ಟ ಷೋಡಶ ಮಾದರಿಯಲ್ಲಿದೆ ಕಂಬಗಳ ಮೇಲೆ ಚಕ್ರ, ಆಂಜನೇಯ ಸರ್ಪ ಪದ್ಮ ತಿರುನಾಮ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ.ಮುಖಮಂಟಪದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯಿದ್ದು ಎಡಭಾಗದಲ್ಲಿ ಕೂರ್ಮ ಮತ್ಸ್ಯ ಮತ್ತು ಬಲಭಾಗದಲ್ಲಿ ಸರ್ಪ ಹಾಗು ಮಧ್ಯಭಾಗದಲ್ಲಿ 3 ಹಂತದ ನಕ್ಷತ್ರಾಕಾರದ ಕಮಲದ ಕೆತ್ತನೆಗಳಿವೆ.

ಮುಖಮಂಟಪ ಛಾವಣಿಯ ಮೇಲೆ ಕಪೋತವಿದ್ದು ಅದರಲ್ಲಿ ಅಲಂಕಾರಿಕ ಕೆತ್ತನೆಗಳಿವೆ, ಅದರ ಮೇಲ್ಭಾಗದಲ್ಲಿ ಕುಳಿತಿರುವ ಪಾರಿವಾಳಗಳ ಸಾಲು ಪದ್ಮದಳಗಳ ಅಲಂಕಾರಿಕ ಕೆತ್ತನೆಗಳಿವೆ, ವೇದಿ ಬಂಧದಲ್ಲಿ 5 ದೇವಕೋಷ್ಟವಿದ್ದು ಆ ದೇವಕೋಷ್ಟದಲ್ಲಿ ರಾಮ ಲಕ್ಷ್ಮಣ ಸೀತೆ ಭಕ್ತ ಆಂಜನೇಯ ವೆಂಕಟೇಶ ಶ್ರೀನಿವಾಸ ವೇಣುಗೋಪಾಲ ಗಜೇಂದ್ರ ವೈಕುಂಠ ನಾರಾಯಣರವರ ಗಾರೆ ಶಿಲ್ಪಗಳಿರುವುದು ಕಂಡುಬರುತ್ತದೆ.

**ಶ್ರೀವೆಂಕಟರಮಣಸ್ವಾಮಿ ದೇವಾಲಯ-ದೇವನಹಳ್ಳಿ:**

ಶ್ರೀನಗರೇಶ್ವರ ದೇವಾಲಯದ ವ್ಯಾಪ್ತಿಯಲ್ಲಿಯೇ ಎಡಭಾಗದಲ್ಲಿ ವೆಂಕಟರಮಣಸ್ವಾಮಿ ದೇವಾಲಯವಿದೆ.ನಗರೇಶ್ವರಸ್ವಾಮಿ ದೇವಾಲಯವು ಶೈವ ದೇವಾಲಯವಾಗಿದ್ದು ಈ ದೇವಾಲಯದ ಎಡಭಾಗದಲ್ಲಿ ಶ್ರೀವೆಂಕಟರಮಣ ಸ್ವಾಮಿ ವೈಷ್ಣವ ದೇವಾಲಯವಿದ್ದು, ಈ ಎರಡು ದೇವಾಲಯಗಳು ಹೊಂದಿಕೊಂಡಂತೆ ಅಕ್ಕಪಕ್ಕದಲ್ಲಿರುವುದು ಧಾರ್ಮಿಕ ಸಾಮರಸ್ಯಕ್ಕೆ ಸ್ಪಷ್ಟ ನಿದರ್ಶನವಾಗಿದೆ ಎನ್ನಬಹುದು.ಈ ದೇವಾಲಯವು ವಿಜಯನಗರ ಶೈಲಿಯಲ್ಲಿದೆ, ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ, ಸುಖನಾಸಿ, ನವರಂಗಗಳನ್ನು ಹೊಂದಿದೆ.(ಚಿ.ಸಂ.99)

**ಗರ್ಭಗೃಹ:** ಇದರ ಉದ್ದ 6 ಅಡಿ ಮತ್ತು ಅಗಲ 8 ಅಡಿಗಳಾಗಿದ್ದುಗರುಡಪೀಠದ ಮೇಲೆ ಮಧ್ಯಭಾಗದಲ್ಲಿ ಸುಮಾರು ಎರಡೂವರೆ ಅಡಿ ಎತ್ತರದಲ್ಲಿ ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟಿರುವ

ಶ್ರೀ ವೆಂಕಟರಮಣಸ್ವಾಮಿ ಮೂರ್ತಿಇದೆ. (ಚಿ.ಸಂ.100)ವೆಂಕಟರಮಣಸ್ವಾಮಿಯು ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಶಂಖ, ಚಕ್ರ ಮತ್ತೊಂದು ಕೈಯಲ್ಲಿ ಅಭಯ ಹಸ್ತ, ಇನ್ನೊಂದು ಕೈ ಸೊಂಟದ ಮೇಲಿದೆ.ಮೂರ್ತಿಯ ಸುತ್ತಲೂ ಪ್ರಭಾವಳಿ ಇದ್ದು ಇದರಲ್ಲಿ ಲತಾಬಳ್ಳಿ ಮತ್ತು ಕೀರ್ತಿಮುಖವಿದೆ.ವೆಂಕಟರಮಣಸ್ವಾಮಿ ಮೂರ್ತಿಯ ಬಲಭಾಗದಲ್ಲಿ ಶ್ರೀದೇವಿಯ ಶಿಲ್ಪವಿದ್ದು ಅದು ಕಪ್ಪು ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಸುಮಾರು ಎರಡೂವರೆ ಅಡಿ ಎತ್ತರವನ್ನು ಹೊಂದಿದೆ.ವೆಂಕಟರಮಣಸ್ವಾಮಿಯ ಎಡಭಾಗದಲ್ಲಿ ಭೂದೇವಿ ಶಿಲ್ಪವಿದೆ.ಗರ್ಭಗುಡಿಯಲ್ಲಿ ಭುವನೇಶ್ವರಿ ಕಾಣಬರುವುದಿಲ್ಲ. ಗರ್ಭಗುಡಿಯ ದ್ವಾರಶಾಖೆಯಲ್ಲಿ ಕಮಲದ ಹೂ ದಳಗಳು ಮತ್ತು ಎರಡು ಪಾರ್ಶ್ವಗಳಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಕೆತ್ತನೆ ಕಂಡುಬರುತ್ತದೆ.

**ಸುಖನಾಸಿ**

ಇದರ ಉದ್ದ 6 ಅಡಿ ಮತ್ತು ಅಗಲ 8 ಅಡಿಗಳಾಗಿದ್ದು ದೇವಕೋಷ್ಠದಲ್ಲಿ ಶಂಕರಚಾರ್ಯರ ಶಿಲ್ಪವಿದೆ.(ಚಿ.ಸಂ.101)ಸುಖನಾಸಿಗೆ ಇತ್ತೀಚಿಗೆ ಚದರಬಿಲ್ಲೆಗಳನ್ನು ಹಾಕಲಾಗಿದೆ.ಸುಖನಾಸಿಯ ದ್ವಾರಶಾಖೆಯ ಇಕ್ಕೆಲಗಳಲ್ಲಿ ದ್ವಾರಪಾಲಕರು, ಲತಾ ಬಳ್ಳಿ, ಸುರುಳಿ ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಕೆತ್ತನೆ ಕಂಡು ಬರುತ್ತದೆ.

**ನವರಂಗ**: ನವರಂಗವು 4 ಪ್ರಧಾನ ಕಂಬಗಳನ್ನು ಹೊಂದಿದ್ದು ಅವು ಚೌಕ, ಅಷ್ಟ, ಷಡೋಷ ಮಾದರಿಯನ್ನು ಹೊಂದಿದ್ದು 3 ಹಂತಗಳಲ್ಲಿ ರಚನೆಯಾಗಿದ್ದು, ಮುಷ್ಟಿಬಂಧ ಬೋದಿಗೆಯನ್ನು ಹೊಂದಿದೆ.ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಕಂಬಗಳಲ್ಲಿ ನಂದಿ, ಆನೆ, ನರ್ತಕಿ, ಆಂಜನೇಯ, ಎರಡು ವಾನರು ದರ್ಪಣ ಸುಂದರಿ, ನವಿಲು, ಚಕ್ರ, ಹುಲಿ, ಪೂರ್ಣಕುಂಬ, ಗರುಡ ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ.(ಚಿ.ಸಂ.102)ನಾಲ್ಕು ಕಂಬಗಳ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ 3 ಹಂತಗಳನ್ನೊಳಗೊಂಡ ಭುವನೇಶ್ವರಿ ಇದ್ದು ಭುವನೇಶ್ವರಿಯ ಮಧ್ಯಭಾಗದಲ್ಲಿ ಪದ್ಮಬಂಧ ಕೆತ್ತನೆ ಕಂಡುಬರುತ್ತದೆ.ಗೋಡೆ ಮತ್ತು ನೆಲಹಾಸಿಗೆಗೆ ನೆಲಹಾಸನ್ನು ಹಾಕಲಾಗಿದೆ.ನವರಂಗದ ದ್ವಾರಶಾಖೆಯಲ್ಲಿ ದ್ವಾರಪಾಲಕರು ಬಳ್ಳಿ ಸುರಳಿ ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಕೆತ್ತನೆಗಳಿವೆ. ನವರಂಗದ ಮುಂಭಾಗದಲ್ಲಿ ಬಲಿಪೀಠವಿದೆ. ಬಲಿಪೀಠದ ಮುಂಭಾಗದಲ್ಲಿ ಸುಮಾರು ಎರಡೂವರೆ ಅಡಿ ಎತ್ತರದ ಪೀಠದ ಮೇಲೆ ಸುಮಾರು 12 ಎತ್ತರದ ಗರುಡಗಂಭವನ್ನು ಪ್ರತಿಷ್ಠಾಪಿಸಲಾಗಿದ್ದು ಈ ಗರುಡಗಂಭದ ತಳಭಾಗದಲ್ಲಿ ಆಂಜನೇಯ, ಶಂಖ, ಚಕ್ರ, ತಿರುನಾಮ ಮುಂತಾದ ಉಬ್ಬು ಶಿಲ್ಪಗಳಿವೆ.[73]

**ಚನ್ನರಾಯಸ್ವಾಮಿ ದೇವಾಲಯ–ಚನ್ನರಾಯಪಟ್ಟಣ:**

ಚನ್ನರಾಯಪಟ್ಟಣವು ದೇವನಹಳ್ಳಿ ತಾಲೂಕಿನ ಹೋಬಳಿ ಕೇಂದ್ರ ಮತ್ತು ಗ್ರಾಮವಾಗಿದ್ದು ದೇವನಹಳ್ಳಿಯಿಂದ ಸುಮಾರು 9 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಪ್ರವೇಶದಲ್ಲಿ ವಿಜಯನಗರೋತ್ತರ ಕಾಲಕ್ಕೆ ಸೇರಿದ ಚನ್ನರಾಯಸ್ವಾಮಿ ದೇವಾಲಯವಿದೆ.(ಚಿ.ಸಂ.103)ಇದು ಪಶ್ಚಿಮಾಭಿಮುಖವಾಗಿದ್ದು ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ.ಈ ದೇವಾಲಯದಿಂದಾಗಿ ಈ ಊರಿಗೆ ಚನ್ನರಾಯಪಟ್ಟಣ ಎಂಬ ಹೆಸರು ಬಂದಿದೆ ಎಂದು ಸ್ಥಳೀಯರು ತಿಳಿಸಿರುತ್ತಾರೆ.ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ, ನವರಂಗ, ಮುಖಮಂಟಪಗಳನ್ನು ಒಳಗೊಂಡಿದೆ.

**ಗರ್ಭಗೃಹ:** ಗರ್ಭಗೃಹವು ಆಯತಾಕಾರದಲ್ಲಿದ್ದು ಪೀಠದ ಮೇಲೆ ಏಕಶಿಲೆಯಲ್ಲಿ ಚನ್ನರಾಯಸ್ವಾಮಿ ಮತ್ತು ಇಕ್ಕೆಲಗಳಲ್ಲಿ ಭೂದೇವಿ ಮತ್ತು ಶ್ರೀದೇವಿಯರ ಶಿಲ್ಪಗಳಿವೆ.(ಚಿ.ಸಂ.104) ದ್ವಾರದ ಉದ್ದ 2 ಅಡಿ ಮತ್ತು ಅಗಲ 4 ಅಡಿಗಳಾಗಿದ್ದು ದ್ವಾರವು ಸರಳವಾಗಿದ್ದು ಅಲಂಕಾರಿಕ ಪಟ್ಟಿಕೆಗಳಿಂದ ಕೂಡಿದ್ದು ದ್ವಾರಶಾಖೆಯ ಮೇಲ್ಭಾಗದಲ್ಲಿ ತಿರುನಾಮ ಶಂಖ ಚಕ್ರವಿದೆ. ಸುಖನಾಸಿಯು ಕಂಡುಬರುವುದಿಲ್ಲ.

**ನವರಂಗ:** ನವರಂಗದ ಉದ್ದ 20 ಅಡಿ ಮತ್ತು ಅಗಲ 20 ಅಡಿಗಳಾಗಿದ್ದು ವಿಜಯನಗರೋತ್ತರ ಕಾಲದ 4 ಪ್ರಧಾನ ಕಂಬಗಳಿದ್ದು ಅವುಗಳ ಎತ್ತರ ಸುಮಾರು ಐದೂವರೆ ಅಡಿ ಆಗಿದ್ದು ಅವು ಚೌಕ, ಅಷ್ಟ ಸರಳ ಬೋದಿಗೆಯನ್ನು ಹೊಂದಿದೆ.ನವರಂಗದ ಮಧ್ಯಭಾಗದಲ್ಲಿ 3 ಹಂತಗಳಿಂದ ಕೂಡಿದ ಕಮಲ ರಚನೆಯ ಭುವನೇಶ್ವರಿ ಇದೆ.

**ಮುಖಮಂಟಪ:** ಎರಡು ಮುಖಮಂಟಪಗಳು ಕಂಡುಬರುತ್ತವೆ. ಮೊದಲನೆ ಮುಖಮಂಟಪದಲ್ಲಿ 6 ಅಡಿ ಎತ್ತರದ 2 ಕಂಬಗಳಿದ್ದು ಕಂಬಗಳ ರಚನೆಯು ಸಾಧಾರಣವಾಗಿದೆ. ಮುಖಮಂಟಪಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಪ್ರವೇಶ ದ್ವಾರಗಳಿವೆ. 2ನೇ ಮುಖಮಂಟಪದಲ್ಲಿ ಭಿತ್ತಿಗೆ ಸೇರಿದಂತೆ 4 ಕಂಬಗಳಿದ್ದು ಅವು ಸುಮಾರು 6 ಅಡಿ ಎತ್ತರವನ್ನು ಹೊಂದಿದೆ.ಮುಖಮಂಟಪದ ಎರಡು ಪಾರ್ಶ್ವಗಳಲ್ಲಿ ಕಕ್ಷಾಸನವಿದೆ. ಈ ದೇವಾಲಯದ ಭಿತ್ತಿಗೆ ಹೊಂದಿಕೊಂಡಂತೆ ದಕ್ಷಿಣ ದಿಕ್ಕಿನಲ್ಲಿ 2 ವೀರಗಲ್ಲುಗಳು ಕಂಡುಬಂದಿದ್ದುಈ ದೇವಾಲಯದ ಅನತಿ ದೂರದಲ್ಲಿಎಡಭಾಗದ ರಸ್ತೆ ಪಕ್ಕದಲ್ಲಿ ಯಂತ್ರಕಲ್ಲು ಕಂಡುಬಂದಿದ್ದು ಮತ್ತು ದಕ್ಷಿಣ ದಿಕ್ಕಿನಲ್ಲಿ ಬಸವೇಶ್ವರ ಮತ್ತು ಚಂದ್ರಮೌಳೇಶ್ವರ ದೇವಾಲಯಗಳಿವೆ.[74]

**ಕಲ್ಯಾಣಿ:**ಈ ಕಲ್ಯಾಣಿಯು ಈ ದೇವಾಲಯದ ಹಿಂಭಾಗದಲ್ಲಿದ್ದುತ್ರಿಭುಜಾಕೃತಿಯಲ್ಲಿದೆ.ಬಿಳಿ ಮತ್ತು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಇಳಿಜಾರು ಮಾದರಿಯಲ್ಲಿ 25 ಮೆಟ್ಟಿಲು ಹಂತಗಳನ್ನು

ಒಳಗೊಂಡಿದೆ.ಈ ಕಲ್ಯಾಣಿಗೆ ಹೊಂದಿಕೊಂಡಂತೆ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಎರಡು ಕಲ್ಲುಮಂಟಪಗಳಿವೆ. ಈ ಕಲ್ಯಾಣಿಗೆ ಪಶ್ಚಿಮದ ಕಡೆಯಿಂದ ಪ್ರವೇಶವಿದ್ದು 3 ಕಡೆ ಇಳಿಜಾರಿದ್ದು ಪೂರ್ವದಿಕ್ಕಿನಲ್ಲಿ ಕಲ್ಲಿನ ತಡೆ ಗೋಡೆಯಿದೆ. (ಚಿ.ಸಂ.105)

# ಶಾಕ್ತ ದೇವತೆಗಳು

**ಪೀಠಿಕೆ**

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಾತೃದೇವತರಾಧನೆಯು ನಿರಂತರವಾಗಿ ಸಾಗುತ್ತ ಬಂದಿದೆ.ಮನುಷ್ಯನು ತನಗೆ ತೊಂದರೆಯಾಗದಂತೆ ರಕ್ಷಿಸಿಕೊಳ್ಳಲು ತಾಯಿಯ ರೂಪವನ್ನೇ ಪೂಜೆಯ ಕೇಂದ್ರಬಿಂದುವಾಗಿಸಿದನು.ಮಕ್ಕಳಿಗೆ ರೋಗ-ರುಜಿನೆಗಳು ಕಾಡಿದಾಗ, ಮಳೆ-ಬೆಳೆಗಳ ವಿಷಯದಲ್ಲಿ ತೊಂದರೆಯಾದಾಗ ದೇವಿಯನ್ನು ಪೂಜಿಸಿ ಪರಿಹಾರವನ್ನು ಕಂಡುಕೊಂಡನು. ಇದರಿಂದಾಗಿ ಮಾತೃದೇವತಾ ಆರಾಧನ ಪದ್ಧತಿ ಬೆಳೆದುಬಂದು, ಮಾತೃದೇವತೆಗಳು ಆ ಪ್ರದೇಶದ ಗ್ರಾಮದೇವತೆ, ಊರ ದೇವತೆ, ನಾಡದೇವಿಯೆಂದು ನಿರಂತರವಾಗಿ ಪೂಜಿಸಲ್ಪಡುತ್ತಿದ್ದಾಳೆ.[75]

ಸಪ್ತಮಾತೃಕ ಶಿಲ್ಪಗಳು ಗಂಗವಾಡಿಯ ಎಲ್ಲಾ ದೇವಾಲಯಗಳಲ್ಲಿ ಪಂಚಯಾತನದ ಭಾಗವಾಗಿ ಇಲ್ಲವೇ ಸ್ವತಂತ್ರವಾದ ಗ್ರಾಮದೇವತೆಯ ದೇವಾಲಯಗಳಲ್ಲಿ ಪೂಜೆಗೊಳ್ಳುತ್ತಿರುವುದು ವಿಶೇಷವಾಗಿದೆ. ಇವುಗಳನ್ನು ಮೂರ್ತ ಮತ್ತು ಅಮೂರ್ತ ರೂಪಗಳೆರಡರಿಂದಲೂ ಪೂಜಿಸುತ್ತಾರೆ.ಮೂರ್ತ ರೂಪಗಳಲ್ಲಿ ಒಟ್ಟಾಗಿ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ನವಿ, ವರಾಹಿ, ಇಂದ್ರಾಣಿ, ಚಾಮುಂಡಿ ಎಂಬ ರೂಪಗಳಲ್ಲಿ ಕಂಡುಬರುತ್ತವೆ. ಈ ಶಿಲ್ಪಗಳ ಜೊತೆಗೆ ಆರಂಭದಲ್ಲಿ ವೀಣಾಧರ ಶಿವ ಅಂತ್ಯದಲ್ಲಿ ಗಣಪತಿ ಶಿಲ್ಪವನ್ನು ಬಿಡಿಸಲಾಗಿರುತ್ತದೆ.೯ ಶಿಲ್ಪಗಳನ್ನು ಒಂದೇ ಕಲ್ಲಿನಲ್ಲಿ ಪಟ್ಟಿಕೆಯಂತೆ ಬಿಡಿಸಿರುವುದುಂಟು.ಒಂದೊಂದು ಶಿಲ್ಪವನ್ನು ಬಿಡಿ ಬಿಡಿಯಾಗಿ ಬಿಡಿಸಿರುವುದು ಉಂಟು.ಎಲ್ಲಾ ವಿಗ್ರಹಗಳು ಒಂದೇ ಎತ್ತರದಲ್ಲಿದ್ದರೆ ಚಾಮುಂಡಿ ವಿಗ್ರಹವನ್ನು ಮಾತ್ರ ಸ್ವಲ್ಪ ಎತ್ತರವಾಗಿ ಬಿಡಿಸಲಾಗಿರುತ್ತದೆ.ಅನೇಕ ಗ್ರಾಮಗಳಲ್ಲಿ ಚಾಮುಂಡಿಯೇ ಪ್ರಧಾನ ದೇವತೆಯಾಗಿ, ಊರಿನ ದೇವತೆ ಹೆಸರಿನಲ್ಲಿ ಇಂದಿಗೂ ಪೂಜಿಸುಲ್ಪಡುತ್ತಿದ್ದಾಳೆ.ಕೆಲವು ಗ್ರಾಮಗಳಲ್ಲಿ ವಿಗ್ರಹಗಳ ಸಾಲಿನ ಮಧ್ಯೆ ವೈಷ್ಣವಿ ಬರುವುದರಿಂದ ಈ ದೇವತೆಯನ್ನೇ ಗ್ರಾಮ ದೇವತೆಯನ್ನಾಗಿ ಪೂಜಿಸುತ್ತಿರುವುದುಂಟು.ಈ ಸಪ್ತಮಾತೃಕೆಯರು ಯಾರ ಶಕ್ತಿಯನ್ನು ಪಡೆದು ರೂಪಗೊಂಡಿರುತ್ತಾರೋ ಆ ಮೂಲಶಕ್ತಿಯ ಆಯುಧ ಮತ್ತು ವಾಹನಗಳನ್ನು ಹೊಂದಿರುತ್ತಾರೆ.ಈ ದೇವತೆಗಳಿಗೆ 4 ಕೈಗಳಿದ್ದರೆ ಚಾಮುಂಡಿ ಶಿಲ್ಪಕ್ಕೆ ಮಾತ್ರ ೮ ಕೈಗಳನ್ನು ನೀಡಿ ವಿಕಾರ ರೂಪವನ್ನು ಬಿಡಿಸಿ ಶವ ಅಥವಾ ನರಿ ವಾಹನವಾಗಿರುತ್ತದೆ. ಕೋಲಾರ, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ, ಮಂಡ್ಯ, ಮೈಸೂರು, ಹಾಸನ, ಚಾಮರಾಜನಗರ ಜಿಲ್ಲೆಗಳಲ್ಲಿ ಈ ಸಪ್ತಮಾತೃಕೆಯರ ಸ್ವತಂತ್ರ ದೇವಾಲಯಗಳನ್ನು ಕಾಣಬಹುದು.[76]

**ಸಪ್ತಮಾತೃಕೆ/ಚೌಡೇಶ್ವರಿ ದೇವಾಲಯ-ಕಾರಹಳ್ಳಿ**

ಕಾರಹಳ್ಳಿಯು ದೇವನಹಳ್ಳಿ-ನಂದಿಬೆಟ್ಟದ ರಸ್ತೆಯ ಮಾರ್ಗದಲ್ಲಿ ಇರುವ ಗ್ರಾಮವಾಗಿದ್ದುದೇವನಹಳ್ಳಿಯಿಂದ ಸುಮಾರು 10 ಕಿ.ಮೀ. ದೂರದಲ್ಲಿದೆ. ಕಾರಹಳ್ಳಿಯ ಹೊರಭಾಗದಲ್ಲಿಸಪ್ತ ಮಾತೃಕೆ ದೇವಾಲಯ ಮತ್ತು ಶಿವಲಿಂಗಗಳು ಕಂಡು ಬಂದಿವೆ. ಸಪ್ತಮಾತೃಕೆಯ ದೇವಾಲಯವು ಮಂಟಪದ ಮಾದರಿಯಲ್ಲಿದ್ದು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲ್ಪಟ್ಟಿದ್ದು ಪೂರ್ವಾಭಿಮುಖವಾಗಿದೆ. ಈ ದೇವಾಲಯವು ಸುಮಾರು ೮೦೦ ವರ್ಷಗಳ ಇತಿಹಾಸವನ್ನು ಹೊಂದಿದ್ದು ಚೋಳರ ಕಾಲಕ್ಕೆ ಸೇರಿದುದಾಗಿದೆ ಎಂದು ಸ್ಥಳೀಯರು ತಿಳಿಸಿರುತ್ತಾರೆ. ದೇವಾಲಯದ ನಿರ್ಮಾಣದ ವೇಳೆಯಲ್ಲಿ ದಪ್ಪಕಲ್ಲುಗಳನ್ನು ಬಳಸಿದ್ದು ದೇವಾಲಯವು ಆಯಾತಕಾರದಲ್ಲಿದೆ.ಈ ದೇವಾಲಯದ ವಿಸ್ತೀರ್ಣ ಪೂರ್ವ ಪಶ್ಚಿಮ 22 ಅಡಿಗಳು ಮತ್ತು ಉತ್ತರ ದಕ್ಷಿಣ 23 ಅಡಿಗಳು ಮತ್ತು ಎತ್ತರ 7 ಅಡಿಗಳಾಗಿರುತ್ತದೆ. ದೇವಾಲಯದಲ್ಲಿ 4 ಪ್ರಧಾನ ಕಂಬಗಳು ಮತ್ತು 4 ಅರೆಗಂಬಗಳಿದ್ದು 4 ಪ್ರಧಾನ ಕಂಬಗಳು ಸಾಧಾರಣ ಕಂಬಗಳಾಗಿದ್ದು ಅವುಗಳ ಎತ್ತರ ಸುಮಾರು 4.5 ಅಡಿಗಳು ಮತ್ತು ಸುತ್ತಳತೆ 4.5 ಅಡಿಗಳಾಗಿದ್ದು ಕಂಬಗಳು ಚೌಕ, ಅಷ್ಟ ರಚನೆಯನ್ನು ಮತ್ತು ಸರಳವಾದ ಬೋದಿಗೆಯನ್ನು ಹೊಂದಿವೆ. ದೇವಾಲಯದ ನೆಲಹಾಸಿಗೆಗೆ ಚಪ್ಪಡಿಗಳನ್ನು ಹಾಕಲಾಗಿದೆ.(ಚಿ.ಸಂ.106)ನೆಲಹಾಸಿನ ಒಂದು ಚಪ್ಪಡಿಯಲ್ಲಿ ಭಕ್ತೆಯ ಶಿಲ್ಪವಿದೆ.ಈ ದೇವಾಲಯದ ಮೇಲ್ಛಾವಣಿಯಲ್ಲಿ ಯಾವುದೇ ಅಲಂಕರಣೆಗಳಿಲ್ಲ. ಕಂಬಗಳಲ್ಲಿ ಯಾವುದೇ ಉಬ್ಬು ಶಿಲ್ಪಗಳು ಕಂಡುಬರುವುದಿಲ್ಲ. ದೇವಾಲಯದಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿವೆ. (ಚಿ.ಸಂ.107)ದೇವಾಲಯದ ದ್ವಾರಬಾಗಿಲು ಎತ್ತರ ಸುಮಾರು 4 ಅಡಿಗಳು ಮತ್ತು ಅಗಲ 2 ಅಡಿಗಳು ಆಗಿದ್ದು, ದ್ವಾರಬಾಗಿಲ ಶಾಖೆಯು ಸರಳವಾಗಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.ಈ ದೇವಾಲಯದ ಮುಂಭಾಗದಲ್ಲಿ ದ್ವಾರತೋರಣವಿದ್ದು ಲಲಾಟಬಿಂಬದಲ್ಲಿ ಸ್ತ್ರೀಶಿಲ್ಪಗಳಿವೆ. ಈ ದೇವಾಲಯವು ಯಾವುದೇ ರೀತಿಯ ಸಂರಕ್ಷಣೆಯಿಲ್ಲದೆ ನಿರ್ಲಕ್ಷ್ಯಕ್ಕೆ ಒಳಗಾಗಿದೆ.[77](ಚಿ.ಸಂ.108)

**ಚೌಡೇಶ್ವರಿ/ಸಪ್ತಮಾತೃಕೆ ದೇವಾಲಯ-ಸಾದಹಳ್ಳಿ**

ಸಾದಹಳ್ಳಿ ಗ್ರಾಮವು ದೇವನಹಳ್ಳಿಯಿಂದ ಸುಮಾರು ೮ ಕಿ.ಮೀ.ದೂರದಲ್ಲಿದೆ. ಈ ಗ್ರಾಮದಲ್ಲಿ ಚೌಡೇಶ್ವರಿ-ಸಪ್ತಮಾತೃಕೆ ದೇವಾಲಯವಿದ್ದು ಪೂರ್ವಾಭಿಮುಖವಾಗಿದೆ. ಸ್ಥಳೀಯ ಗ್ರಾಮಸ್ಥರು ಮತ್ತು ಈ ದೇವಾಲಯದ ಅರ್ಚಕರಾದ ನಾಗಾರಾಜರವರು ತಿಳಿಸಿರುವಂತೆ ಈ ದೇವಾಲಯವು ಚೋಳರ ಕಾಲಕ್ಕೆ ಸೇರಿದುದಾಗಿದೆ. (ಚಿ.ಸಂ.109) ದೇವಾಲಯದಲ್ಲಿ ಏಳು ಸಪ್ತಮಾತೃಕೆ ಶಿಲ್ಪಗಳಾದ, ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ,

ಚಾಮುಂಡೇಶ್ವರಿ ಶಿಲ್ಪಗಳಗವೆ. ಈ 7 ಶಿಲ್ಪಗಳು 2 ಅಡಿ ಎತ್ತರವಾಗಿದ್ದು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಇವುಗಳಗೆ ಕವಚವನ್ನು ಹೊದಿಸಲಾಗಿದೆ.(ಚಿ.ಸಂ.110) ಬ್ರಾಹ್ಮಿ ದೇವಿಗೆ ಚತುರ್ಮುಖ ಮತ್ತು ಎರಡು ಕೈಗಳವೆ ಇನ್ನು ಉಳದ ಶಿಲ್ಪಗಳಗೆ ಒಂದು ಮುಖ ಮತ್ತು ಎರಡು ಕೈಗಳವೆ. ಈ ದೇವಾಲಯದಲ್ಲಿ ಕುಳತಿರುವ ಭಂಗಿಯಲ್ಲಿರುವ ಎರಡು ಕೈಗಳನ್ನು ಹೊಂದಿರುವ ವೀಣಪಾಣಿಯಾಗಿರುವ ಸರಸ್ವತಿ ಶಿಲ್ಪವಿದೆ, ಆಸೀನ ಭಂಗಿಯಲ್ಲಿರುವ ಎರಡು ಅಡಿ ಎತ್ತರದ ಗಣೇಶ ಹಾಗೂ ಅನ್ನಪೂರ್ಣೇಶ್ವರಿ ಶಿಲ್ಪವಿದೆ.[78]

**ಅದ್ದೆಮ್ಮ ದೇವಾಲಯ-ಅರದೇಶಹಳ್ಳಿ**

ಅರದೇಶಹಳ್ಳಿಯು ದೇವನಹಳ್ಳಿ-ಐವಿಸಿ ರಸ್ತೆಯಲ್ಲಿ ಕಂಡುಬರುವ ಒಂದು ಗ್ರಾಮವಾಗಿದ್ದು ದೇವನಹಳ್ಳಿಯಿಂದ ಸುಮಾರು 10 ಕಿ.ಮೀ ದೂರದಲ್ಲಿದೆ. ಅರದೇಶನಹಳ್ಳಿ ಪ್ರಾಗೈತಿಹಾಸಿಕ ನೆಲೆ, ಪುರಾತನ ದೇವಾಲಯಗಳು ಹಾಗೂ ವೀರಗಲ್ಲುಗಳಗೆ ಹೆಸರಾಗಿದೆ.ಈ ಗ್ರಾಮವುರಾಷ್ಟ್ರಕೂಟರ ಕಾಲದಲ್ಲಿ ಪ್ರಸಿದ್ಧ ಗ್ರಾಮವಾಗಿತ್ತು.ಈ ಗ್ರಾಮದ ದೇವತೆ ಅದ್ದೆಮ್ಮನಿಂದಾಗಿ ಅರದೇಶಹಳ್ಳಿ ಎಂಬ ಹೆಸರು ಬಂದಿತ್ತೆಂದು ಸ್ಥಳೀಯರು ತಿಳಸಿರುತ್ತಾರೆ.ದೇವಾಲಯವು ಪುರಾತನ ದೇವಾಲಯವಾಗಿದ್ದು ಪೂರ್ವಾಭಿಮುಖವಾಗಿದೆ.(ಚಿ.ಸಂ.111)ಇಲ್ಲಿನ ಮುಖ್ಯ ಮೂರ್ತಿಶಿಲ್ಪವು ಎರಡನೇ ವಿಗ್ರಹವಾಗಿದೆ ಎಂದು ಈ ದೇವಾಲಯದ ಅರ್ಚಕರಾದ ಎಸ್.ನಾಗಾರಾಜ ದೀಕ್ಷಿತ್‌ರುತಿಳಸಿರುತ್ತಾರೆ. ಈ ದೇವಾಲಯವು ಗರ್ಭಗೃಹ, ನವರಂಗಗಳನ್ನು ಹೊಂದಿದೆ.

**ಗರ್ಭಗೃಹ:** ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳು ಆಗಿದ್ದು ಒಂದು ಅಡಿ ಪೀಠದ ಮೇಲೆ ನಾಲ್ಕುವರೆ ಅಡಿ ಎತ್ತರದ ಕಪ್ಪು ಗ್ರಾನೈಟ್ ಶಿಲೆಯ ಅದ್ದೆಮ್ಮ ದೇವಿಯನ್ನು ಪ್ರತಿಷ್ಠಾಪಿಸಲಾಗಿದೆ.(ಚಿ.ಸಂ.112)ದೇವಿಯು ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಜಪಮಾಲೆ ಮತ್ತು ಪಾಶವನ್ನು ಮತ್ತೆರೆಡು ಕೈಗಳಲ್ಲಿ ಅಭಯ ಹಸ್ತ ಮತ್ತು ವರದ ಹಸ್ತವನ್ನು ಹೊಂದಿದ್ದಾಳೆ. ಸುಕನಾಸಿ ಕಂಡುಬರುವುದಿಲ್ಲ.

**ನವರಂಗ:** ಇದರ ಉದ್ದ 30 ಅಡಿ ಮತ್ತು ಅಗಲ 20 ಅಡಿಗಳಾಗಿರುತ್ತದೆ.ಈ ದೇವಾಲಯವು ಪ್ರಸ್ತುತ ಜೀರ್ಣೋದ್ಧಾರಗೊಂಡಿದೆ.[79]

**ಗಂಗಾದೇವಿ ದೇವಾಲಯ-ನಲ್ಲೂರು:**

ದೇವನಹಳ್ಳಿ ತಾಲೂಕು ಚನ್ನರಾಯಪಟ್ಟಣ ಹೋಬಳಯ ನಲ್ಲೂರು ಕೋಟೆ ಪ್ರದೇಶವು ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿತ್ತು. ನಲ್ಲೂರು ಗ್ರಾಮವು ದೇವನಹಳ್ಳಿಯಿಂದ ಸುಮಾರು 9 ಕಿ.ಮೀ

ಮತ್ತು ವಿಜಯಪುರದಿಂದ ಸುಮಾರು 10 ಕಿ.ಮೀ ದೂರದಲ್ಲಿದೆ. ನಲ್ಲೂರನ್ನು ಶಾಸನಗಳಲ್ಲಿ ನಲ್ಲೂರ ಪಾರು, ನಲ್ಲೂರು ನಾಡು, ನಲ್ಲೂರು ಸೀಮೆ, ನಲ್ಲೂರು ರಾಜ್ಯ ಹಾಗೂ ನಲ್ಲೂರು ಹೋಬಳಿಯೆಂದು ಉಲ್ಲೇಖಿಸಿವೆ. ಹಾಳುಬಿದ್ದ ನಲ್ಲೂರು ಪಟ್ಟಣ ಪ್ರದೇಶವನ್ನು ನಲ್ಲೂರು ಕೋಟೆಯನ್ನು ಗುರುತಿಸಲಾಗುತ್ತದೆ. ಸ್ಥಳಿಯ ಐತಿಹ್ಯಪ್ರಕಾರ ನಲ್ಲೂರು ಕೋಟೆಯ ಪಾಳೆಗಾರರಾದ ಚೌಡರಾಯನು ತನ್ನ ಕುಲದೇವತೆ ಗಂಗಮ್ಮತಾಯಿ ಜ್ಞಾಪಕಾರ್ಥಕವಾಗಿ ಮತ್ತು ತನ್ನ ಮಗಳಾದ ಗಂಗಾಭವಾನಿಯ ಬೇಡಿಕೆಯಂತೆ ಗಂಗಮ್ಮತಾಯಿ ದೇವಾಲಯವನ್ನು ಅಭಿವೃದ್ಧಿಪಡಿಸಿದನು. ಹಳೇ ದೇವಾಲಯವು ಈಗ ಜೀರ್ಣೋದ್ಧಾರಗೊಂಡಿದ್ದು (ಚಿ.ಸಂ.113) ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಟ್ಟಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ವಿಜಯನಗರೋತ್ತರ ಕಾಲಕ್ಕೆ ಸೇರಿದ್ದು ಗರ್ಭಗೃಹ, ನವರಂಗ ಮತ್ತು ಇತ್ತೀಚಿನ ದ್ವಾರಗೋಪುರವನ್ನು ಒಳಗೊಂಡಿದೆ.

**ಗರ್ಭಗೃಹ**: ಇದರ ಉದ್ದ 10 ಅಡಿ ಮತ್ತು ಅಗಲ 10 ಅಡಿಗಳು. ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 3 ಅಡಿ ಎತ್ತರದ ಕಪ್ಪುಶಿಲೆಯಲ್ಲಿ ಗಂಗಾದೇವಿಯನ್ನು ಪ್ರತಿಷ್ಠಾಪಿಸಲಾಗಿದೆ.ದೇವಿಯು 4 ಕೈಗಳನ್ನು ಹೊಂದಿದ್ದು ತ್ರಿಶೂಲ, ಡಮರುಗ, ಖಡ್ಗ, ಫಲಗಳನ್ನು ಹಿಡಿದಿದ್ದಾಳೆ. ದೇವಿಯು ಸಮಭಂಗಿಯಲ್ಲಿ ಆಸೀನಳಾಗಿದ್ದಾಳೆ.(ಚಿ.ಸಂ.114)ಗರ್ಭಗೃಹದ ಮೇಲ್ಛಾವಣಿಯಲ್ಲಿ ಉಬ್ಬು ಕೆತ್ತನೆಯ ಭುವನೇಶ್ವರಿ ಇದ್ದು(ಚಿ.ಸಂ.115)ಈ ದೇವಿಯ ಕೆಳಭಾಗದಲ್ಲಿ ಅಭಿಷೇಕ ನೀರು ಹೊರಹೋಗಲು ಪುಷ್ಪ ಪ್ರನಾಳವಿದೆ.

**ನವರಂಗ**: ಇದರ ಉದ್ದ 30 ಅಡಿ ಮತ್ತು ಅಗಲ 30 ಅಡಿಗಳು ಆಗಿದ್ದು ನವರಂಗದ ಮಧ್ಯಭಾಗದಲ್ಲಿ ಸುಮಾರು 8 ಅಡಿ ಎತ್ತರದ 4 ಪ್ರಧಾನ ಆಧಾರ ಸ್ತಂಭಗಳಿವೆ. ಇವು ಪದ್ಮಪೀಠದ ಮೇಲಿದ್ದು ಚೌಕಾಕಾರ, ಅಷ್ಟ ಕೋನ ಮತ್ತು ಮುಷ್ಠಿಬಂಧ ಬೋದಿಗೆಗಳನ್ನು ಹೊಂದಿದ್ದು(ಚಿ.ಸಂ.116)ಕಂಬಗಳ ಚೌಕಾಕಾರ ಭಾಗದಲ್ಲಿ ಕಮಲದ ವಿವಿಧ ಮಾದರಿಗಳು ಸ್ವಸ್ತಿಕ್ ಮಾದರಿ, ಓಂ ಮಾದರಿಯ ಉಬ್ಬು ಕೆತ್ತನೆಗಳನ್ನು ಕಂಡರಿಸಲಾಗಿದೆ.ನವರಂಗದ ಮಧ್ಯಭಾಗದಲ್ಲಿ ಚೌಕಾಕಾರದ ಭುವನೇಶ್ವರಿ ಇದೆ.ನವರಂಗದ ಎಡ ಮತ್ತು ಬಲಭಾಗದಲ್ಲಿ ಗಂಗಾದೇವಿಯ ಉತ್ಸವ ಮೂರ್ತಿಗಳಿವೆ. ನವರಂಗದ ದ್ವಾರವು ಸುಮಾರು 4 ಅಡಿ ಅಗಲ ಮತ್ತು 8 ಅಡಿ ಉದ್ದವನ್ನು ಹೊಂದಿದ್ದು, ನವರಂಗದ ದ್ವಾರದ ಮೇಲ್ಭಾಗದಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವು ದ್ವಾರಶಾಖೆಯಲ್ಲಿ ಮಣಿಸರಗಳ ಕೆತ್ತನೆಯು ಹಾಗೂ ದ್ವಾರಶಾಖೆಯ ಕೆಳಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ನವರಂಗದ ಎಡ ಮತ್ತು ಬಲಪಾರ್ಶ್ವದ ಭಿತ್ತಿಯಲ್ಲಿ 2 ಕೋಷ್ಟ ಗುಡಿಗಳಿದ್ದು ಅಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಅಲ್ಲಿ ಜಾಲಾವಾತಯನಗಳನ್ನು ಅಲಂಕಾರಿಕವಾಗಿ

ಮಾಡಲಾಗಿದೆ. ಕೋಷ್ಟಗಳ ಮೇಲ್ಭಾಗದಲ್ಲಿ 2 ಸಿಂಹಗಳ ಕೆತ್ತನೆ ಮತ್ತು ಗಂಟೆ ಮಾದರಿಯನ್ನು ಕೆತ್ತಲಾಗಿದೆ.

**ಮುಖಮಂಟಪ:** ಇದರ ಉದ್ದ 8 ಅಡಿ ಮತ್ತು ಅಗಲ 30 ಅಡಿಗಳು ಆಗಿದ್ದು ಮುಖಮಂಟಪದಲ್ಲಿ ಸುಮಾರು 10 ಅಡಿ ಎತ್ತರದ 4 ಕಂಬಗಳು ಮತ್ತು ಮುಖಮಂಟಪದ ಮುಂಭಾಗದಲ್ಲಿ ಎರಡು ಆನೆಯ ಶಿಲ್ಪಗಳಿವೆ.[80]

**ಗಂಗಮ್ಮ/ಗಂಗಾಪರಮೇಶ್ವರಿ ದೇವಾಲಯ-ದೇವನಹಳ್ಳಿ**

ಈ ದೇವಾಲಯವು ದೇವನಹಳ್ಳಿಯ ಬಜಾರ್ ಮುಖ್ಯರಸ್ತೆಯಲ್ಲಿ ದೇಶದ ಪೇಟೆಯಲ್ಲಿದ್ದುಉತ್ತರಾಭಿಮುಖವಾಗಿದೆ.ಈ ದೇವಾಲಯವು ಬೆಸ್ತ ಸಮುದಾಯಕ್ಕೆ ಸೇರಿದ್ದು[81]ಗಂಗಮ್ಮ ದೇವಾಲಯವೆಂದು ಹೆಸರಾಗಿದ್ದುಖಾಸಗಿ ಧರ್ಮದರ್ಶಿ ಮಂಡಳಿಯವರಿಂದ ನಿರ್ವಹಿಸಲ್ಪಡುತ್ತಿದೆ.ದೇವಾಲಯವು ವಿಜಯನಗರೋತ್ತರ ಕಾಲಕ್ಕೆ ಸೇರಿದ್ದು ದೇವಾಲಯದ ಮಹಾದ್ವಾರಮತ್ತು ಗರ್ಭಗುಡಿಯು ಉತ್ತರಾಭಿಮುಖವಾಗಿದೆ, (ಚಿ.ಸಂ.117)ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿಗಳಿವೆ.

**ಗರ್ಭಗೃಹ:** ಈ ದೇವಾಲಯವು ತ್ರಿಕೂಟಚಲವಾಗಿದ್ದು ಮೂರು ಗರ್ಭಗುಡಿಗಳನ್ನು ಹೊಂದಿದೆ.

**ಬಲಭಾಗದಲ್ಲಿರುವ 1ನೇ ಗರ್ಭಗುಡಿ:** ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳಾಗಿದ್ದು ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಕುಳಿತಿರುವ ಸುಮಾರು ಒಂದುವರೆ ಅಡಿ ಎತ್ತರದ, ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ಗಣೇಶ ಶಿಲ್ಪವಿದೆ. (ಚಿ.ಸಂ.118)ಗರ್ಭಗುಡಿಯ ದ್ವಾರದಲ್ಲಿ ಲಲಾಟಬಿಂಬದಲ್ಲಿ ಪದ್ಮದ ಕೆತ್ತನೆ ಮತ್ತು ಪೂರ್ಣಕುಂಬದ ಮೇಲೆ ಕಳಸ ಕೆತ್ತನೆಗಳಿವೆ.

**ಮಧ್ಯಭಾಗದಲ್ಲಿರುವ 2ನೇ ಗರ್ಭಗುಡಿ:** ಇದರ ಉದ್ದ 8 ಅಡಿ ಮತ್ತು ಅಗಲ 8 ಅಡಿಗಳಾಗಿರುತ್ತದೆ.ಈ ಗರ್ಭಗುಡಿಯಲ್ಲಿ ಕುಳಿತಿರುವ ಭಂಗಿಯಲ್ಲಿರುವ ಸುಮಾರು ನಾಲ್ಕು ಅಡಿ ಎತ್ತರದ ಗಂಗಪರಮೇಶ್ವರಿ ಶಿಲ್ಪವಿದ್ದು ಉತ್ಸವ ಮೂರ್ತಿಯಾಗಿದೆ.(ಚಿ.ಸಂ.119)ಗರ್ಭಗುಡಿಯ ದ್ವಾರಶಾಖೆಯಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಲತಾಬಳ್ಳಿಸುರಳಿಗಳು ಕೆಳಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ.

**ಎಡಭಾಗದ 3ನೇ ಗರ್ಭಗುಡಿ:** ಗರ್ಭಗುಡಿಯಲ್ಲಿ ಚಿಕ್ಕದಾದ ಶಿವಲಿಂಗವಿದ್ದು ಈ ಶಿವಲಿಂಗವು ಸುಮಾರು 1 ಅಡಿ ಎತ್ತರವಿದ್ದು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಈ ಶಿವಲಿಂಗವನ್ನು

ಕಾಶಿಯಿಂದ ತಂದು ಪ್ರತಿಷ್ಠಾಪಿಸಲಾಗಿದೆ ಎಂದು ಈ ದೇವಾಲಯದ ಧರ್ಮದರ್ಶಿ ಮಂಡಳಿಯವರಾದ ಮಂಜುರಾಜ್ ಮತ್ತು ಅರ್ಚಕರಾದ ಮಹೇಶ್ ಎಂಬುವರು ತಿಳಿಸಿರುತ್ತಾರೆ. ಗರ್ಭಗುಡಿಯ ದ್ವಾರಶಾಖೆಯಲ್ಲಿ ಲತಾಸುರುಳಿಬಳ್ಳಿ ಮತ್ತು ಶೈವದ್ವಾರಪಾಲಕರ ಶಿಲ್ಪಗಳಿವೆ. ದ್ವಾರಪಾಲಕರ ಶಿರದ ಮೇಲೆ ಕೀರ್ತಿಮುಖ ಕೆತ್ತನೆ ಇದ್ದು ಈ ಗರ್ಭಗುಡಿಯ ಮುಂಭಾಗದಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ಚಿಕ್ಕದಾದ ನಂದಿಶಿಲ್ಪ ಕಂಡುಬರುತ್ತದೆ.

**ನವರಂಗ**: ನವರಂಗದಲ್ಲಿ 2 ಪ್ರಧಾನ ಕಂಬಗಳಿದ್ದು ಅವು ಚೌಕ, ಅಷ್ಟ ಮಾದರಿಯನ್ನು ಮತ್ತು ಸರಳವಾದ ಬೋಧಿಗೆಯನ್ನು ಹೊಂದಿವೆ. ಕಂಬಗಳಲ್ಲಿ ಕಮಲದ ದಳ ಮುಂತಾದ ಉಬ್ಬುಕೆತ್ತನೆಗಳನ್ನು ಕಂಡರಿಸಲಾಗಿದೆ.ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು(ಚಿ.ಸಂ.120)ಕಂಬಗಳಿಗೆ ಇತ್ತೀಚಿಗೆ ಬಣ್ಣ ಲೇಪಿಸಲಾಗಿದೆ.ನವರಂಗದ ದ್ವಾರಕ್ಕೆ ಚದರಬಿಲ್ಲೆಗಳನ್ನು ಹಾಕಲಾಗಿದ್ದು ದ್ವಾರದ ಮೇಲ್ಭಾಗದಲ್ಲಿ ಗಣೇಶ ಶಿಲ್ಪವಿದೆ.

ಈ ದೇವಾಲಯದ ಎಡಭಾಗದಲ್ಲಿ ಒಂದು ಸಣ್ಣ ಗುಡಿಯನ್ನು ಮಾಡಲಾಗಿದ್ದು ಅದರಲ್ಲಿ ನಾಗಶಿಲ್ಪಗಳಿವೆ. ದೇವಾಲಯದ ಬಲಭಾಗದ ಒಂದು ಸಣ್ಣಗುಡಿಯಲ್ಲಿ ನವಗ್ರಹಗಳಿವೆ. ಈ ದೇವಾಲಯವು ಜೀರ್ಣೋದ್ಧಾರಗೊಂಡಿದೆ.

**ಆಂಜನೇಯಸ್ವಾಮಿ ದೇವಾಲಯಗಳು**

ದೇವನಹಳ್ಳಿ ತಾಲೂಕಿನ ದೇವನಹಳ್ಳಿ, ಕಾರಹಳ್ಳಿ, ಸೋಲೂರು, ವಿಜಯಪುರ ಮುಂತಾದ ಕಡೆಗಳಲ್ಲಿ ಆಂಜನೇಯಸ್ವಾಮಿ ದೇವಾಲಯಗಳು ಕಂಡುಬಂದಿದ್ದು ಇವು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಹೆಚ್ಚು ನಿರ್ಮಾಣವಾದಂತೆ ಕಂಡುಬರುತ್ತದೆ.ಕೆಲವು ಆಂಜನೇಯಸ್ವಾಮಿ ದೇವಾಲಯಗಳು ರಚನಾತ್ಮಕವಾಗಿ ಇದ್ದು ಅವುಗಳಲ್ಲಿ ಕಲೆ ಮತ್ತು ವಾಸ್ತುಶಿಲ್ಪದ ರಚನೆಯು ಕಂಡುಬರುತ್ತದೆ.

**ಪೀತಾಂಬರ ಆಂಜನೇಯಸ್ವಾಮಿ ದೇವಾಲಯ–ದೇವನಹಳ್ಳಿ**

ದೇವನಹಳ್ಳಿಯಿಂದ ಚನ್ನರಾಯಪಟ್ಟಣಕ್ಕೆ ಹೋಗುವ ರಸ್ತೆಯಲ್ಲಿಪುಟ್ಟಪ್ಪನ ಗುಡಿ ಬೀದಿಯ ಬಲಭಾಗದಲ್ಲಿಕಲ್ಯಾಣಿ ಮತ್ತು ಅದರ ಪಕ್ಕದಲ್ಲಿ ಪೀತಾಂಬರ ಆಂಜನೇಯಸ್ವಾಮಿ ದೇವಾಲಯವಿದೆ.(ಚಿ.ಸಂ.121)ದೇವನಹಳ್ಳಿ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯ ನಿರ್ಮಾಣ ಸಂದರ್ಭದಲ್ಲಿ ಉಳಿದ ಕಲ್ಲುಗಳಿಂದ ಈ ದೇವಾಲಯವನ್ನು ನಿರ್ಮಿಸಲಾಗಿದೆ ಎಂದು ಈ ದೇವಾಲಯದ ಉಸ್ತುವಾರಿಯನ್ನು ವಹಿಸಿರುವ ಯಲ್ಲಪ್ಪ ಎಂಬುವರು ತಿಳಿಸಿರುತ್ತಾರೆ.ಈ

ದೇವಾಲಯವು ಮಂಟಪದ ಮಾದರಿಯಲ್ಲಿದ್ದು ಪೂರ್ವಾಭಿಮುಖವಾಗಿದ್ದು ವಿಜಯನಗರ ಕಾಲಕ್ಕೆ ಸೇರಿದೆ.

**ಗರ್ಭಗೃಹ**: ಇದರ ಉದ್ದ 5 ಅಡಿ ಮತ್ತು ಅಗಲ 5 ಅಡಿಗಳಾಗಿದ್ದುಗರ್ಭಗುಡಿಯಲ್ಲಿ ನಿಂತಿರುವ ಭಂಗಿಯಲ್ಲಿರುವ ಉತ್ತರಕ್ಕೆ ಮುಖಮಾಡಿರುವ ಕಪ್ಪು ಮತ್ತು ಬಿಳಿ ಮಿಶ್ರಿತ ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ಆಂಜನೇಯನ ಮೂರ್ತಿ ಇದೆ. ಗರ್ಭಗುಡಿಯ ದ್ವಾರವು ಬಳ್ಳಿ ಸುರುಳಿಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮತ್ತು ದ್ವಾರಶಾಖೆಯ ಕೆಳಭಾಗದಲ್ಲಿ ವೈಷ್ಣವ ದ್ವಾರ ಪಾಲಕರ ಉಬ್ಬು ಶಿಲ್ಪಗಳಿವೆ.

**ಮುಖಮಂಟಪ**: ಇದರ ಉದ್ದ 15 ಅಡಿ ಮತ್ತು ಅಗಲ 30 ಅಡಿಗಳಾಗಿದ್ದು ಕಲ್ಲು ಚಪ್ಪಡಿಗಳಿಂದ ನಿರ್ಮಿಸಲ್ಪಟ್ಟಿದೆ. ಇಲ್ಲಿ ಎರಡು ಪ್ರಧಾನ ಕಂಬಗಳಿದ್ದು ಚೌಕ, ಅಷ್ಟ ಬೋಧಿಗೆಯನ್ನು ಹೊಂದಿದ್ದು(ಚಿ.ಸಂ.122)ಈ ಮಂಟಪದ ವಾಜನ ಭಾಗದಲ್ಲಿ ಮೀನಿನ ಶಿಲ್ಪವು ಮತ್ತೊಂದು ವಾಜನ ಭಾಗದಲ್ಲಿ ಅದೇ ಮಾದರಿ ಶಿಲ್ಪ ಕಂಡುಬರುತ್ತದೆ.ಈ ಮಂಟಪದ ಎಡಭಾಗದ ವಾಜನ ಭಾಗದಲ್ಲಿ ಹಾವು ಶಿಲ್ಪವಿದೆ.ಕಂಬಗಳಲ್ಲಿ ಆಂಜನೇಯ, ಮೀನು, ವಾನರ, ಪೂರ್ಣಕುಂಬ, ಗದೆ, ದ್ವಾರಪಾಲಕರು ಮುಂತಾದ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಈ ಮಂಟಪದ ಮುಂಭಾಗದಲ್ಲಿ ಬಲಿಪೀಠವಿದ್ದು ಬಲಿಪೀಠದ ಮುಂಭಾಗದಲ್ಲಿ ಕಲ್ಲು ಮಂಟಪವಿದೆ ಮಂಟಪದಲ್ಲಿ 18 ಕಂಬಗಳಿದ್ದು ಕಂಬದ ಎತ್ತರ ಸುಮಾರು 6 ಅಡಿಗಳಾಗಿರುತ್ತದೆ. ಪಾತಾಳಾಂಕಣದಲ್ಲಿ ರಾಯರ ಬೃಂದಾವನವಿದ್ದು ಅದರ ಗುಡಿಯಲ್ಲಿ ಚಿಕ್ಕ ಆಂಜನೇಯ ಶಿಲ್ಪವಿದೆ.[82]

**ಪುಟ್ಟಪ್ಪನ ಗುಡಿ ಬೀದಿ ಕಲ್ಯಾಣಿ**:ಈ ಕಲ್ಯಾಣಿಯು ಪೀತಾಂಬರ ಆಂಜನೇಯಸ್ವಾಮಿ ದೇವಾಲಯದ ಮುಂಭಾಗದಲ್ಲಿದೆ. ದೇವನಹಳ್ಳಿಯಿಂದ ಚನ್ನರಾಯಪಟ್ಟಣಕ್ಕೆ ಹೋಗುವ ರಸ್ತೆಯ ಬಲಭಾಗಕ್ಕಿದೆ. ಇದು ಚೌಕಕಾರವಾಗಿದ್ದು, ಇದರ ಉದ್ದ 60 ಅಡಿ ಮತ್ತು ಅಗಲ 60 ಅಡಿಗಳಾಗಿರುತ್ತದೆ. ಈ ಕಲ್ಯಾಣಿಯು ಬಿಳಿಕಣಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು ಇಳಿಜಾರು ಮಾದರಿಯಲ್ಲಿ 20 ಮೆಟ್ಟಿಲು ಹಂತಗಳಿವೆ. ಈ ಕಲ್ಯಾಣಿ ಸುತ್ತಲೂ ಪ್ರಾಕಾರ ಗೋಡೆಯನ್ನು ನಿರ್ಮಿಸಲಾಗಿದ್ದು ಈ ಕಲ್ಯಾಣಿಗೆ ದಕ್ಷಿಣ ಮತ್ತು ಪಶ್ಚಿಮದ ಕಡೆಯಿಂದ ಪ್ರವೇಶವಿದೆ.ಪಶ್ಚಿಮಕ್ಕೆ ಮಂಟಪವಿದ್ದು ಜೀರ್ಣೋದ್ಧಾರಗೊಂಡಿರುತ್ತದೆ.(ಚಿ.ಸಂ.123)

**ವೀರಾಂಜನೇಯ ದೇವಾಲಯ-ದೇವನಹಳ್ಳಿ:**

ಈ ದೇವಾಲಯವು ದೇವನಹಳ್ಳಿಯ ಕೋಟೆ ಬೀದಿಯಲ್ಲಿದ್ದು ದಕ್ಷಿಣಾಭಿಮುಖವಾಗಿದ್ದು (ಚಿ.ಸಂ.124) ಮುಜರಾಯಿ ಇಲಾಖೆಗೆ ಸೇರಿದೆ. ರಾಘವೇಂದ್ರಸ್ವಾಮಿ ಮಠದ ಎಡಭಾಗದಲ್ಲಿದ್ದು, ಆವತಿ ನಾಡಪ್ರಭುಗಳ ಕಾಲಕ್ಕೆ ಸೇರಿದ್ದುದಾಗಿದೆ.ಈ ದೇವಾಲಯದ ಬಲಭಾಗದಲ್ಲಿ ಕಂಬಗಳಿಂದ ಕೂಡಿರುವ ಮಂಟಪವಿದೆ.ಈ ಕಲ್ಲಿನ ಮಂಟಪವನ್ನು ರಾಘವೇಂದ್ರಸ್ವಾಮಿ ಮಠವನ್ನಾಗಿ ಪರಿವರ್ತಿಸಲಾಗಿದೆ.

**ಗರ್ಭಗುಡಿ**: ಇದರ ಉದ್ದ 10 ಅಡಿ ಮತ್ತು ಅಗಲ 10 ಅಡಿಗಳು ಆಗಿದ್ದುಗರ್ಭಗುಡಿಯಲ್ಲಿ ಪದ್ಮಪೀಠದ ಮೇಲೆ ನಿಂತಿರುವ ಭಂಗಿಯಲ್ಲಿರುವ, ಕಡುಕಪ್ಪು ಗ್ರಾನೈಟ್ ಶಿಲೆಯಿಂದ ಕೆತ್ತಲ್ಪಟ್ಟಿರುವ ವೀರಾಂಜನೇಯ ಶಿಲ್ಪವಿದೆ. ಇದರ ಎತ್ತರ ಸುಮಾರು ಎರಡೂವರೆ ಅಡಿಗಳು.ಆಂಜನೇಯನು ಎರಡು ಕೈಗಳನ್ನು ಹೊಂದಿದ್ದು, ಬಲಗೈಯಲ್ಲಿ ಅಭಯಹಸ್ತವನ್ನು ಹೊಂದಿದ್ದು ತನ್ನ ಎಡಗೈಯನ್ನು ಸೊಂಟದ ಮೇಲಿರಿಸಿದ್ದು ಸೊಂಟದ ಮತ್ತು ಎಡಗೈ ಮಧ್ಯಭಾಗದಲ್ಲಿ ಗದೆ ಇದೆ.ಕಮಾನಿನ ಆಕೃತಿಯ ಪ್ರಭಾವಳಿ ಇದ್ದು ಪ್ರಭಾವಳಿಯ ಮಧ್ಯಭಾಗದಲ್ಲಿ ಕೀರ್ತಿಮುಖವಿದೆ.ಗರ್ಭಗುಡಿಯ ದ್ವಾರವು ಲತಾ ಸುರುಳಿ ಬಳ್ಳಿಯನ್ನು ಹೊಂದಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಉಬ್ಬು ಶಿಲ್ಪಗಳಿವೆ. (ಚಿ.ಸಂ.125)ಗರ್ಭಗುಡಿಯು ಯಾವುದೇ ಭುವನೇಶ್ವರಿ ಕಂಡುಬಂದಿರುವುದಿಲ್ಲ. ನಕ್ಷತ್ರಾಕಾರದ ಪೇದ್ಯವನ್ನು ಹೊಂದಿದ್ದು 3 ಕಮಲಗಳ ಹೂರಚನೆ ಕಂಡುಬಂದಿದೆ.

**ಮುಖಮಂಟಪ**: ಇದು 2 ಕಂಬಗಳನ್ನು ಹೊಂದಿದ್ದು ಅವುಗಳ ಎತ್ತರ 6 ಅಡಿಗಳಾಗಿದ್ದು ಚೌಕ, ಅಷ್ಟ ಮಾದರಿಯನ್ನು ಹೊಂದಿದ್ದು ಸರಳವಾದ ಬೋದಿಗೆಯನ್ನು ಹೊಂದಿವೆ. ಕಂಬಗಳಲ್ಲಿ ಹಂಸಪಕ್ಷಿಯ ಉಬ್ಬು ಶಿಲ್ಪಗಳಿವೆ. ಮುಖಮಂಟಪದ ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪ ವಿದ್ದು ಮತ್ತು ದ್ವಾರಶಾಖೆಯಲ್ಲಿ ಲತಾ ಬಳ್ಳಿ ಸುರುಳಿಯಿದ್ದುದ್ವಾರಶಾಖೆಯ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ನಕ್ಷತ್ರಾಕಾರದ ಪೇದ್ಯವನ್ನು ಹೊಂದಿದ್ದು ಮೂರು ಕಮಲದ ಹೂ ರಚನೆಯಿದೆ. ಮುಖಮಂಟಪದ ಭಿತ್ತಿಗೆ ಸೇರಿಕೊಂಡಂತೆ ನಾಲ್ಕು ಕಂಬಗಳಿದ್ದು ಅವುಗಳಿಗೆ ಇತ್ತೀಚಿಗೆ ಚದರಬಿಲ್ಲೆಗಳನ್ನು ಹಾಕಲಾಗಿದೆ.[83]

**ಸರೋವರ ಆಂಜನೇಯ ಸ್ವಾಮಿ ದೇವಾಲಯ-ದೇವನಹಳ್ಳಿ:**

ಈ ದೇವಾಲಯವು ದೇವನಹಳ್ಳಿಯ ಸರೋವರ ಬೀದಿಯಲ್ಲಿದ್ದು ಪೂರ್ವಾಭಿಮುಖವಾಗಿದ್ದು(ಚಿ.ಸಂ.126)ವ್ಯಾಸ ಆಂಜನೇಯ ಎಂದು ಹೆಸರಾಗಿದ್ದು ಮುಜರಾಯಿ ಇಲಾಖೆಗೆ ಒಳಪಟ್ಟಿದೆ.ಈ ದೇವಾಲಯವು ವಿಜಯನಗರೋತ್ತರ ಕಾಲಕ್ಕೆ ಸೇರಿದ್ದುದಾಗಿದೆ.

**ಗರ್ಭಗೃಹ:** ಇದು ಉದ್ದ 6 ಅಡಿ ಮತ್ತು ಅಗಲ 12 ಅಡಿಗಳನ್ನು ಹೊಂದಿದ್ದುಗರ್ಭಗುಡಿಯಲ್ಲಿ ನಿಂತಿರುವ ಭಂಗಿಯಲ್ಲಿರುವ ಸುಮಾರು 6 ಅಡಿ ಎತ್ತರದ ಬಿಳಿಕಣಶಿಲೆಯಿಂದ ನಿರ್ಮಿಸಿರುವ ಆಂಜನೇಯನ ಮೂರ್ತಿಯಿದೆ. ಆಂಜನೇಯನು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಸೊಂಟದ ಮೇಲೆ ಇರಿಸಿದ್ದಾನೆ,(ಚಿ.ಸಂ.127)ಕೈಗಳಲ್ಲಿ ಕೈಗಡಗ ಕಾಲುಗಳಲ್ಲಿ ಕಾಲ್ಗಡ ಧರಿಸಿದ್ದಾನೆ. ಆಂಜನೇಯನ ಬಾಲವು ದೇಹದ ಹಿಂಭಾಗದಿಂದ ಮೇಲಕ್ಕೆತ್ತಿ ತಲೆಯ ಮೇಲೆಬಂದು ಬಾಯಿಯವರೆಗೆ ವ್ಯಾಪಿಸಿದೆ ಬಾಲದ ತುದಿಯಲ್ಲಿ ಘಂಟೆಯಿದೆ.ಆಂಜನೇಯನ ಎಡಭಾಗದಲ್ಲಿ ಶಂಖ ಮತ್ತು ಬಲಭಾಗದಲ್ಲಿ ಚಕ್ರಗಳಿವೆ. ಭುವನೇಶ್ವರಿ ಕಾಣಬರುವುದಿಲ್ಲ. ಗರ್ಭಗೃಹದ ದ್ವಾರಶಾಖೆಯಲ್ಲಿ ಲತಾಬಳ್ಳಿ ಸುರುಳಿ, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪಗಳಿವೆ. ದ್ವಾರಶಾಖೆಯ ತಳಭಾಗದಲ್ಲಿ ದ್ವಾರಪಾಲಕರಾದ ಜಯವಿಜಯರ ಉಬ್ಬು ಶಿಲ್ಪಗಳಿವೆ.

**ನವರಂಗ:** ನವರಂಗದಲ್ಲಿ ಎರಡು ಪ್ರಧಾನ ಕಂಬಗಳಿದ್ದು ಅವುಗಳ ಎತ್ತರ ಸುಮಾರು 6 ಅಡಿಗಳಾಗಿದ್ದು ಅವು ಚೌಕ, ಅಷ್ಟ ಮಾದರಿಯಲ್ಲಿದ್ದು ಕಂಬಗಳಲ್ಲಿ ಪದ್ಮ, ಶಿವಲಿಂಗ, ನರಸಿಂಹ ಮುಂತಾದ ಉಬ್ಬುಶಿಲ್ಪಗಳಿವೆ. (ಚಿ.ಸಂ.128)ನವರಂಗದ ದ್ವಾರವು ಜೀರ್ಣೋದ್ಧಾರವಾಗಿದ್ದು ಮರದ ಬಾಗಿಲನ್ನು ಇರಿಸಲಾಗಿದೆ.

**ಮುಖಮಂಟಪ:** ಮುಖಮಂಟಪದಲ್ಲಿ ಎರಡು ಕಂಬಗಳಿದ್ದು ಅವು ಚೌಕ, ಅಷ್ಟ ಮಾದರಿಯಲ್ಲಿದ್ದು ಅವುಗಳ ಎತ್ತರ 6 ಅಡಿಗಳಾಗಿದ್ದು, ಕಂಬಗಳಲ್ಲಿ ಪದ್ಮ, ಶಿವಲಿಂಗ ಮತ್ತು ಮುಂತಾದ ಉಬ್ಬುಶಿಲ್ಪಗಳಿವೆ.[84](ಚಿ.ಸಂ.129)

**ಕಲ್ಯಾಣಿ:** ಈ ಕಲ್ಯಾಣಿಯು ಸರೋವರ ಆಂಜನೇಯಸ್ವಾಮಿ ಎಂದು ಹೆಸರಾಗಿದ್ದು, ವಿಜಯನಗರೋತ್ತರ ಕಾಲಕ್ಕೆ ಸೇರಿದೆ.ಇದು ಚಿತ್ರದುರ್ಗದ ಸಂತೆಹೊಂಡವನ್ನು ಹೋಲುತ್ತದೆ.[85]ಈ ಕಲ್ಯಾಣಿಯನ್ನು ದಿವಾನ್ ಪೂರ್ಣಯ್ಯನವರು ನಿರ್ಮಿಸಿದರೆಂದು ಹೇಳಲಾಗುತ್ತದೆ.[86]ಈ ಕಲ್ಯಾಣಿಯು ಚೌಕಕಾರವಾಗಿದ್ದು ಇದರ ಉದ್ದ 120 ಅಡಿ ಮತ್ತು ಅಗಲ

120 ಅಡಿಗಳಾಗಿದ್ದು ಬಿಳಿ ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು, ಇಳಿಜಾರು ಮಾದರಿಯಲ್ಲಿ 25 ಮೆಟ್ಟಿಲು ಹಂತಗಳನ್ನು ಹೊಂದಿದೆ.(ಚಿ.ಸಂ.130)ಈ ಕಲ್ಯಾಣಿ ಸುತ್ತಲೂ ಆವರಣವನ್ನು ನಿರ್ಮಿಸಿದ್ದು ಸುಮಾರು 6 ಅಡಿ ಎತ್ತರವನ್ನು ಹೊಂದಿದೆ.ಆವರಣದ ಸುತ್ತಲೂ ಒಳಭಾಗದಲ್ಲಿ ದೀಪಗಳನ್ನು ಹಚ್ಚಲು 8 ದೇವಕೋಷ್ಟಗಳನ್ನು ನಿರ್ಮಿಸಲಾಗಿದೆ.ಈ ಕಲ್ಯಾಣಿಗೆ ಹೊಂದಿಕೊಂಡಂತೆ ದಕ್ಷಿಣ ದಿಕ್ಕಿನಲ್ಲಿ ಒಂದು ಮಂಟಪವಿದ್ದು, ಮಂಟಪದಲ್ಲಿ ಆಂಜನೇಯನ ಶಿಲ್ಪವಿದೆ.

**ಮಸೀದಿಗಳು**

ಮುಸ್ಲಿಂರ ಧಾರ್ಮಿಕ ಕಟ್ಟಡಗಳಲ್ಲಿ ಮಸೀದಿ ಪ್ರಮುಖವಾದವು.ಮಸೀದಿ ಪ್ರಾರ್ಥನ ಮಂದಿರವಾಗಿದ್ದು ಅವುಗಳ ರಚನೆಯ ಮುಖ್ಯಲಕ್ಷಣವೆಂದರೆ ಕಂಬಗಳಿಂದ ಕೂಡಿದ ಕೈಸಾಲೆಯಿಂದ ಸುತ್ತುವರೆಯಲ್ಪಟ್ಟ ವಿಶಾಲವಾದ ಒಳಾಂಗಣವಿರುತ್ತದೆ.ದಿಕ್ಕನ್ನು ಗುರುತಿಸಲು ಮೆಕ್ಕಾದ ಪ್ರಾರ್ಥನೆಯ ದಿಕ್ಕನ್ನು ಸೂಚಿಸಲು ಮೆಹ್ರಾಬ್ ಇರುತ್ತದೆ. ಮೆಹ್ರಾಬ್‌ನ ಬಲಗಡೆಯಲ್ಲಿ ಮಿಂಬರ್ ಎನ್ನುವ ಎತ್ತರವಾದ ಉಪದೇಶದ ವೇದಿಕೆ ಮತ್ತು ಮುಸ್ಲಿಂ ಬಾಂಧವರನ್ನು ನಮಾಜ್‌ಗೆ ಬರುವಂತೆ ಸೂಚಿಸುವ ಆಜಾನ್ ವ್ಯವಸ್ಥೆ ಇದ್ದು ನಮಾಜ್‌ಗೆ ಮೊದಲು ವಜೂ ಅಂದರೆ ಕೈಕಾಲು ಮುಖಗಳನ್ನು ತೊಳೆದುಕೊಳ್ಳುವುದಕ್ಕಾಗಿ ಒಂದು ಕೊಳವಿರುತ್ತದೆ.[87]

ವಾಸ್ತುಶಿಲ್ಪದ ದೃಷ್ಟಿಯಿಂದ ಮಸೀದಿಗಳು ಗಮನಸೆಳೆಯುತ್ತವೆ. ಮಸೀದಿಗಳ ರಚನೆಯಲ್ಲಿ ಮಿನಾರ್‌ಗಳು ಅರ್ಧಗೋಳ ಗುಮ್ಮಟಾಕಾರ ರಚನೆಗಳು ಕ್ಯಾಲಿಗ್ರಫಿ (ಸುಂದರ ಅಕ್ಷರಗಳ ಬರವಣಿಗೆ) ಕಮಾನುಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಮಸೀದಿಗಳನ್ನು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ನಿರ್ಮಿಸಲಾಗಿರುತ್ತದೆ. ದೇವನಹಳ್ಳಿ ತಾಲೂಕಿನಲ್ಲಿ ಪ್ರಾಚೀನ ಅಥವಾ ಮಧ್ಯಕಾಲೀನ ಯುಗಕ್ಕೆ ಸೇರಿದ ಮಸೀದಿಗಳು ಕಂಡುಬರದಿದ್ದರೂ ಕ್ರಿ.ಶ.18ನೇ ಶತಮಾನದ ಟಿಪ್ಪು ಸುಲ್ತಾನ್‌ನ ಅವಧಿಯೆಂದು ಹೇಳುವ ಒಂದು ಮಸೀದಿ ಮಾತ್ರ ದೇವನಹಳ್ಳಿಯಲ್ಲಿ ಮಾತ್ರ ಕಾಣಸಿಗುತ್ತದೆ, ಇದನ್ನು ಹೊರತುಪಡಿಸಿ ತಾಲೂಕಿನ ಬಹುತೇಕ ಮಸೀದಿಗಳು ಇತ್ತೀಚಿನವುಗಳಾಗಿರುತ್ತವೆ.

**ಜಾಮಿ ಮಸೀದಿ-ದೇವನಹಳ್ಳಿ**: ಈ ಮಸೀದಿಯು ದೇವನಹಳ್ಳಿ ಪಟ್ಟಣದ ಮಸೀದಿ ಬೀದಿಯಲ್ಲಿದೆ. ಇದು ಟಿಪ್ಪುವಿನ ಕಾಲದ ಮಸೀದಿಯಾಗಿದ್ದು ಮಿನಾರ್‌ಗಳನ್ನು ಹೊಂದಿದೆ.[88] ಈ ಮಸೀದಿಯು ಕರ್ನಾಟಕ ರಾಜ್ಯದ ವಕ್ಫ್‌ಬೋರ್ಡ್‌ಗೆ ಒಳಪಟ್ಟಿದ್ದು ಪ್ರಸ್ತುತ ಈ ಮಸೀದಿಯನ್ನು ಹೊಸದಾಗಿ ನಿರ್ಮಿಸಲಾಗಿದೆ.

**ಇತರೇ ಮಸೀದಿಗಳು**: ದೇವನಹಳ್ಳಿ ತಾಲೂಕಿನ ವಿಜಯಪುರ, ಕನ್ನಮಂಗಲ ಪಾಳ್ಯ, ಹುರುಳುಗುರ್ಕಿ ಮುಂತಾದ ಕಡೆ ಮಸೀದಿಗಳಿವೆ.

**ದರ್ಗಾಗಳು**: ಮುಸ್ಲಿಂರಧಾರ್ಮಿಕ ಕಟ್ಟಡಗಳಲ್ಲಿ ಮಸೀದಿಗಳು ಮತ್ತು ದರ್ಗಾಗಳೆಂದು ಎರಡು ಕಟ್ಟಡಗಳಿವೆ.ದರ್ಗಾಗಳು ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಸೂಫಿ ಸಂತರ ಗೋರಿಗಳು. ಕರ್ನಾಟಕದಲ್ಲಿ ಸೂಫಿ ಸಂತರ ದರ್ಗಾಗಳು ಕಂಡುಬಂದಿದ್ದು ಅವುಗಳನ್ನು ಪ್ರಮುಖವಾಗಿ

ಅವುಗಳೆಂದರೆ ನೆಲದ ಮೇಲಿರುವ, ಗುಡ್ಡದ ಮೇಲಿರುವ, ನೆಲಮನೆಯಲ್ಲಿರುವ ಮತ್ತು ಬಯಲು ದರ್ಗಾಗಳುಎಂದು ನಾಲ್ಕು ಪ್ರಕಾರಗಳಾಗಿ [89]ವರ್ಗೀಕರಿಸಬಹುದು

ದರ್ಗಾಗಳು ಹಿಂದೂ-ಮುಸ್ಲಿಂ ಸಂಸ್ಕೃತಿಯ ಸಾಮರಸ್ಯ ಮತ್ತು ಭಾವೈಕ್ಯತೆಯ ಸಂಕೇತವಾಗಿವೆ. ದರ್ಗಾಗಳಲ್ಲಿ ಮರಗಳಿಗೆ ನೂಲು ಸುತ್ತುವ ಆಚರಣೆ, ದೀರ್ಘದಂಡ ನಮಸ್ಕಾರ ಮತ್ತು ಉರುಳು ಸೇವೆ, ದರ್ಗಾದ ಕಟಾಂಜನ ಮತ್ತು ಮರಗಳಿಗೆ ಬಳೆಗಳನ್ನು ಕಟ್ಟುವ ಸಂಪ್ರದಾಯ, ದೀಪಹಚ್ಚುವ ಪದ್ಧತಿ, ತೊಟ್ಟಿಲು ಕಟ್ಟುವ ಪದ್ಧತಿ ಮುಂತಾದ ಆಚರಣೆಗಳು ಕಂಡುಬರುತ್ತವೆ. ದರ್ಗಾಗಗಳು ಉತ್ಕೃಷ್ಟ ವಾಸ್ತುಶಿಲ್ಪವನ್ನು ಹೊಂದಿದ್ದು ಮನುಷ್ಯ ಆಕೃತಿಯ ಚಿತ್ರಕ್ಕೆ ಆಸ್ಪದವಿಲ್ಲದೆ ಮುಸ್ಲಿಂ ಕಲೆಯು ರೇಖಾಗಣಿತ ಮತ್ತು ಸಸ್ಯರೂಪದ ಚಿತ್ರಗಳಲ್ಲಿ ಬಳ್ಳಿಗಳ ಉಪಯೋಗ ಪ್ರಧಾನವಾಗಿ ಕಂಡುಬರುತ್ತದೆ ಹಾಗೂ ಸಾಹಿತ್ಯ ಸಂಗೀತ ವರ್ಣಚಿತ್ರಗಳಿಗೆ ಆದ್ಯತೆ ನೀಡಲಾಗಿರುತ್ತದೆ.

**ಉರುಸ್**:ದರ್ಗಾಶರೀಫಗಳಲ್ಲಿ ಸಂತರ, ವಲಿಗಳ ಐಕ್ಯದಿನವನ್ನು ಉರುಸನ್ನಾಗಿ ವರ್ಷಕ್ಕೊಮ್ಮೆ ಕೆಲವು ಕಡೆ ಎರಡು ವರ್ಷ ಐದು ವರ್ಷಕ್ಕೊಮ್ಮೆ ಆಚರಿಸುವ ಸಂಪ್ರದಾಯಗಳಿವೆ. ಉರುಸುಗಳಲ್ಲಿ ಒಂದನೇ ದಿನ ಸಂದಲ್ (ಗಂಧ) ಎರಡನೆಯ ದಿನ ಉರುಸ್ ಜರುಗುತ್ತದೆ.ಉರುಸ್ ಪ್ರಮುಖ ದಿನಗಳಲ್ಲಿ ಜುಲಸ್ ಹೊರಡುತ್ತದೆ.ಒಬ್ಬ ವ್ಯಕ್ತಿ ಕುದುರೆಯ ಮೇಲೆ ಕುಳಿತು ತನ್ನ ತಲೆಯ ಮೇಲೆ ಗಂಧ ಮತ್ತು ಪುಷ್ಪಗಳನ್ನು ಹೊತ್ತಿರುತ್ತಾನೆ. ಕೆಲವರು ಹೂ ಮತ್ತು ಬಟ್ಟೆಯ ಗಿಲೇಫ್ ಹಿಡಿದಿರುತ್ತಾರೆ.ಒಬ್ಬರು ಸಾಂಬ್ರಾಣಿ ಹೊಗೆ ಹಾಕುವ ಊದ್‌ದಾನಿ (ಧೂಪ್‌ದಾನಿ) ಹಿಡಿದಿರುತ್ತಾರೆ.ಫಕೀರರು ದೈರಾ ಬಾರಿಸುತ್ತಾ ವಲೀಗಳ ಹೆಸರನ್ನು ಹೇಳುತ್ತಾರೆ, ಭಕ್ತಾದಿಗಳು ಫಾತೇಹಾ ಓದಿಸುತ್ತಾರೆ, ಮೇಲ್ವಿಚಾರಕ ನವಿಲುಗರಿಯ ಕಟ್ಟನ್ನು ಭಕ್ತಾಧಿಗಳ ತಲೆಯ ಮೇಲಿಟ್ಟು ಮುಖದ ಮೇಲಿಂದ ನಿವಾಳಿಸುವನು.ಫಕೀರರು ಗೋರಿಯ ಮೇಲೆ ಗಿಲೇಫ್ ಹೊದಿಸಿ ಗಂಧ ಪುಷ್ಪಗಳನ್ನು ಇಡುವರು.ಹರಕೆ ಮಾಡಿಕೊಂಡ ಹಿಂದೂಗಳು ಸಹ ಅಂದು ಗಂಧ ಪುಷ್ಪಗಳನ್ನು ಗೋರಿಗಳ ಮೇಲಿಡುವರು.ಮೆರವಣಿಗೆಯಲ್ಲಿ ಧಾರ್ಮಿಕ ಹಾಡು-ಗೀತೆಗಳನ್ನು ಹಾಡುವರು, ವಿವಿಧ ವೇಷಗಳ ಪ್ರದರ್ಶನ ನಡೆಯುತ್ತದೆ. ವಾರ್ಷಿಕ ಉರುಸ್ ಹಿಂದೂ-ಮುಸ್ಲಿಂ ಭಾವೈಕತೆಯ ಸಂಕೇತವಾಗಿ ನಡೆಯುತ್ತದೆ.[90]

ಕರ್ನಾಟಕದಲ್ಲಿ ಹಲವಾರು ಕಡೆ ಸೂಫಿ ಸಂತರ ದರ್ಗಾಗಳಿವೆ, ಅವುಗಳಲ್ಲಿ ಖ್ವಾಜಾ ಬಂದೇ ನವಾಜ್ (ಗುಲ್ಬರ್ಗಾ) ತೋಕಲ್ ಮಸ್ತಾನ್ (ಬೆಂಗಳೂರು) ಅಮ್ಮಜಾನ್ ದರ್ಗಾ (ಮುರಗಮಲ್ಲ ಚಿಂತಾಮಣಿ) ಬಾಬಾಬುಡನಗಿರಿ (ಚಿಕ್ಕಮಗಳೂರು) ಸೈಯದ್ ಮದನಿ

(ಉಲ್ಲಾಳ)ಮುಖ್ಯವಾದವು.ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವಾರು ಕಡೆ ಸೂಫಿಸಂತರ ದರ್ಗಾಗಳಿವೆ. ದೇವನಹಳ್ಳಿ ತಾಲೂಕಿಗೆ ಸಂಬಂಧಿಸಿದಂತೆ ದರ್ಗಾಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಮಲಂಗ್‌ಷಾವಲಿ ದರ್ಗಾ-ದೇವನಹಳ್ಳಿ**

ಈ ದರ್ಗಾವು ದೇವನಹಳ್ಳಿ ಚಿಕ್ಕಕೆರೆ ಏರಿ ಪಕ್ಕದಲ್ಲಿದ್ದು ಪಶ್ಚಿಮಾಭಿಮುಖವಾಗಿದ್ದು ತೆರೆದ ಜಾಗದಲ್ಲಿ ಆವರಣ ಸಹಿತ ನಿರ್ಮಾಣವಾಗಿದೆ. (ಚಿ.ಸಂ.131)ಈ ದರ್ಗಾವು ಹೈದರ್ ಆಲಿಗಿಂತ ಮುಂಚಿನದು ಎಂದು ದರ್ಗಾದ ನಿರ್ವಾಹಕರು ತಿಳಿಸಿರುತ್ತಾರೆ.ಈ ದರ್ಗಾದ ಪಶ್ಚಿಮಕ್ಕೆ ಪ್ರವೇಶ ದ್ವಾರವಿದ್ದುದರ್ಗಾದಲ್ಲಿ ಐದು ಖಾನ್‌ಖಾ (ಗೋರಿಗಳು) ಸಮಾಧಿಗಳಿವೆ. ಅದರಲ್ಲಿ ಒಂದು ಮಲಂಗ್‌ಷಾವಲಿ ಅವರದಾಗಿದ್ದು ಉಳಿದವು ಅವರಿಗೆ ಸಂಬಂಧಪಟ್ಟ ಕುಟುಂಬಸ್ಥರು ಮತ್ತು ಅನುಯಾಯಿಗಳದ್ದಾಗಿರುತ್ತದೆ.ದರ್ಗಾದಲ್ಲಿ ಇತ್ತೀಚಿಗೆ ಚದರಬಿಲ್ಲೆಯನ್ನುಗೋಡೆಗೆ ಮತ್ತು ತಳಭಾಗಕ್ಕೆ ಹಾಕಲಾಗಿದೆ. ಇಲ್ಲಿ ಉರುಸು ಮತ್ತು ಖವ್ವಾಲಿ ಕಾರ್ಯಕ್ರಮಗಳು ಆಗಾಗ್ಗೆ ನಡೆಯುತ್ತಿರುತ್ತವೆ.[91]

**ಜಂಗ್ಲಿ ಪೀರ್‌ಬಾಬಾ ದರ್ಗಾ-ವಿಜಯಪುರ:**

ಈ ದರ್ಗಾವು ವಿಜಯಪುರ-ದೇವನಹಳ್ಳಿಯ ರಸ್ತೆಯಲ್ಲಿವಿಜಯಪುರ ಪಟ್ಟಣದಿಂದ 3 ಕಿ.ಮೀ ದೂರದಲ್ಲಿದ್ದುಜಂಗ್ಲಿ ಪೀರ್‌ದರ್ಗಾ ಎಂದು ಹೆಸರಾಗಿದೆ.[92]ಈ ದರ್ಗಾದ ಉಸ್ತುವಾರಿಯನ್ನು ದರ್ಗಾ ಕಮಿಟಿಯು ನೋಡಿಕೊಳ್ಳುತ್ತಿದೆ. ದರ್ಗಾವನ್ನು ಹೊಸದಾಗಿ ಇಸ್ಲಾಮಿಕ್ ಶೈಲಿಯಲ್ಲಿ ನಿರ್ಮಿಸಲಾಗಿದೆ.(ಚಿ.ಸಂ.132)ದರ್ಗಾದಲ್ಲಿ ಸಂತರ ಗೋರಿಗಳಿವೆ. ಈ ದರ್ಗಾ ಶರೀಫ್‌ಗೆ ಕಾಲಕಾಲಕ್ಕೆ ಉರುಸುಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. ದರ್ಗಾ ಕಟ್ಟಡವು 60 ಅಡಿ ಮತ್ತು ಅಗಲ 60 ಅಡಿಗಳಾಗಿದ್ದು ಆರ್‌ಸಿಸಿ ಕಟ್ಟಡವಾಗಿದೆ, ಪೂರ್ವಕ್ಕೆ ಮತ್ತು ಉತ್ತರಕ್ಕೆ ಪ್ರವೇಶದ್ವಾರಗಳಿವೆ. ಮಧ್ಯಭಾಗದಲ್ಲಿ ಅಲಂಕಾರಿಕ ಗುಮ್ಮಟವಿದೆ.ದರ್ಗಾದ ಮೇಲ್ಭಾಗದಲ್ಲಿ ನಾಲ್ಕು ಮೂಲೆಗಳಲ್ಲಿ ಮಿನಾರ್‌ಗಳು ಮತ್ತು ಉಪಮಿನಾರ್‌ಗಳಿವೆ. ಉತ್ತರ ದಿಕ್ಕಿಗೆ ದೂಪದ ಸ್ಥಂಭವಿದೆ. ಮತ್ತೊಂದು ದೂಪಸ್ತಂಭವು ವೇದಿಕೆ ಮೇಲಿದೆ.ಈ ದರ್ಗಾದ ವ್ಯಾಪ್ತಿಯಲ್ಲಿ ದಕ್ಷಿಣ ದಿಕ್ಕಿಗೆ ಮಸೀದಿ ಇದ್ದು ದರ್ಗಾದ ಒಳಭಾಗದಲ್ಲಿ ಜಂಗ್ಲಿ ಪೀರ್ ಬಾಬಾರವರ ಖಾನ್ಖಾವಿದೆ.ದರ್ಗಾದ ದಕ್ಷಿಣ ದಿಕ್ಕಿನಲ್ಲಿ ಇತರೆಯವರ ಸಮಾಧಿಗಳು ಕಂಡುಬರುತ್ತವೆ.

**ಚರ್ಚುಗಳು**

ಕ್ರೈಸ್ತ ಧರ್ಮಿಯರ ಪ್ರಾರ್ಥನ ಮಂದಿರವನ್ನು ಚರ್ಚುಗಳೆಂದು ಕರೆಯಲಾಗುತ್ತದೆ. ಕ್ರೈಸ್ತರಲ್ಲಿ ರೋಮನ್ ಕ್ಯಾಥೋಲಿಕ್ ಮತ್ತು ಪ್ರೊಟೆಸ್ಟಂಟ್ ಎಂಬ ಎರಡು ವರ್ಗಗಳಿವೆ. ಕ್ರೈಸ್ತ ಮಿಷಿನರಿಗಳು ಕ್ರೈಸ್ತ ಧರ್ಮದ ಪ್ರಸಾರ ಮತ್ತು ಸಮಾಜ ಸೇವೆಯಲ್ಲಿ ಪ್ರಮುಖಪಾತ್ರ ವಹಿಸುತ್ತಿವೆ. ಬೆಂಗಳೂರು ಜಿಲ್ಲೆಯಲ್ಲಿ ತೆಕ್ಕೋಳಂಗೆ ಸೇರಿದ ಫ್ರೆಂಚ್ ಜೆಸ್ಯುಯೇಟ್/ಪ್ರಚಾರಕರಾದ ಬೋಚರ್ ಮತ್ತು ಮಾಂಡುಯಿಚ್ ಎಂಬುವರು ಕ್ರಿ.ಶ.1702ರಲ್ಲಿ ಕ್ಯಾಥೋಲಿಕ್ ಮಿಷನನ್ನು ಸ್ಥಾಪಿಸಿದರು, ಇದು ತೆಲಗು ಮಿಷನ್ ಆಗಿದ್ದು ದೇವನಹಳ್ಳಿ ಮತ್ತು ಹೊಸಕೋಟೆಗಳಲ್ಲಿ ಸಣ್ಣ ಚರ್ಚುಗಳನ್ನು ಸ್ಥಾಪಿಸಿತು. ದೇವನಹಳ್ಳಿ ತಾಲೂಕಿನಲ್ಲಿ ದೇವನಹಳ್ಳಿ, ಬೀರಸಂದ್ರ ಮುಂತಾದ ಕಡೆಗಳಲ್ಲಿ ಚರ್ಚುಗಳು ಕಂಡುಬರುತ್ತವೆ ಅವುಗಳಲ್ಲಿ ಕಾರಹಳ್ಳಿಯ ಸೇಂಟ್ ಜೂಡ್ಸ್‌ನ್ನು ಕ್ರಿ.ಶ.1971ರಲ್ಲಿ ಸ್ಥಾಪಿಸಲಾಯಿತು.[93]

**ಜೈನಧರ್ಮ:**

ಜೈನಧರ್ಮವು ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದ್ದು ಮೌರ್ಯ ಅರಸ ಚಂದ್ರಗುಪ್ತ ಮೌರ್ಯನು ಕ್ರಿ.ಪೂರ್ವದಲ್ಲಿಯೇ ತನ್ನ ಗುರು ಭದ್ರಬಾಹುವಿನೊಡನೆ ಶ್ರವಣ ಬೆಳಗೊಳಕ್ಕೆ ಆಗಮಿಸಿದ ಬಗ್ಗೆ ಮಾಹಿತಿ ಇದೆ. ಜೈನರಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಪಂಗಡಗಳಿದ್ದು ಜೈನಧರ್ಮವು ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೆ ಸಾಹಿತ್ಯ, ಕಲೆ, ಶಿಕ್ಷಣ ಮುಂತಾದ ಕ್ಷೇತ್ರಗಳಿಗೆ ಅಮೂಲ್ಯ ಕೊಡುಗೆಯನ್ನು ನೀಡಿದೆ. ಕರ್ನಾಟಕದಲ್ಲಿ ಗಂಗರು ಮತ್ತು ಇತರೇ ರಾಜಮನೆತನದವರ ಆಳ್ವಿಕೆಯ ಕಾಲದಲ್ಲಿ ಜೈನಧರ್ಮವು ರಾಜಾಶ್ರಯವನ್ನು ಪಡೆದಿತ್ತು.ಗಂಗರ ಕಾಲದಲ್ಲಿ ಹಲವಾರು ಜೈನಬಸದಿಗಳು ಮತ್ತು ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನ ಮೂರ್ತಿ ಸ್ಥಾಪಿಸಲ್ಪಟ್ಟಿತು. ಹೊಯ್ಸಳ ಅರಸ ವಿಷ್ಣುವರ್ಧನನು ಮೂಲತಃ ಜೈನನಾಗಿದ್ದನು. ಕನ್ನಡ ಸಾಹಿತ್ಯದ ತ್ರಿರತ್ನತ್ರಯರಾದ ಪಂಪ, ರನ್ನ, ಜನ್ನರವರು ಮೂಲತಃ ಜೈನರು.

**ಜೈನ ಬಸದಿಗಳು**: ಜೈನ ಬಸದಿಗಳು ಪ್ರಾಥನಾ ಮತ್ತು ವಿದ್ಯಾಕೇಂದ್ರಗಳಾಗಿ ಸೇವೆ ಸಲ್ಲಿಸುತ್ತಿವೆ.ದೇವನಹಳ್ಳಿ ತಾಲೂಕಿನಲ್ಲಿ ಇತ್ತೀಚಿನ ದಶಕಗಳಲ್ಲಿ ಜೈನಬಸದಿಗಳು ನಿರ್ಮಾಣವಾಗಿದ್ದು ಅವುಗಳು ಸ್ಥಳೀಯವಾಗಿ ಜೈನಮಂದಿರಗಳೆಂದು ಹೆಸರಾಗಿವೆ. ಅವುಗಳಲ್ಲಿ ಮುಖ್ಯವಾಗಿ

**ಶ್ರೀ ನಾಕೋಡ ಆವಂತಿ 108 ಪಾರ್ಶ್ವನಾಥ ಜೈನ ತೀರ್ಥಧಾಮ**:ಇದು ದೇವನಹಳ್ಳಿ–ಹೈದ್ರಾಬಾದ್ ಎನ್.ಹೆಚ್.7 ರಸ್ತೆಯಲ್ಲಿ ವಿಜಯಪುರ–ದೇವನಹಳ್ಳಿ ಕ್ರಾಸ್‌ನಲ್ಲಿದೆ.(ಅಡ್ಡರಸ್ತೆ) (ಚಿ.ಸಂ.133)ಇದು ಭಾರತದಲ್ಲೇ ಎರಡನೇ ಅತಿದೊಡ್ಡ ಜೈನ ಬಸದಿ ಎನಿಸಿದೆ.ಈ ಬಸದಿಯನ್ನು ಶ್ರೀ ವಿಕ್ರಮ್ ಸ್ಥೂಲ ಭದ್ರವಿಹಾರ್ ಎಂಬ ಜೈನ ಮುನಿಗಳು ಸ್ಥಾಪಿಸಿದರು. ಜೈನಮಂದಿರದಲ್ಲಿ 23ನೇ ತೀರ್ಥಂಕರ ಪಾರ್ಶ್ವನಾಥ ವಿಗ್ರಹ, 24ನೇ ತೀರ್ಥಂಕರ ಮಹಾವೀರ ವಿಗ್ರಹ ಮತ್ತು 1ನೇ ತೀರ್ಥಂಕರ ವೃಷಭನಾಥನ ವಿಗ್ರಹಗಳಿವೆ. ದೇವಾಲಯವನ್ನು ಪ್ರವೇಶಿಸಿದಾಗ ಮಧ್ಯಭಾಗದಲ್ಲಿ ಮೆಟ್ಟಿಲುಗಳ ಮೇಲಿರುವ ದೇವಾಲಯವನ್ನು ನಾಕೋಡ ದೇವಾಲಯವೆಂದು ಮೆಟ್ಟಿಲುಗಳ ಕೆಳಭಾಗದಲ್ಲಿರುವ ದೇವಾಲಯವನ್ನು ಆವಂತಿ ದೇವಾಲಯವೆಂದು ಕರೆಯುತ್ತಾರೆ. ಎರಡು ದೇವಾಲಯಗಳು ಮಂದಿರದ ಆವರಣದ ಮಧ್ಯಭಾಗದಲ್ಲಿದ್ದು ಇದರ ಸುತ್ತಲೂ 108 ಪಾರ್ಶ್ವನಾಥ ಮೂರ್ತಿಗಳಿರುವ ಗುಡಿಗಳು ವೃತ್ತಾಕಾರದಲ್ಲಿವೆ. ಈ ಬಸದಿಯನ್ನು ಒಂದು ಖಾಸಗಿ ಆಡಳಿತ ಮಂಡಳಿ ನಿರ್ವಹಿಸುತ್ತಿದೆ. ಅದೇ ರೀತಿ ಜೈನ ಸಮುದಾಯದವರು ಪಾರಿವಾಳಗುಡ್ಡದ ಮೇಲೆ (ರಾಣಿ ಕ್ರಾಸ್ ಸಮೀಪ) ಏಕಶಿಲಾ ಬಾಹುಬಲಿ ಸೇರಿದಂತೆ ಹಲವಾರು ಮೂರ್ತಿಗಳನ್ನು ನಿರ್ಮಿಸಿದ್ದಾರೆ.[94]

## ಅಡಿ ಟಿಪ್ಪಣಿಗಳು

1. ಎ.ಕ.ಸಂ.9, ಡಿ.ವಿ.78, ಗಂಗವಾರ, ಕ್ರಿ.ಶ.1300, ಪು.ಸಂ.190 ಮತ್ತು ಎ.ಕ.ಸಂ.9. ಡಿ.ವಿ.80 ಗಂಗವಾರ, ಕ್ರಿ.ಶ.1300, ಪು.ಸಂ.190.

2. ಎ.ಕ.ಸಂ.9, ಡಿ.ವಿ.53, ಕ್ರಿ.ಶ.1287, ಬಾಯನಹಳ್ಳಿ, ಪು.ಸಂ.182.

3. ಎ.ಕ.ಸಂ.9. ಡಿ.ವಿ.60. ಕ್ರಿ.ಶ.1329, ಚಿಕ್ಕಜಾಲ, ಪು.ಸಂ.184–185.

4. ಎ.ಕ.ಸಂ.9, ಡಿ.ವಿ. 81, ಜೋಡಿಸಾದಹಳ್ಳಿ, ಕ್ರಿ.ಶ.1425, ಪು.ಸಂ.191–192.

5. ಎ.ಕ.ಸಂ.9, ಡಿ.ವಿ.15, 16, 37, 51, 70, 71, ಕ್ರಿ.ಶ.1698.

6. ಎ.ಕ.ಸಂ.9, ಡಿ.ವಿ.30, ಕ್ರಿ.ಶ.1729, ವಡಿಗೇನಹಳ್ಳಿ, ಪು.ಸಂ.170–171.

7. ಎ.ಕ.ಸಂ.9, ಡಿ.ವಿ,40, ಕ್ರಿ.ಶ.1386, ನಲ್ಲೂರು, ಪು.ಸಂ.176.

8. ಎ.ಕ.ಸಂ.9, ಡಿ.ವಿ.58, ಕ್ರಿ.ಶ.1382, ಚಿಕ್ಕಜಾಲ, ಪು.ಸಂ.183.

9. ಎ.ಕ.ಸಂ.9, ಡಿ.ವಿ.33, ಕ್ರಿ.ಶ.1574, ಕೊಂಡೇನಹಳ್ಳಿ, ಪು.ಸಂ.173.

10. ಎ.ಕ.ಸಂ.9. ಡಿ.ಬಿ.37, ಕ್ರಿ.ಶ.1698, ಸೋಮನಹಳ್ಳಿ/ಸೋಮುತ್ತನಹಳ್ಳಿ ಪು.ಸಂ.174–175.

11. ವಸಂತಲಕ್ಷ್ಮಿ.ಕೆ. ಕರ್ನಾಟಕ ಶೈವ ಶಿಲ್ಪಗಳು, ಧಾರವಾಡ, ಪು.ಸಂ.3, 28, 2008.

12. ಎ.ಕ.ಸಂ.9, ಡಿ.ವಿ.75, ಕ್ರಿ.ಶ.1046, ಗಂಗವಾರ, ಪು.ಸಂ.190 ಮತ್ತು ಎ.ಕ.ಸಂ.79, ಕ್ರಿ.ಶ.1267, ಗಂಗವಾರ, ಪು.ಸಂ.190.

13. ಬೆಂಗಳೂರು ಡಿಸ್ಟ್ರಿಕ್ಟ್ ಹ್ಯಾಂಡ್ ಬುಕ್, ಪು.ಸಂ.296, 1930.

14. ಎಂ.ಎ.ಆರ್, 1935, ಪು.ಸಂ.32.

15. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕ.ಸಾ.ಪ, ಪು.ಸಂ.147–149, 1994.

16. ಎ.ಕ.ಸಂ.9, ಡಿ.ವಿ.75, ಕ್ರಿ.ಶ.1046, ಗಂಗವಾರ, ಪು.ಸಂ.190.

17. ಎ.ಕ.ಸಂ.9, ಡಿ.ವಿ.76, ಕ್ರಿ.ಶ.1050, ಗಂಗವಾರ, ಪು.ಸಂ.190.

18. ಎ.ಕ.ಸಂ.9, ಡಿ.ವಿ77 ಎ ಮತ್ತು 77 ಬಿ, ಕ್ರಿ.ಶ.1100, ಗಂಗವಾರ, ಪು.ಸಂ.190.

19. ಎ.ಕ.ಸಂ.9, ಡಿ.ವಿ.79, ಕ್ರಿ.ಶ.1267, ಗಂಗವಾರ, ಪು.ಸಂ.190.

20. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.811, 812, 1989.

21. ಅದೇ, ಪು.ಸಂ.812.

22. ದೇವರಕೊಂಡಾ ರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕ.ಸಾ.ಪ, ಪು.ಸಂ.148, 1994.

23. ಎಂ.ಎ.ಆರ್,1935, ಪು.ಸಂ.32.

24. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.811, 812. 1989.

25. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

26. ದೇವರಕೊಂಡಾ ರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕ.ಸಾ.ಪ, ಪು.ಸಂ.148, 1994.

27. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಮೈ.ವಿ.ವಿ. ಪು.ಸಂ.309-310, 2009.

28. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಮೈ.ವಿ.ವಿ. ಪು.ಸಂ.309-310, 2009.

29. ದೇವರಕೊಂಡಾ ರೆಡ್ಡಿ. ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕ.ಸಾ.ಪ. ಪು.ಸಂ.148, 1994.

30. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಮೈ.ವಿ.ವಿ. ಪು.ಸಂ.310, 2009.

31. ದೇವರಕೊಂಡಾ ರೆಡ್ಡಿ. ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕ.ಸಾ.ಪ. ಪು.ಸಂ.148-149, 1994.

32. ಅದೇ,ಪು.ಸಂ.149.

33. ಎಂ.ಎ.ಆರ್. 1914-15, ಪು.ಸಂ.17

34. ಎ.ಕ.ಸಂ.9, ಡಿ.ವಿ,37, ದೇವನಹಳ್ಳಿ, ಪು.ಸಂ.167

35. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

36. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.866, 1989.

37. ಅದೇ, ಪು.ಸಂ.807.

38. ಅದೇ, ಪು.ಸಂ.865.

39. ಅದೇ, ಪು.ಸಂ.865.

40. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

41. ಅದೇ,

42. ಅದೇ,

43. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.865

44. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

45. ಅದೇ,

46. ಅದೇ,

47. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, ಪು.ಸಂ.807.

48. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

49. ವಸಂತಲಕ್ಷ್ಮಿ, ಕೆ.,ಕರ್ನಾಟಕದ ವೈಷ್ಣವ ಶಿಲ್ಪಗಳು, ಧಾರವಾಡ, ಪು.ಸಂ.10, 11, 2018.

50. ಅರುಣಿ,ಎಸ್.ಕೆ., ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.77, 2007.

51. ವಸಂತಲಕ್ಷ್ಮಿ,ಕೆ., ಕರ್ನಾಟಕದ ವೈಷ್ಣವ ಶಿಲ್ಪಗಳು, ಧಾರವಾಡ, ಪು.ಸಂ.149, 2018.

52. ಎ.ಕ.ಸಂ.9, ಡಿ.ವಿ, 15, 16, 37, 51, 70, 71.

53. ಪುಟ್ಟಸ್ವಾಮಿ,ಬಿ.ಎಸ್.,ಯಲಹಂಕ ನಾಡಪ್ರಭು ಕೆಂಪೆಗೌಡ ಮತ್ತು ಆತನ ವಂಶಸ್ಥರು. ಬೆಂಗಳೂರು, ಪು.ಸಂ.19, 2011.

54. ಎಂ.ಎ.ಆರ್.1913, ಪು.ಸಂ.16.

55. ಅರುಣಿ,ಎಸ್.ಕೆ., ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.79-82, 2007.

56. ಅದೇ, ಪು.ಸಂ.79-82.

57. ಎ.ಕ.ಸಂ.9, ಡಿ.ವಿ, 16, ಕ್ರಿ.ಶ.1698, ದೇವನಹಳ್ಳಿ, ಪು.ಸಂ.166.

58. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ.149, 1994.

59. ಪುಟ್ಟಸ್ವಾಮಿ, ಬಿ.ಎಸ್., ಯಲಹಂಕ ನಾಡಪ್ರಭು ಕೆಂಪೆಗೌಡ ಮತ್ತು ಆತನ ವಂಶಸ್ಥರು, ಬೆಂಗಳೂರು ಪು.ಸಂ.19, 2011.

60. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.865-866, 1989.

61. ಎ.ಕ.ಸಂ.96, ಡಿ.ವಿ.30, ಕ್ರಿ.ಶ.1729, ವಡಿಗೇನಹಳ್ಳಿ, ಪು.ಸಂ.170-171.

62. ಎಂ.ಎ.ಆರ್.1914-15, ಪು.ಸ.19.

63. ಮೈಸೂರು ಗ್ಯಾಜೆಟಿಯರ್, ಪು.ಸಂ.87-88, 1930.

64. ಅರುಣಿ,ಎಸ್.ಕೆ., ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.50-53, 2007.

65. ಅದೇ,

66. ಕ್ಷೇತ್ರ ಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

67. ಅದೇ,

68. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.844, 1989,

69. ಆದೆಪ್ಪ ಪಾಸೋಡಿ, ಪುರಾವಸ್ತು, ಬೆಂಗಳೂರು, ಪು.ಸಂ.148-149, 2016.

70. ಅದೇ, ಪು.ಸಂ.149-150.

71. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

72. ರಂಗರಾಜು, ಎನ್.ಎಸ್. ದಿ ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು

ಡಿಸ್ಟ್ರಿಕ್ಟ್, ಮೈಸೂರು, 88-92.1998.

73. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

74. ಅದೇ,

75. ವಸಂತಲಕ್ಷ್ಮಿ, ಕೆ, ಸಪ್ತಮಾತೃಕೆ ಶಿಲ್ಪಗಳು ಮತ್ತು ಆರಾಧನೆ, ಕೋಲಾರ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ, ಪು.ಸ.115, 2004.

76. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.312-313, 2009.

77.ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

78. ಅದೇ,

79. ಅದೇ,

80. ಅದೇ,

81. ಎಂ.ಎ.ಆರ್.1913-14, ಪು.ಸಂ.17

82. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

83. ಅದೇ,

84. ಅದೇ,

85. ಎಂ.ಎ.ಆರ್.1935, ಪು.ಸಂ.31.

86. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.806, 1989.

87. ಇಬ್ರಾಹಿಂ ಎಂ. ಮುಲ್ಲಾ, ಕರ್ನಾಟಕದ ಉರುಸುಗಳು, ಧಾರವಾಡ, ಪು.ಸಂ.203, 2008.

88. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.807, 1989.

89. ಇಬ್ರಾಹಿಂ. ಎಂ. ಮುಲ್ಲಾ., ಕರ್ನಾಟಕದ ಉರುಸುಗಳು, ಧಾರವಾಡ, ಪು.ಸಂ.203-204, 2008.

90. ಜಯಮ್ಮ ಕರಿಯಣ್ಣ, ಹೆಚ್, ಬೆಂಗಳೂರಿನ ಉತ್ಸವಗಳು, ಜಾತ್ರೆಗಳು ಮತ್ತು ಪರಿಷೆಗಳು, ಬೆಂಗಳೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ, ಪು.ಸಂ.412, 2013.

91. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

92. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಜೆಟಿಯರ್, ಪು.ಸಂ.867, 1989.

93. ಅದೇ, ಪು.ಸಂ.147.

94. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

# ಅಧ್ಯಾಯ-6

## ದೇವನಹಳ್ಳಿ ತಾಲೂಕಿನ ಕೋಟೆಗಳು ಮತ್ತು ಸ್ಮಾರಕಗಳು

**ಪೀಠಿಕೆ:**

ಕೋಟೆಯೆಂದರೆ ರಕ್ಷಣಾರ್ಥವಾಗಿ ಸುತ್ತಲೂ ಎತ್ತರವಾದ ಗೋಡೆಯ ರಚನೆಯೆಂದು ಅರ್ಥ.ಇದು ಶಿಲಾ ರಚನೆಯಾಗಿರಬಹುದು ಅಥವಾ ಮಣ್ಣಿನ ರಚನೆಯಾಗಿರಬಹುದು. ಕೋಟೆಗೆ ದುರ್ಗ, ಕಿಲ್ಲ ಎಂದೂ ಕರೆಯಲಾಗುತ್ತದೆ. ರಕ್ಷಣಾ ವಾಸ್ತುಶಿಲ್ಪದಲ್ಲಿ ಕೋಟೆಗೆ ಪ್ರಥಮ ಸ್ಥಾನ ಇದೆ.ಕೋಟೆಗಳ ನಿರ್ಮಾಣದಇತಿಹಾಸ ಆರಂಭಕಾಲದಿಂದಲೂ ನಡೆದುಕೊಂಡು ಬಂದಿದೆ, ದೇವಾಲಯಗಳು ವಾಸದ ಮನೆಗಳು ಅರಮನೆಗಳು ಮುಂತಾದ ಕಟ್ಟಡಗಳು ಈ ಕೋಟೆಯಲ್ಲಿಯೇ ಅಂತರ್ಗತವಾಗಿದ್ದು ಜನರ ಧಾರ್ಮಿಕ ಮತ್ತು ಸಾಮಾಜಿಕ ಅಗತ್ಯಗಳನ್ನು ಪೂರೈಸುತ್ತಿತ್ತು. ನೀರಿನ ಅಗತ್ಯಕ್ಕಾಗಿ ದೊಡ್ಡ ಕೋಟೆಗಳಾದರೆ ಕೆರೆಗಳು ಇರುತ್ತಿದ್ದವು. ಸಣ್ಣ ಕೋಟೆಗಳಲ್ಲಿ ಬಾವಿಗಳು ಇರುತ್ತಿದ್ದವು. ಗಿರಿದುರ್ಗಗಳಲ್ಲಿ ದೋಣೆಗಳು ಇರುತ್ತಿದ್ದವು. ಪ್ರಾರಂಭದಲ್ಲಿ ಮಣ್ಣಿನ ಕೋಟೆಗಳು ನಿರ್ಮಾಣಗೊಂಡು ಕಾಲಕ್ರಮೇಣ ಇಟ್ಟಿಗೆ ಮತ್ತು ಕಲ್ಲುಗಳಿಂದ ಕೋಟೆಗಳು ನಿರ್ಮಾಣವಾದವು. ಮದ್ದುಗುಂಡುಗಳ ಅವಿಷ್ಕಾರದಿಂದ ಭದ್ರವಾದ ಕಲ್ಲಿನ ಕೋಟೆಯ ಅವಶ್ಯಕತೆ ಕಂಡುಬಂದಿತು.[1]

ಕೋಟೆಯೆಂದರೆ ಅದಕ್ಕೆ ಸುತ್ತಲೂ ಆಳವಾದ ಮತ್ತು ಅಗಲವಾದ ಕಂದಕಗಳು ಸಾಮಾನ್ಯವಾಗಿ ಇರಲೇಬೇಕು.ಯುದ್ಧ ಅಥವಾ ಆಕ್ರಮಣ ಸಂದರ್ಭದಲ್ಲಿ ಕೋಟೆಯ ಕಂದಕಕ್ಕೆ ನೀರನ್ನು ಪೂರೈಸಲಾಗುತ್ತದೆ. ಸದಾಕಾಲ ನೀರುಳ್ಳ ಕಂದಕಗಳು ಸಹ ಇರುತ್ತದೆ. ಈ ಕಂದಕವನ್ನು ಶತ್ರುಗಳು ಒಳಬರದಂತೆ ವ್ಯವಸ್ಥೆ ಮಾಡಲಾಗಿರುತ್ತದೆ. ಕಂದಕದ ನೀರಿನಲ್ಲಿ ಶತ್ರುಗಳು ಈಜಿ ಬರದಂತೆ ಮೊಸಳೆಗಳನ್ನು ಬಿಡಲಾಗುತ್ತಿತ್ತು. ಅಷ್ಟಾಗಿಯು ಅವರ ಕಂದಕವನ್ನು ದಾಟಿ ಮೇಲೆ ಬಂದರೆ ಕೋಟೆಯ ಮೇಲೆ ನಿಂತ ಕಾವಲುಗಾರರು ಅವರ ಮೇಲೆ ಬಾಣ ಅಥವಾ ಬಂದೂಕಿನಿಂದ ಹಲ್ಲೆ ಮಾಡಿ ಕೊಲ್ಲುತ್ತಿದ್ದರು.[2]

ಕೋಟೆಯ ಬಾಗಿಲುಗಳು ಕೋಟೆಯ ಬಹಳ ಮುಖ್ಯವಾದ ಅಂಗ.ಕೋಟೆಯ ಬಾಗಿಲಿನ ಮೂಲಕ ಶತ್ರುಗಳು ಒಳನುಗ್ಗದಂತೆ ಕಾವಲು ಕಾಯಲು ಕೋಟೆಯ ದ್ವಾರದ ಎರಡು ಕಡೆ ಹೊರಚಾಚಿರುವ ಕೊತ್ತಲಗಳನ್ನು ನಿರ್ಮಿಸಲಾಗುತ್ತಿತ್ತು. ವಿಜಯನಗರ ಅರಸರ ನಂತರದ ಕಾಲದಲ್ಲಿ ಎತ್ತರವಾದ ಗೋಪುರಗಳನ್ನು ನಿರ್ಮಿಸಿ ದೂರದಿಂದಲೇ ಶತ್ರುಗಳು ಒಳನುಗ್ಗದಂತೆ ಕೋಟೆಯ ಕೊತ್ತಲಗಳ ಮೇಲೆ ಬಾರಿ ತೋಪುಗಳಿಂದ ಮದ್ದುಗುಂಡುಗಳನ್ನು ಸಿಡಿಸುತ್ತಿದ್ದರು.

ಕೋಟೆ ಗೋಡೆಗಳಲ್ಲಿ ಸಂಧುಗಳನ್ನು ನಿರ್ಮಿಸಿ ಅದರ ಮೂಲಕ ಬಾಣ ಅಥವಾ ಬಂದೂಕನ್ನು ಶತ್ರುಗಳ ಮೇಲೆ ಪ್ರಯೋಗಿಸಲಾಗುತ್ತಿತ್ತು. ಅನೇಕ ಕೋಟೆಗಳಲ್ಲಿ ಮದ್ದಿನ ಮನೆಗಳು ಮತ್ತು ಶಸ್ತ್ರಾಗಾರಗಳು ಇರುತ್ತಿದ್ದವು. ಕೋಟೆ ಒಳಭಾಗದಲ್ಲಿ ಆಹಾರ ಧಾನ್ಯಗಳನ್ನು ಮದ್ದು ಗುಂಡು ಗಳನ್ನು ಸಂಗ್ರಹಿಸಲು ಕಿಂಡಿ ಕೋಣೆಗಳು ಇರುತ್ತಿದ್ದವು.[3]

**ಕೋಟೆಗಳ ವಿಧಗಳು**:

ಕೋಟೆಗಳನ್ನು ಕಟ್ಟುವಾಗ ಆಯಾಕಟ್ಟಿನ ಜಾಗಕ್ಕೆ ಮಹತ್ವವನ್ನು ಕೊಡಲಾಗುತ್ತಿತ್ತು, ಭೌಗೋಳಿಕ ಪರಿಸರವನ್ನು ಮೊದಲು ಆಯ್ಕೆ ಮಾಡಿಕೊಂಡು, ಆ ಜಾಗದಲ್ಲಿ ಅಲ್ಲಿಗೆ ಹತ್ತಿರದ ಬೆಟ್ಟ ಗುಡ್ಡಗಳಲ್ಲಿನ ಕಲ್ಲುಗಳನ್ನು ತರಿಸಿ ಕೋಟೆಯ ನಿರ್ಮಾಣ ಮಾಡುತ್ತಿದ್ದರು. ಶತ್ರುಪಡೆ ಸುಲಭವಾಗಿ ಹತ್ತಿರ ಬರದಂತೆ ಕೋಟೆಗಳನ್ನು ಆಯಾಕಟ್ಟಿನ ಜಾಗದಲ್ಲಿ, ಕಡಿದಾದ ಬೆಟ್ಟದ ಮೇಲೆ ಕಾಡಿನ ಮಧ್ಯದಲ್ಲಿ ನದಿ ತೀರದಲ್ಲಿ ನೀರಿನ ನಡುವೆ ಕೋಟೆಗಳನ್ನು ಕಟ್ಟಲಾಗಿದೆ.

ಭಾರತದ ಪ್ರಾಚೀನ ಶಾಸ್ತ್ರಗ್ರಂಥಗಳು ಕೋಟೆಗಳ ವಿವರಗಳನ್ನು ಕುರಿತು ಮಾಹಿತಿ ಒದಗಿಸುತ್ತವೆ. ಪ್ರಾಚೀನ ವಾಸ್ತುಗ್ರಂಥಗಳಾದ ಮಾನಸಾರ ಮಯಮತ, ವಿಶ್ವಕರ್ಮ ವಾಸ್ತು ಹಾಗೂ ಶಿಲ್ಪರತ್ನ, ಪುರಾಣಗಳಾದ ಮತ್ಸ್ಯ ಪುರಾಣ, ಮಾರ್ಕಂಡೇಯ ಪುರಾಣ, ವಿಷ್ಣುಪುರಾಣ, ರಾಜನೀತಿ ಕೃತಿಗಳಾದ ಕೌಟಿಲ್ಯನ ಅರ್ಥಶಾಸ್ತ್ರ, ಮನುಸ್ಮೃತಿ, ಶುಕ್ರನೀತಿಸಾರ, ಬೃಹತ್ ಸಂಹಿತಾ ಇತ್ಯಾದಿಗಳು ಕೋಟೆಗಳ ವರ್ಗೀಕರಣವನ್ನು ತಿಳಿಸುತ್ತದೆ. ಈ ವರ್ಗೀಕರಣದಲ್ಲಿ ಕೋಟೆಯ ಸ್ಥಳ, ಆಕಾರ ಮತ್ತು ರಚನೆಗೆ ಉಪಯೋಗಿಸುವ ವಸ್ತುಗಳನ್ನು ಆಧಾರವಾಗಿರಿಸಿಕೊಂಡಿದೆ.[4]

ಕೌಟಲ್ಯನತನ್ನ ಅರ್ಥಶಾಸ್ತ್ರದಲ್ಲಿ ರಾಜ್ಯಕ್ಕೆ ಏಳು ಅಂಗಗಳು (ಸಪ್ತಾಂಗ) ಇರಬೇಕೆಂದು ತಿಳಿಸಿದ್ದಾನೆ. ಅವುಗಳೆಂದರೆ ರಾಜ, ಮಂತ್ರಿ, ಬಲ, ಕೋಶ, ದುರ್ಗ, ಜನಪದ ಮತ್ತು ಮಿತ್ರ ಇವುಗಳಲ್ಲಿ ದುರ್ಗ ಎಂದರೆ ಕೋಟೆ ಇದು ಬಹಳ ಮುಖ್ಯವಾದುದು.[5]

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಸ್ಥಳದ ಆಧಾರದ ಮೇಲೆ ಕೋಟೆಗಳನ್ನು ಔದಕ, ಪಾರ್ವತ, ಧಾನ್ವನ, ವನ ಎಂಬ ನಾಲ್ಕು ಭಾಗಗಳನ್ನಾಗಿ ತಲವಿನ್ಯಾಸ ಮತ್ತು ಆಕಾರದ ಮೇಲೆ ವೃತ್ತ (ವರ್ತುಲಾಕಾರ) ಧೀರ್ಘಾಚತುರಸ್ರ (ಆಯತಾಕಾರ) ಚತುರಸ್ರ (ಚೌಕಾಕಾರ) ಎಂಬುದಾಗಿ ಕೋಟೆಯನ್ನು ೩ ರೀತಿಯಾಗಿ ವಿಭಜಿಸಿದ್ದಾನೆ.[6]ಭಾರತದ ಅತ್ಯಂತ ಪ್ರಾಚೀನ ಶಾಸನ ಗ್ರಂಥಗಳಾದ ಶುಕ್ರನೀತಿ ಸಾರವು ೯ ರೀತಿಯ ಕೋಟೆಗಳನ್ನು ಮಾನಸಾರವು ೮ ರೀತಿಯ

ಕೋಟೆಗಳನ್ನು, ದುರ್ಗಸಿಂಹನ ಪಂಚತಂತ್ರದಲ್ಲಿ 4 ರೀತಿಯ ಕೋಟೆಗಳನ್ನು 3ನೇ ಸೋಮೇಶ್ವರನ ಮಾನಸೋಲ್ಲಾಸದಲ್ಲಿ 9 ರೀತಿಯ ಕೋಟೆಗಳನ್ನು ಉಲ್ಲೇಖಿಸಿವೆ.[7]

**ಶಾಸನಗಳಲ್ಲಿ ಕೋಟೆಯ ಪ್ರಕಾರಗಳ ಉಲ್ಲೇಖ:**

ಶಾಸನಗಳು ಸಹ ಕೋಟೆಯ ಪ್ರಕಾರಗಳನ್ನು ಉಲ್ಲೇಖಿಸುತ್ತವೆ. ಶ್ರವಣಬೆಳಗೊಳದ ಗಂಗಾವರಣ ಬಸದಿಯ ಕ್ರಿ.ಶ.1131ರ ಶಾಸನವು ಹೊಯ್ಸಳ ವಿಷ್ಣುವರ್ಧನನು ಗಿರಿದುರ್ಗ, ವನದುರ್ಗ, ಜಲದುರ್ಗಾದಿ ಅನೇಕ ದುರ್ಗಗಳನ್ನು ಗೆದ್ದನೆಂದು ತಿಳಿಸುತ್ತದೆ. ಐಹೊಳೆ ಶಾಸನವು ಸ್ಥಳದುರ್ಗವನ್ನು ಉಲ್ಲೇಖಿಸುತ್ತದೆ. ಕ್ರಿ.ಶ.634ರ ಈ ಶಾಸನವು ಪುಲಿಕೇಶಿಯ ಸೇನಾ ಸಮುದ್ರವು ಸುತ್ತುವರೆದಿದ್ದುರಿಂದ ಸ್ಥಳದುರ್ಗವಾದ ಬನವಾಸಿಯು ಜಲದುರ್ಗವಾಯಿತ್ತೆಂದು ವರ್ಣಿಸುತ್ತದೆ. ಉಚ್ಚಂಗಿದುರ್ಗವು ಶ್ರೇಷ್ಟವಾದ ಗಿರಿದುರ್ಗವಾಗಿತ್ತೆಂಬುದು ಶಾಸನಗಳಿಂದ ತಿಳಿಯುತ್ತದೆ. ಹೊಯ್ಸಳ ಬಲ್ಲಾಳನು ಈ ಕೋಟೆಯನ್ನು ಜಯಿಸಿ ಗಿರಿದುರ್ಗ ಮಲ್ಲನೆಂಬ ಬಿರುದನ್ನು ಪಡೆದನೆಂದು ತಿಳಿಸುತ್ತದೆ. [8]

**ಶಾಸನಗಳಲ್ಲಿ ಕೋಟೆಯ ಭಾಗಗಳ ಉಲ್ಲೇಖ:**

ಶಾಸನಗಳು ಕೋಟೆಯ ಕೆಲವು ಭಾಗಗಳನ್ನು ಸಹ ಉಲ್ಲೇಖಿಸುತ್ತವೆ. ವಿಜಯನಗರದ ಕೋಟೆಯ ಬಾಗಿಲುಗಳನ್ನು ಹೆಬ್ಬಾಗಿಲು, ಬಾಗಿಲು ಮತ್ತು ದಿಡ್ಡಿಗಳೆಂದು ವರ್ಗೀಕರಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಕೋಟೆ ಗೋಡೆಯ ಪಕ್ಕದಲ್ಲಿಯೇ ಮುಂಚಾಚಿದ ಭಾಗವನ್ನು ಕೊತ್ತಳವೆಂದು ಕರೆಯಲಾಗುತ್ತದೆ. ಕೋಟೆಯ ಬಾಗಿಲು ಮತ್ತು ಕೊತ್ತಳಗಳನ್ನು ಯುದ್ಧ ಸಮಯದಲ್ಲಿ ಗುರುತಿಸಲು ಅನುಕೂಲವಾಗುವಂತೆ ಅವುಗಳಿಗೆ ಹೆಸರುಗಳನ್ನು ಇಡಲಾಗಿದೆ. ಉದಾಹರಣೆಗೆ ಮುದಗಲ್ಲು ಕೋಟೆಯ ಬಾಗಿಲನ್ನು ಅಗಸೆ ಎಂದು ಕೊತ್ತಳಗಳನ್ನು ಬುರುಜುಗಳೆಂದು ಉಲ್ಲೇಖಿಸಲಾಗಿದೆ ಹಾಗೂ ಕೋಟೆ ಗೋಡೆಯ ಮೇಲಿನ ತೆನೆಗಳನ್ನು ನಿಟ್ಟುಗಳೆಂದು ಕರೆಯಲಾಗಿದೆ.[9] ಕೊತ್ತಳಗಳನ್ನು ಉರ್ದುಭಾಷೆಯಲ್ಲಿ ಬುರುಜು ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಕೊತ್ತಳಗಳನ್ನು ಕೋಟೆ ಜೊತೆಯಲ್ಲಿ ಸೇರಿಸಿ, ಕೋಟೆ–ಕೊತ್ತಳಗಳೆಂದು ಕರೆಯಲಾಗುತ್ತದೆ.

ಕೋಟೆಗಳಲ್ಲಿ ಗಿರಿದುರ್ಗ, ಸ್ಥಳದುರ್ಗ, ಜಲದುರ್ಗ ಮತ್ತು ವನದುರ್ಗಗಳೆಂಬ ವಿಂಗಡಣೆಗಳಿವೆ. ಕರ್ನಾಟಕದಲ್ಲಿ ಈಗ ಉಳಿದಿರುವ ಕೋಟೆಗಳನ್ನು ಗಮನಿಸಿದರೆ ಅವುಗಳಲ್ಲಿ ಗಿರಿದುರ್ಗಗಳೇ ಪ್ರಮುಖವಾಗಿವೆ ಮತ್ತು ಹೆಚ್ಚಿನ ಸಂಖ್ಯೆಯಲ್ಲಿವೆ. ಈ ಸಾಲಿನಲ್ಲಿ ಬಾದಾಮಿ,

ಉಚ್ಚಂಗಿದುರ್ಗ, ಬಳ್ಳಾರಿ, ಯಾದಗಿರಿ, ಚಿತ್ರದುರ್ಗ, ಮೊಳಕಾಲ್ಮೂರು, ಮಧುಗಿರಿ ಮುಂತಾದವು ಸೇರುತ್ತವೆ. ಶ್ರೀರಂಗಪಟ್ಟಣ ಕೋಟೆ ಮತ್ತು ಆನೆಗುಂದಿ ಜಲದುರ್ಗವಾಗಿದೆ. ಗುಲ್ಬರ್ಗ ಜಿಲ್ಲೆಯ ವನದುರ್ಗ ಎಂಬ ಹೆಸರನ್ನು ಹೊಂದಿರುವ ಕೋಟೆಯ ಸುತ್ತಲಿನ ಕಾಡು ಈಗ ಉಳಿದಿಲ್ಲ ಅದೇ ರೀತಿ ಇನ್ನು ಅನೇಕ ಕೋಟೆಗಳ ಸುತ್ತಲೂ ಹಿಂದೆ ಕಾಡು ಇದ್ದಿರಬಹುದು.[10] ಆಯಾಕಟ್ಟಿನ ಜಾಗದಲ್ಲಿ ನೆಲದ ಮೇಲೆ ನಿರ್ಮಿಸಿರುವ ಕೋಟೆಗಳೆ ಸ್ಥಳದುರ್ಗ ಕೋಟೆಗಳು ಇವುಗಳಗೆ ಬೆಂಗಳೂರು, ದೇವನಹಳ್ಳಿ, ಬಿಜಾಪುರ ಮತ್ತು ಮಾಗಡಿ ಕೋಟೆಗಳನ್ನು ಉದಾಹರಿಸಬಹುದು.

ಸಾಮಾನ್ಯವಾಗಿ ಕೋಟೆಗಳು ಪಾಳೆಗಾರರ ಕೇಂದ್ರಗಳಾಗಿದ್ದವು. ವಿಜಯನಗರ ಪೂರ್ವದಲ್ಲಿ ಕೋಟೆಯಲ್ಲಿ ಮದ್ದಿನ ಮನೆಗಳು, ಇಳಿಜಾರಿನ ಕುಂಬಿ ಗೋಡೆಗಳು ಪಹರೆ ಗೋಡೆಗಳು ಮುಂತಾದವು ಇರುತ್ತಿರಲಿಲ್ಲ. ಆದರೆ ಈ ಎಲ್ಲಾ ಹೊಸ ರಕ್ಷಣಾ ವ್ಯವಸ್ಥೆಗಳು ಯುದ್ಧದಲ್ಲಿ ಮದ್ದುಗುಂಡುಗಳ ಬಳಕೆ ಬಂದ ನಂತರ ಕೈಗೊಂಡ ಕ್ರಮಗಳನ್ನು ಸೂಚಿಸುತ್ತವೆ. ಕ್ರಿ.ಶ.16ನೇ ಶತಮಾನದ ಕಾಲಾವದಿಯಲ್ಲಿ ದಕ್ಷಿಣ ಕರ್ನಾಟಕದ ಕೋಟೆಗಳಲ್ಲಿ ಫಿರಂಗಿಗಳನ್ನು ಬಳಕೆಗೆ ತರಲಾಯಿತು. ಉದ್ದನೆಯ ತೋಪುಗಳನ್ನು ಬಳಸಲು ವರ್ತುಲಾಕಾರದ ಕೊತ್ತಲಗಳು ತುಂಬಾ ಅನುಕೂಲಕರವಾಗಿದ್ದವು. ಈ ಕಾರಣಗಳಿಂದಾಗಿ ಕೆಲವು ಕಡೆ ವರ್ತುಲಾಕಾರದ ಕೋಟೆಗಳನ್ನು ಹೊಸದಾಗಿ ನಿರ್ಮಿಸಿದ ಉದಾಹರಣೆಗಳಿವೆ. ಈಗಾಗಲೇ ಅಸ್ಥಿತ್ವದಲ್ಲಿದ್ದ ಕೋಟೆಗಳನ್ನು ಹಾಗೆ ಉಳಿಸಿಕೊಂಡು ಕೆಲವು ಮಾರ್ಪಾಡುಗಳನ್ನು ಮಾಡಲಾಗಿದೆ. ಇನ್ನೂ ಕೆಲವು ಕಡೆಗಳಲ್ಲಿ ಚೌಕಕಾಕಾರದ ಕೊತ್ತಲಗಳನ್ನು ವರ್ತುಲಾಕಾರದ ಕೋಟೆಗಳನ್ನು ಮಾರ್ಪಾಡಿಸಲಾಯಿತು.ಈ ರೀತಿಯ ಬದಲಾವಣೆಗಳು ನೆಲದುರ್ಗದ ಕೋಟೆಗಳಲ್ಲಿ ಕಂಡುಬರುತ್ತದೆ.[11]

ಸಾಮಾನ್ಯವಾಗಿ ಕೋಟೆಗಳನ್ನು ದೊಡ್ಡಗಾತ್ರದ ಗ್ರಾನೈಟ್ ಕಲ್ಲುಗಳು, ಕಚ್ಚುಗಾರೆ ಮತ್ತು ಗಾರೆ, ಸುಟ್ಟ ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ.16 ಮತ್ತು 17ನೇ ಶತಮಾನದಲ್ಲಿ, ವಿಜಯನಗರೋತ್ತರ ಕಾಲದಲ್ಲಿ ಒಳನಾಡಿನ ಪ್ರದೇಶದಲ್ಲಿ ವ್ಯಾಪಾರ ಮತ್ತು ವಾಣಿಜ್ಯಗಳ ಅಭಿವೃದ್ಧಿ, ಸರಕು ಸಾಗಾಣಿಕೆಗೆ ಭದ್ರತೆ, ನಾಗರೀಕರ ಸಂರಕ್ಷಣೆ ಮುಂತಾದ ಕಾರಣಗಳಿಂದಾಗಿ ಆಯಾಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ನಿರ್ಮಿಸಲಾಗುತ್ತಿತ್ತು. ಕೋಟೆಗಳಲ್ಲಿ ಸೈನ್ಯವನ್ನು ಜಮಾವಣೆ ಮಾಡಿ ಕೋಟೆಯ ಮೂಲಕ ಸುತ್ತಮುತ್ತಲಿನ ಪ್ರದೇಶಗಳನ್ನು ನಿಯಂತ್ರಿಸಲಾಗುತ್ತಿತ್ತು. ದೇವನಹಳ್ಳಿ ತಾಲೂಕಿನಲ್ಲಿ ವಿಜಯನಗರ ಮತ್ತು ಆವತಿ ನಾಡಪ್ರಭುಗಳ ಹಾಗೂ ಪಾಳೆಗಾರರ ಕಾಲದಲ್ಲಿ ಹಲವಾರು ಕೋಟೆಗಳು ನಿರ್ಮಾಣವಾದವು. ಅವುಗಳಲ್ಲಿ ದೇವನಹಳ್ಳಿ, ಆವತಿ, ಕುಂದಾಣಕೋಟೆಗಳು ಪ್ರಮುಖವಾದವು. ದೇವನಹಳ್ಳಿ ತಾಲೂಕಿನ ಕೋಟೆಗಳು ಸೂಕ್ತ ರಕ್ಷಣೆ ಕೊರತೆ ಮತ್ತು ಸಾರ್ವಜನಿಕರ ನಿರ್ಲಕ್ಷ್ಯಕ್ಕೊಳಗಾಗಿ, ಕೋಟೆಗೆ

ಬಳಸಲ್ಪಟ್ಟ ಕಲ್ಲುಗಳು ಕಟ್ಟಡಗಳಿಗೆ ಬಳಕೆಯಾಗುತ್ತಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದ ಮತ್ತು ಅಳಿದುಳಿದ ಕೋಟೆಗಳ ಅವಶೇಷಗಳ ವಿವರವನ್ನು ಇಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ದೇವನಹಳ್ಳಿ ಕೋಟೆ:**

ದೇವನಹಳ್ಳಿ ತಾಲೂಕಿನ ಕೆಲವು ಪ್ರದೇಶಗಳು ದಕ್ಷಿಣ ಪಿನಾಕಿನಿ ನದಿಕಣಿವೆಯಲ್ಲಿದ್ದು, ದೇವನಹಳ್ಳಿಯು ಸುತ್ತಮುತ್ತಲಿನ ಪ್ರದೇಶಗಳಿಗೆ ಮಧ್ಯಭಾಗದಲ್ಲಿದ್ದು ಅದು ಸುತ್ತಮುತ್ತಲಿನ ಪ್ರದೇಶವನ್ನು ನಿಯಂತ್ರಿಸುವಲ್ಲಿ ಪ್ರಮುಖ ಪಾತ್ರವಹಿಸುತಿತ್ತು. ದೇವನಹಳ್ಳಿ ಸುತ್ತಮುತ್ತಲಿನ ಪ್ರದೇಶಗಳನ್ನು ಪಾಳೆಗಾರರು 16ನೇ ಶತಮಾನದಿಂದ 18ನೇ ಶತಮಾನದ ಮಧ್ಯಭಾಗದವರೆಗೆ ಆಳ್ವಿಕೆ ನಡೆಸಿದರು. ಆವತಿ ನಾಡಪ್ರಭುಗಳು ದೇವನಹಳ್ಳಿಯಲ್ಲಿ ಕೋಟೆ ನಿರ್ಮಿಸಿ ಜನರು ಮತ್ತು ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ರಕ್ಷಣೆಯನ್ನು ಒದಗಿಸಿದರು.

**ಹಿನ್ನೆಲೆ:**

ದೇವನಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲೂಕು ಕೇಂದ್ರ. ಇದು ಬೆಂಗಳೂರಿನಿಂದ ಈಶಾನ್ಯಕ್ಕೆ ಸುಮಾರು 35 ಕಿ.ಮೀ ದೂರದಲ್ಲಿದ್ದು ಟಿಪ್ಪುವಿನ ಜನ್ಮಸ್ಥಳವಾದ ಈ ಊರಿನಲ್ಲಿ ಸುಸ್ಥಿತಿಯಲ್ಲಿರುವ ಭದ್ರವಾದ ವಿಶಾಲವಾದ ಹಾಗೂ ಪ್ರಾಚೀನ ಕೋಟೆ ಇದೆ.ದೇವನಹಳ್ಳಿ ಕೋಟೆಯನ್ನು ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಆವತಿಯ ಸಾಮಂತನಾಗಿದ್ದ ಮಲ್ಲಭೈರೇಗೌಡ ಎಂಬುವನು ಕ್ರಿ.ಶ.1501ರಲ್ಲಿ ದೇವನದೊಡ್ಡಿಯ (ದೇವನಹಳ್ಳಿಯ ಮೂಲಹೆಸರು) ಮುಖ್ಯಸ್ಥನಾದ ದೇವ ಎಂಬುವನ ಅನುಮತಿಯನ್ನು ಪಡೆದು ಇಲ್ಲಿ ಕೋಟೆಯನ್ನು ಕಟ್ಟಿಸಿದನು. ತರುವಾಯ ಕ್ರಿ.ಶ.1747ರಲ್ಲಿ ಕೋಟೆಯು ಮೈಸೂರಿನ ಒಡೆಯರ ಅಧೀನಕ್ಕೆ ಬಂದಿತು. ಇದನ್ನು ಮರಾಠರು ಹಲವಾರು ಬಾರಿ ಗೆದ್ದುಕೊಂಡರು.ಈ ಕೋಟೆಯನ್ನು ಕ್ರಿ.ಶ.1749ರಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯನ ಸೇನೆಯು ವಶಪಡಿಸಿಕೊಂಡಿತು. ಕೋಟೆಯ ಆಕ್ರಮಣದಲ್ಲಿ ಹೈದರ್ ಆಲಿಯ ಯುದ್ಧ ಕೌಶಲ್ಯವು ಬೆಳಕಿಗೆ ಬಂದಿತು.ನಂತರ ಕ್ರಿ.ಶ.1791ರಲ್ಲಿ ಲಾರ್ಡ್‌ಕಾರನ್ ವಾಲೀಸ್‌ನ ನೇತೃತ್ವದ ಸೇನೆಯು ಇದನ್ನು ವಶಪಡಿಸಿಕೊಂಡಿತು ನಂತರ ಈ ಕೋಟೆಯು ಮೈಸೂರು ಒಡೆಯರ್‌ರವರ ಸುಬರ್ದಿಗೆ ಒಳಪಟ್ಟಿತು.ಈಗಿರುವ ಕೋಟೆಯು ಹೈದರ್ ಆಲಿ ಮತ್ತು ಟಿಪ್ಪುವಿಗೆ ಸೇರಿದ್ದು ಎಂದು ಹೇಳಲಾಗುತ್ತದೆ. ಇದು ಟಿಪ್ಪುವಿನ ಅಚ್ಚುಮೆಚ್ಚಿನ ಬೇಟೆಯಾಡುವ ಪ್ರದೇಶವು ಮತ್ತುವಿಹಾರ ತಾಣವು ಹಾಗೂ ಅವನ ಜನ್ಮ ಸ್ಥಳವು ಆಗಿತ್ತು.ಸ್ಥೂಲವಾಗಿ ಅಂಡಾಕಾರವಾಗಿ

ಪೂರ್ವಾಭಿಮುಖವಾಗಿರುವ ಈ ಕೋಟೆಯು ನಯಗೊಳಿಸಿರುವ ಕಲ್ಲುಗಳ ಹೊರ ಹೊದಿಕೆಯನ್ನು ಹೊಂದಿದ್ದು 13 ಅರ್ಧವೃತ್ತಾಕಾರದ ಬುರುಜುಗಳನ್ನು ಹೊಂದಿದೆ. ಕೋಟೆಯ ಮೇಲೆ ಕೆಲವು ಕಡೆ ಕೈಪಿಡಿ ಗೋಡೆಯನ್ನು ಅಳವಡಿಸಲಾಗಿದೆ. ಕೋಟೆಗೆ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕಚ್ಚು ಗಾರೆಯಿಂದ ನಿರ್ಮಿಸಿರುವ ಅಲಂಕೃತವಾದ ದ್ವಾರಗಳಿವೆ ಬುರುಜುಗಳ ಮೇಲೆ ಫಿರಂಗಿಗಳನ್ನು ಇಡಲು ಇಟ್ಟಿಗೆ ಮತ್ತು ಗಾರೆಗಳ ದಿಂಡನ್ನು ಭದ್ರವಾಗಿರುವಂತೆ ನಿರ್ಮಿಸಲಾಗಿದೆ.[12] (ಚಿ.ಸಂ.134)

ಹೈದರಾಲಿಯು ದೇವನಹಳ್ಳಿ ಕೋಟೆಯನ್ನು ಪುನರ್ ನಿರ್ಮಿಸಲು ಪ್ರಾರಂಭಿಸಿದನು. ಇದು ಗ್ರಾನೈಟ್ ಕಲ್ಲುಗಳು, ಕಚ್ಚುಗಾರೆಯಿಂದ ನಿರ್ಮಿಸಲ್ಪಟ್ಟಿದ್ದು, ಅಂಡಾಕಾರದ ಮತ್ತು ಕೊತ್ತಲಗಳನ್ನು ಒಳಗೊಂಡಿತ್ತು. ಕ್ರಿ.ಶ.1791ರಲ್ಲಿ ಲಾರ್ಡ್ ಕಾರ್ನ್‌ವಾಲೀಸ್‌ನ ವಶಪಡಿಸಿಕೊಳ್ಳುವವರೆಗೂ ಪೂರ್ಣಗೊಂಡಿರಲಿಲ್ಲ. ಕೋಟೆ ರಚನೆ ಸಿದ್ಧವಾದ ನಂತರ ಆಕ್ರಮಣ ಸಂದರ್ಭದಲ್ಲಿ ಆಕ್ರಮಣಕಾರರು ಯಾವುದೇ ರೀತಿಯಲ್ಲಿ ಆಶ್ರಯ ಪಡೆಯದಂತೆ ತಡೆಯಲು ಕೋಟೆ ಸುತ್ತಲು ದಕ್ಷಿಣ ಮತ್ತು ಪೂರ್ವ ಭಾಗದ ಪೇಟೆಗಳನ್ನು ನೆಲಸಮಗೊಳಿಸಲಾಯಿತು.[13] ದೇವನಹಳ್ಳಿ ಕೋಟೆಯು ರಕ್ಷಣ ವಾಸ್ತುಶಿಲ್ಪಕ್ಕೆ ಸ್ಪಷ್ಟ ಉದಾಹರಣೆಯಾಗಿದ್ದು, ಈ ಕೋಟೆಯು ಹೈದರ್ ಆಲಿ ಕಾಲದ ಬೆಂಗಳೂರಿನ ಕೆ.ಆರ್.ಮಾರುಕಟ್ಟೆ ಬಳಿಯಿರುವ ಕೋಟೆಯನ್ನು ಹೋಲುತ್ತದೆ.

ದೇವನಹಳ್ಳಿ ಕೋಟೆಯು ಸಹ ಒಂದು ನೆಲದುರ್ಗ/ಸ್ಥಳದುರ್ಗ ಕೋಟೆಯಾಗಿದೆ. ಕೋಟೆಯೊಳಗಿನ ಶ್ರೀ ವೇಣುಗೋಪಾಲ ದೇವಾಲಯ, ಕೋಟೆ-ಕೊತ್ತಳಗಳ ರಚನೆ ಮುಂತಾದವುಗಳಿಂದ ಕೋಟೆಯ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಕೋಟೆ ಪುನರ್ ನಿರ್ಮಿಸುವ ಸಂದರ್ಭದಲ್ಲಿ ಕೊತ್ತಳಗಳನ್ನು ವರ್ತುಲಾಕಾರಕ್ಕೆ ಮಾರ್ಪಡಿಸಲಾಗಿದೆ ಎಂಬ ಅಂಶವು ಸೂಕ್ಷ್ಮವಾಗಿ ಗೋಚರಿಸುತ್ತದೆ. ಈ ಎಲ್ಲಾ ಹೊಸ ಲಕ್ಷಣ ವ್ಯವಸ್ಥೆಗಳು ಹೈದರ್ ಆಲಿ ಮತ್ತು ಟಿಪ್ಪುವಿನ ಕಾಲದಲ್ಲಿ ನಿರ್ಮಾಣವಾದವು. ಕೋಟೆಯ ಒಳಭಾಗದಲ್ಲಿ ಎರಡು ಪಕ್ಕದ ಪಥಗಳಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಫಿರಂಗಿ ಗಾಡಿ, ಮದ್ದುಗುಂಡುಗಳು, ಇತರೆ ಶಸ್ತ್ರಾಗಳು, ಸೈನ್ಯ, ನೀರು, ಆಹಾರವನ್ನು ಸಾಗಿಸಬಹುದಾಗಿದೆ. ಗೋಡೆಗಳಲ್ಲಿ ಬಂದೂಕುಗಳನ್ನು ಇಡಲು ವೈರಿಗಳ ಚಲನವಲನಗಳನ್ನು ಗಮನಿಸಲು ಮತ್ತು ಅವರ ಮೇಲೆ ಬಂದೂಕುಗಳಿಂದ ಗುಂಡಿನ ದಾಳಿ ನಡೆಸಲು ಕುಂಬೆ ಕಿಂಡಿಗಳನ್ನು ನಿರ್ಮಿಸಲಾಗಿದೆ. ಫಿರಂಗಿ ಕಿಂಡಿಗಳ ಪಾಯಿಂಟ್ ಪಕ್ಕದಲ್ಲಿ ರಕ್ಷಣೆಗೋಸ್ಕರ ಇಟ್ಟಿಗೆ ಮತ್ತು ಗಾರೆಯ ದಿಂಡುಗಳನ್ನು (ಕೈಪಿಡಿ ಗೋಡೆ) ನಿರ್ಮಿಸಲಾಗಿದೆ.[14]

**ಕೋಟೆಯ ವಿಸ್ತೀರ್ಣ**: ಕ್ಷೇತ್ರಕಾರ್ಯದಲ್ಲಿ ಕಂಡುಬಂದಂತೆ ಕೋಟೆಯ ಉದ್ದ ಸುಮಾರು 350 ಮೀ. ಅಗಲ ಸುಮಾರು 185 ಮೀ.[15]ಮತ್ತು ಎತ್ತರ ಸುಮಾರು 30 ರಿಂದ 40 ಅಡಿಗಳಾಗಿರುತ್ತದೆ. ಕೋಟೆಯ ಗೋಡೆಗಳ ದಪ್ಪ ಒಂದೇ ತರನಾಗಿಲ್ಲ ಆದರೂ ಸುಮಾರು 3 ಮೀ. ಹೊಂದಿವೆ.

**ಕೋಟೆಯ ಚಕ್ಕುಬಂದಿ**: ದೇವನಹಳ್ಳಿ ಕೋಟೆಯ ಮೇರೆಗಳೆಂದರೆ, ಪೂರ್ವಕ್ಕೆ ಊರು, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಹೊಸದಾಗಿ ನಿರ್ಮಿಸಿರುವ ರಸ್ತೆ ಮತ್ತು ಚಿಕ್ಕ ಕೆರೆ ದಕ್ಷಿಣಕ್ಕೆ ಜಮೀನುಗಳು. ಇದು ಕೇಂದ್ರ ಪುರಾತತ್ವ ಇಲಾಖೆಯವರ ಸಂರಕ್ಷಿತ ಸ್ಮಾರಕವಾಗಿದ್ದು ನೋಡಲು ಸುಂದರವಾಗಿ ಕಂಡುಬಂದಿದ್ದು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳನ್ನು ಸಹ ಆಕರ್ಷಿಸುತ್ತಿದೆ.

**ಕೋಟೆಯ ರಚನೆ**:

ಕೋಟೆಯ ವರ್ತುಲಾಕಾರದ ಕೊತ್ತಳಗಳು (ಬುರುಜು) ಮತ್ತು ಕಲ್ಲುಗಳ ಮಧ್ಯದಲ್ಲಿ ಬಳಸಲಾದ ಸುಣ್ಣದ ಗಾರೆಯನ್ನು ಗಮನಿಸಿದಾಗ ಇದು ಹೈದರ್ ಆಲಿ ಕಟ್ಟಿಸಿದ ಕೋಟೆಯೆಂದು ತಿಳಿಯುತ್ತದೆ. ದೀರ್ಘ ವೃತ್ತಾಕಾರದ ಕೋಟೆಗಳಲ್ಲಿ 13 ವೃತ್ತಾಕಾರದ ಕೊತ್ತಳಗಳು (ಬುರುಜುಗಳು) ಮತ್ತು 2 ಚೌಕಕಾರದ ಬತ್ತೇರಿಗಳಿವೆ. ಪಶ್ಚಿಮಕ್ಕೆ ದೊಡ್ಡಬಾಗಿಲು ಮತ್ತು ಅದರ ಪಕ್ಕದಲ್ಲಿ ಚಿಕ್ಕದಾದ ದಿಡ್ಡಿಬಾಗಿಲು (ಚಿಕ್ಕಬಾಗಿಲು) ಇದೆ. ಕೋಟೆಯ ಪೂರ್ವ ದಿಕ್ಕಿನ ಭಾಗ ಬಿದ್ದುಹೋಗಿದೆ.ಅಲ್ಲಿ ಅಗಲವಾದ ರಸ್ತೆಯು ನಿರ್ಮಾಣವಾಗಿದೆ. ಇಲ್ಲಿಯು ಸಹ ಒಂದು ಬಾಗಿಲು ಇತ್ತೆಂದು ತೋರುತ್ತದೆ. ಕೋಟೆಯೊಳಗಿನ ಪ್ರದೇಶವನ್ನೆಲ್ಲಾ ಊರು ಆವರಿಸಿದ್ದು ಕೋಟೆಯ ಹೊರಮೈಗೆ ಮಧ್ಯಮ ಗಾತ್ರದ ಕಲ್ಲುಗಳನ್ನು ಬಳಸಲಾಗಿದೆ. ಕಲ್ಲುಗಳ ಮಧ್ಯದಲ್ಲಿ ಅಗಲವಾದ ಸಂದಿಗಳು ಉಂಟಾಗದಂತೆ ಕಲ್ಲುಗಳ ಅಂಚುಗಳನ್ನು ಕೆತ್ತಿ ಜೋಡಿಸಲಾಗಿದ್ದು ಸಂದಿಗಳಲ್ಲಿ ಸುಣ್ಣದ ಗಾರೆಯನ್ನು ಬಳಸಲಾಗಿದೆ. ಗ್ರಾನೈಟ್ ಶಿಲೆಯ ಈ ಕಲ್ಲುಗಳನ್ನು ಬೇಕಾದ ಅಳತೆಗೆ ಹೆಚ್ಚಿನ ಭಾಗಗಳಲ್ಲಿ ಚೌಕಾಕಾರವಾಗಿ ಕತ್ತರಿಸಿ ಸ್ವಲ್ಪಮಟ್ಟಿಗೆ ನಯಗೊಳಿಸಿ ಬಳಸಲಾಗಿದೆ.[16]

ದೇವನಹಳ್ಳಿ ಸುತ್ತಮುತ್ತಲು ಹಲವಾರು ಕಡೆ ಬಂಡೆಗಳಿದ್ದು, ಇಲ್ಲಿಂದ ಗ್ರಾನೈಟ್ ಕಲ್ಲುಗಳನ್ನು ತರಿಸಿ ಕೋಟೆಯ ನಿರ್ಮಾಣದಲ್ಲಿ ಬಳಸಿರುವಂತೆ ಕಂಡುಬರುತ್ತದೆ. ವಿಜಯನಗರ ಕಾಲದ ಹಂಪಿ ಆನೆಗುಂದಿ ಕೋಟೆಗಳಲ್ಲಿ ಬಳಸಿರುವ ಕಲ್ಲುಗಳಂತೆಯೇ ಇಲ್ಲಿಯು ಸಹ ಬಿಳಿ ಗ್ರಾನೈಟ್ ಕಲ್ಲುಗಳನ್ನು ಹೆಚ್ಚುಕಡಿಮೆ ಒಂದೇ ಅಳತೆಯಲ್ಲಿ ಕತ್ತರಿಸಿ ಒಂದರ ಮೇಲೊಂದು ಜೋಡಿಸಿದಂತೆ ಕಟ್ಟಲಾಗಿದೆ. ಉತ್ತರ ಭಾಗದ ಕೋಟೆಯ ಒಳಮೈ ಮೂರು ಹಂತದಲ್ಲಿ ಮೇಲೇರುತ್ತದೆ. ದಕ್ಷಿಣ

ಭಾಗದ ಕೋಟೆಯ ಒಳಮೈ ಎರಡು ಹಂತದಲ್ಲಿ ಮೇಲೇರುತ್ತದೆ. ಕೋಟೆಯ ಮಧ್ಯದಲ್ಲಿ ಮಣ್ಣನ್ನು ತುಂಬಿ ಅದು ಗಟ್ಟಿಯಾಗಿದ್ದು ಚೆನ್ನಾಗಿ ಭಾರವಾದ ಕಬ್ಬಿಣದ ವಸ್ತುವಿನಿಂದ ಸರಿಯಾಗಿ ಕುಟ್ಟಿ ಮತ್ತು ತಟ್ಟಿ ಕೋಟೆಯ ಗೋಡೆಗಳು ಭದ್ರವಾಗಿ ನಿಲ್ಲುವಂತೆ ರಚಿಸಲಾಗಿದೆ. ಈಗ ಅದರ ಮೇಲೆಲ್ಲ ಹುಲ್ಲು ಬೆಳೆದಿದ್ದು ಈಗ ಇನ್ನು ಗಟ್ಟಿಯಾಗಿದ್ದು ಇನ್ನೂ ಹೆಚ್ಚು ಕಾಲ ಉಳಿದುಕೊಳ್ಳುವಂತಹ ಸ್ಥಿತಿಯಲ್ಲಿದೆ ಮತ್ತು ಪಕ್ಕದಲ್ಲಿ ರಸ್ತೆಯ ಮಾದರಿಯ ಪಥವನ್ನು ನಿರ್ಮಿಸಲಾಗಿದೆ. ಕೋಟೆಯ ಮೇಲೆ ತೆಳುವಾದ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಅಗಲವಾದ ಕುಂಬೆ (ಕೈಪಿಡಿ ಗೋಡೆ) ಇದ್ದು, ಎತ್ತರವಾದ ಕುಂಬೆಯ ಮೇಲ್ಭಾಗ ಇಳಿಜಾರಾಗಿದ್ದು, ಹೊರಗಿನಿಂದ ಬಂದ ಗುಂಡುಗಳನ್ನು ಹಿಂದಕ್ಕೆ ಬೀಳುವಂತೆ ಮಾಡುವುದಕ್ಕಾಗಿ ಹೊರಭಾಗವನ್ನು ಇಳಿಜಾರಾಗಿ ಮಾಡಲಾಗಿದೆ. ಕೋಟೆಯ ಕೈಪಿಡಿ ಗೋಡೆಯಲ್ಲಿ ಬಂದೂಕುಗಳನ್ನು ತೂರಿಸಲು ಕಿಂಡಿಗಳವೆ. ಕೆಲವು ಕಿಂಡಿಗಳು ಕಮಾನಿನ ಆಕಾರದಲ್ಲಿದ್ದು ಕಮಾನಿನ ಸುತ್ತ ಗಾರೆಯ ಅಲಂಕಾರಗಳವೆ. ಒಳಭಾಗದಲ್ಲಿರುವ ಒಂದೇ ಕಿಂಡಿ ಹೊರಭಾಗದಲ್ಲಿ 3, 4, 8 ಕಿಂಡಿಗಳಾಗಿದ್ದು ಒಳಭಾಗದಲ್ಲಿನ ಕಿಂಡಿಯಿಂದ ಹೊರಭಾಗದ ಬೇರೆ ಬೇರೆ ದಿಕ್ಕುಗಳಿಗೆ ಗುಂಡು ಹಾರಿಸಲು ಅನುಕೂಲ ಮಾಡಲಾಗಿದೆ. ಕೋಟೆಗೆ ಬಳಸಿದ ಇಟ್ಟಿಗೆ ಮತ್ತು ಗಾರೆ ಉತ್ತಮ ಗುಣಮಟ್ಟದ್ದಾಗಿ ರುವುದರಿಂದ ಗಾಳಿ ಮಳೆ ಬಿಸಿಲಿಗೆ ನಲುಗದೆ ನಿರ್ಮಿಸಿದ ಹೊಸದಾಗಿ ಕೋಟೆಯಂತೆಯ ಉಳಿದು ಕೊಂಡಿದೆ.[17]

ಕೋಟೆ ನೆಲಮಾಳಿಗೆಯಲ್ಲಿ ಕೋಣೆಗಳು ಮತ್ತು ಬುರುಜುಗಳಲ್ಲಿ ಚಿಕ್ಕದಾದ ಕೋಣೆಗಳವೆ ಕೋಟೆ ಗೋಡೆಗಳಲ್ಲಿ ಬಂದೂಕುಗಳನ್ನು ಇರಿಸಲು ಬಂದೂಕು ಕಿಂಡಿಗಳು ಮತ್ತು ಫಿರಂಗಿ ಕಿಂಡಿಗಳವೆ. ಪಿರಂಗಿ ಕಿಂಡಿಗಳು ಇಳಿಜಾರಾಗಿದ್ದು ಫಿರಂಗಿಗಳನ್ನು ರೊಟೇಟ್ ಮಾಡಬಹುದು. ಕೋಟೆಯನ್ನು ಉತ್ತರ ಮತ್ತು ದಕ್ಷಿಣ ಭಾಗಗಳೆಂದು ಗುರುತಿಸಬಹುದು. ಕೋಟೆಯ ಕುಂಬೆಯನ್ನು (ಕೈಪಿಡಿ ಗೋಡೆ) ತೆಳು ಮಾದರಿಯ ಸುಟ್ಟ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ನಿರ್ಮಿಸಲಾಗಿದ್ದು ಕೈಪಿಡಿ ಗೋಡೆಯನ್ನು ಗಾರೆಯಿಂದ ಲೇಪನಮಾಡಲಾಗಿದೆ. (ಚಿ.ಸಂ. 135) ಕೋಟೆಯ ದ್ವಾರಗಳನ್ನು ಪೂರ್ವ ಮತ್ತು ಪಶ್ಚಿಮ ದ್ವಾರಗಳೆಂದು ಗುರುತಿಸಬಹುದು. ಪಶ್ಚಿಮ ದ್ವಾರವು ಸುಸ್ಥಿತಿಯಲ್ಲಿದ್ದು ಆದರೆ ಪೂರ್ವ ದ್ವಾರವು ಕಂಡುಬರುವುದಿಲ್ಲ.[18]

**ಫ್ರೆಂಚ್ ಕೋಟೆಗಳ ಪ್ರಭಾವ ಮತ್ತು ತಂತ್ರಜ್ಞಾನ:** ಫ್ರೆಂಚರು ದಕ್ಷಿಣ ಭಾರತದ ಕರಾವಳಿ ತೀರದಲ್ಲಿ ಕೆಲವು ಕೋಟೆಗಳನ್ನು ನಿರ್ಮಿಸಿದ್ದಾರೆ. ಪಾಂಡಿಚೇರಿ ಫ್ರೆಂಚರು ನಿರ್ಮಿಸಿದ ಒಂದು ಉತ್ತಮ ನಗರವೆನಿಸಿದೆ. ಅದರಂತೆ ಜಿಂಜಿ ಮತ್ತು ತಿರುಚನಾಪಳ್ಳಿ ಕೋಟೆಗಳನ್ನು ಫ್ರೆಂಚರು ವಶಪಡಿಸಿಕೊಂಡು ಕೆಲವು ಕೊತ್ತಳ ಹಾಗೂ ದ್ವಾರಗಳಿಂದ ವಿಸ್ತರಿಸಿದ್ದಾರೆ. ಇವುಗಳಲ್ಲದೆ ಫ್ರೆಂಚರ

ಅನೇಕ ತಜ್ಞರು ದಕ್ಷಿಣ ಭಾರತದ ಸ್ಥಳೀಯ ಅರಸರಿಗೆ ಕೋಟೆಗಳನ್ನು ಸುಸಜ್ಜಿತಗೊಳಿಸಲು ನೆರವು ನೀಡಿದರು. ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದ ಟಿಪ್ಪು ಸುಲ್ತಾನನ ನೆರವಿಗೆ ಬಂದಿದ್ದ ಫ್ರೆಂಚರು ಶ್ರೀರಂಗಪಟ್ಟಣ, ದೇವನಹಳ್ಳಿ, ದಿಂಡಿಗಲ್ ಮುಂತಾದ ಕೋಟೆಗಳಲ್ಲಿ ಅನೇಕ ಮಾರ್ಪಾಡುಗಳನ್ನು ಕೈಗೊಂಡರು. ಫ್ರೆಂಚರು ನಿರ್ಮಿಸಿದ ಕೋಟೆಗಳಲ್ಲಿ ಬತ್ತೇರಿಗಳ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಫಿರಂಗಿಗಳನ್ನು ಕೊತ್ತಲಗಳಲ್ಲಿ ಅಳವಡಿಸಿ ವಿವಿಧ ದಿಕ್ಕುಗಳಲ್ಲಿ ಅದನ್ನು ಬಳಸುವ ಅನುಕೂಲಕ್ಕಾಗಿ ಕೊತ್ತಲಗಳ ಕುಂಬಿಯಲ್ಲಿ ಆಯಾತಾಕಾರದ ಕಿಂಡಿಗಳನ್ನು ಮಾಡಲಾಗಿದೆ. ಹೊರಗಿನಿಂದ ಬರುವ ಗುಂಡುಗಳು ಕೋಟೆ ಗೋಡೆ ಮೇಲೆ ನಿಲ್ಲದಂತೆ ಕೋಟೆಯ ಕುಂಬೆಯನ್ನು ಇಳಿಜಾರಾಗಿ ನಿರ್ಮಿಸಲಾಗಿದೆ, ಮದ್ದುಗುಂಡುಗಳನ್ನು ಸಂಗ್ರಹಿಸಲು ಅನೇಕ ಮದ್ದಿನ ಮನೆಗಳನ್ನು ನೆಲ ಮಾಳಿಗೆಯಲ್ಲಿ ನಿರ್ಮಿಸಲಾಗಿದೆ. ನೆಲ ಮಾಳಿಗೆಯ ಮನೆಗಳನ್ನು ದೇವನಹಳ್ಳಿ ಶ್ರೀರಂಗಪಟ್ಟಣ ಮತ್ತು ಬೆಂಗಳೂರು ಕೋಟೆಗಳಲ್ಲಿ ಕಾಣಬಹುದು.[19]

**ಕೋಟೆಯ ಒಳಾಂಗಣ:** ಪಶ್ಚಿಮದ್ವಾರದಿಂದ ಪೂರ್ವದ್ವಾರದವರೆಗೂ ರಸ್ತೆಯನ್ನು ಮಾಡಲಾಗಿದ್ದು ಕೋಟೆಯ ಒಳಗಡೆ ಶ್ರೀವೇಣುಗೋಪಾಲಸ್ವಾಮಿ, ಸಿದ್ದೇಶ್ವರಸ್ವಾಮಿ, ನಂಜುಂಡೇಶ್ವರ ನೀರುಬಾಗಿಲು ಆಂಜನೇಯ ಮುಂತಾದ ದೇವಾಲಯಗಳಿವೆ. ಇವುಗಳಲ್ಲಿ ಕೋಟೆಯ ಪಶ್ಚಿಮದ ಅಂಚಿನಲ್ಲಿರುವ ಶ್ರೀವೇಣುಗೋಪಾಲಸ್ವಾಮಿ ದೇವಾಲಯವು ಇಲ್ಲಿಯ ಮುಖ್ಯ ಕೇಂದ್ರ ಸ್ಥಾನವಾಗಿತ್ತು. ಕೋಟೆಯ ಬಹುತೇಕ ಚಟುವಟಿಕೆಗಳು ಮತ್ತು ಆಡಳಿತಾತ್ಮಕ ನಿರ್ಣಯಗಳು ಈ ದೇವಾಲಯದ ಸನ್ನಿಧಿಯಲ್ಲಿ ಅಥವಾ ಮುಂಭಾಗದಲ್ಲಿ ನಡೆಯುತ್ತಿದ್ದವೆಂದು ಕಂಡುಬರುತ್ತದೆ. ವೇಣುಗೋಪಾಲ ಸ್ವಾಮಿ ದೇವಾಲಯದ ಬಲಭಾಗದಲ್ಲಿ ದೇವಾಲಯದ ಅರ್ಚಕರ ಗೃಹಗಳಿವೆ ಮತ್ತು ದೇವಾಲಯದ ಬಲಬದಿ ಸೈನಿಕರ ಜಮಾವಣೆಯ ಹಾಗೂ ಅವರ ವಾಸದ ನೆಲೆಯಾಗಿತ್ತು. ಸೈನಿಕರ ಮತ್ತು ಅಧಿಕಾರಿಗಳ ನೀರಿನ ವ್ಯವಸ್ಥೆಗೆ ನಿರ್ಮಿಸಿದ್ದ ಬಾವಿಗಳ ವಾಸದ ಮನೆಗಳ ಅವಶೇಷಗಳು ಕಂಡುಬರುತ್ತವೆ. ಕೋಟೆಯ ಒಳಗಡೆ ವಿಜಯನಗರ ಕಾಲದ ಶ್ರೀವೇಣು ೋಪಾಲಸ್ವಾಮಿ ದೇವಾಲಯ ಮಾತ್ರವಲ್ಲದೆ ಇತರೇ ಅನೇಕ ದೇವಾಲಯಗಳಿದ್ದು, ಕೋಟೆಯ ನಿರ್ಮಾಣದ ಸಂದರ್ಭದಲ್ಲಿ ಈ ದೇವಾಲಯಗಳಿಗೆ ಯಾವುದೇ ರೀತಿಯ ಹಾನಿಯಾಗಿರುವುದು ಕಂಡುಬರುವುದಿಲ್ಲ.

**ಕೋಟೆಯ ಪಶ್ಚಿಮದ್ವಾರ:** ಕೋಟೆಯ ಪಶ್ಚಿಮದ್ವಾರವು ಕಮಾನು ಆಕಾರವನ್ನು ಹೊಂದಿದ್ದು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದ್ದು, ಕಮಾನನ್ನು ಬಿಳಿ ಗ್ರಾನೈಟ್ ಶಿಲೆಯ 31 ಕಲ್ಲುಗಳನ್ನು ಒಂದಕ್ಕೊಂದು ಓರೆಯಾಗಿ ಜೋಡಿಸಿ ನಿರ್ಮಿಸಲಾಗಿದೆ. ಕಲ್ಲುಗಳ ಸಂದಿಯಲ್ಲಿ ಗಾರೆಯನ್ನು ಬಳಸಲಾಗಿದೆ. ಮಧ್ಯಭಾಗದ ಕಲ್ಲಿಗೆ ತಳಭಾಗದಲ್ಲಿ 'V'ಚಿನ್ಹೆ ಇದೆ.ಇದು ಕೀ

ಸ್ಟೋನ್ ಆಗಿದ್ದು (ಚಿ.ಸಂ.136) ಈ ರೀತಿಯ ರಚನೆಯನ್ನು ಬಿಜಾಪುರದ ಆದಿಲ್ ಶಾಹಿಗಳು ಮತ್ತು ಶ್ರೀರಂಗಪಟ್ಟಣದ ಕೋಟೆಗಳಲ್ಲಿ ಕಾಣಬಹುದು. ಈ ಕೀ ಸ್ಟೋನ್ ಮಾದರಿಯ ಕಮಾನುಗಳ ಕಲೆ ಮತ್ತು ವಾಸ್ತುಶಿಲ್ಪ ಭಾರತದಲ್ಲಿ ಕಂಡುಬರುವ ಇಂಡೋ-ಇಸ್ಲಾಮಿಕ್ ಎಲ್ಲ ಕಟ್ಟಡಗಳಲ್ಲೂ ಕಂಡುಬಂದಿದ್ದು ತನ್ನದೇ ಆದ ವಿಶೇಷತೆಯನ್ನು ಹೊಂದಿದೆ.ಈ ಕಮಾನಿನ ಎಡಭಾಗದಲ್ಲಿ ಓರೆ ಕಲ್ಲುಗಳ ನೆಲಮಟ್ಟದಿಂದ ಎರಡನೇ ಕಲ್ಲಿನಲ್ಲಿ ಹೂದಳ ಕೆತ್ತನೆ ಇದ್ದು ಕಮಾನಿನ ಬಲಭಾಗದ ಓರೆ ಕಲ್ಲುಗಳಲ್ಲಿ ತಳಭಾಗದಿಂದ ಎರಡನೇ ಕಲ್ಲು ಮತ್ತು ಅದರ ಮುಂಭಾಗದ ಕಲ್ಲಿನಲ್ಲಿ (ಒಟ್ಟು ಎರಡು ಕಲ್ಲುಗಳು) ಹೂದಳ ಕೆತ್ತನೆ ಇವೆ. [20]

**ಮರದ ಗಡಗಡೆಗಳು (ಎರಡು ಮರದ ರಾಟೆಗಳು)**: ಪಶ್ಚಿಮ ದ್ವಾರದ ಕಲ್ಲು ಕಮಾನಿನ ಮೇಲ್ಭಾಗದ ಇಕ್ಕೆಲಗಳಲ್ಲಿ ಎರಡು ಸಂದಿಗಳಲ್ಲಿ ಎರಡು ಗಾಲಿಗಳಿವೆ. ಸಂದಿಗಳು ಗೋಡೆಯಲ್ಲಿ ಹಾಗೂ ಛಾವಣಿಯ ಮೇಲೆ ಕುಂಬೆಯಲ್ಲಿ ಹೊರಗೆ ಬರುತ್ತವೆ. ಈ ಗಾಲಿಗಳ ಮೇಲೆ ಹಾದು ಹೋಗುವ ಹಗ್ಗಗಳು ಬಾಗಿಲಿನ ಮುಂದೆ ಇರುವ ಕಂದಕದ ಮೇಲೆ ಸೇತುವೆಯಂತೆ ಇರುವ ಮರದ ಹಲಗೆಯನ್ನು ಮೇಲೆತ್ತಲು ಉಪಯೋಗಿಸುತ್ತಿದಂತೆ ಕಂಡುಬರುತ್ತದೆ. ಕೋಟೆಯ ರಕ್ಷಣಾ ಪಡೆಯು ಕಂದಕವನ್ನು ದಾಟಿ ಒಳಗೆ ಬಂದ ಮೇಲೆ ಹಲಗೆಯನ್ನು ಮೇಲೆತ್ತಿ ವೈರಿ ಪಡೆ ಕೋಟೆಯ ಹತ್ತಿರ ಬರದಂತೆ ಮಾಡಲು ಈ ವ್ಯವಸ್ಥೆಯನ್ನು ಬಳಸುತ್ತಿದ್ದರು. ಕಲ್ಲು ಕಮಾನಿನ ಒಳಗಡೆ ಬಾಗಿಲಿಗೆ ನಿರ್ಮಿಸಿರುವ ಎರಡು ಕಬ್ಬಿಣದ ಗೂಟಗಳಿವೆ. ಕಲ್ಲುಕಮಾನಿನ ವಿಸ್ತೀರ್ಣವು 10 ಅಡಿ ಉದ್ದ, 10 ಅಡಿ ಅಗಲ ಮತ್ತು5 ಅಡಿ ದಪ್ಪವಾಗಿರುತ್ತದೆ.

**ದಿಡ್ಡಿ ಬಾಗಿಲು (ಚಿಕ್ಕ ಬಾಗಿಲು)**: ಪಶ್ಚಿಮ ಪ್ರವೇಶ ದ್ವಾರದಿಂದ ಇದು ಪೂರ್ವಕ್ಕಿದೆ. ಪಶ್ಚಿಮ ದ್ವಾರದಿಂದ ಕೋಟೆಯೊಳಗೆ ಪ್ರವೇಶಿಸಿ ಹಿಂದಕ್ಕೆ ತಿರುಗಿ ನೋಡಿದಾಗ ದಿಡ್ಡಿ ಬಾಗಿಲಿನ ಮಧ್ಯದಲ್ಲಿ ಒಂದು ದೊಡ್ಡ ಕಮಾನು ಮತ್ತು ಅದರ ಇಕ್ಕೆಲಗಳಲ್ಲಿ ಎರಡು ಕಮಾನುಗಳು ಕಂಡುಬರುತ್ತವೆ. (ಚಿ.ಸಂ.137) ಕಮಾನುಗಳ ಮಧ್ಯದಲ್ಲಿ ಇಟ್ಟಿಗೆ ಮತ್ತು ಗಾರೆಯ ನಾಲ್ಕು ಅರೆಗಂಬಗಳಿವೆ. ಈ ಬಾಗಿಲು ಅಲಂಕಾರಿಕ ಕೆತ್ತನೆಗಳನ್ನು ಹೊಂದಿದೆ. ಮಧ್ಯ ಕಮಾನಿನ ಅಂಚನ್ನು ಹೂವಿನ ದಳಗಳ ಉಬ್ಬು ಚಿತ್ರಗಳಿಂದ ಅಲಂಕರಿಸಲಾಗಿದ್ದು ಇವು ಪ್ರಸ್ತುತ ಶಿಥಿಲವಾಗಿವೆ. ಮಧ್ಯ ಕಮಾನಿನ ಇಕ್ಕೆಲಗಳಲ್ಲಿ ಇರುವ ಬಳ್ಳಿಗಳ ಮೇಲ್ಭಾಗದಲ್ಲಿ ಎರಡು ದೊಡ್ಡ ಹೂಗಳಿದ್ದು ಪ್ರತಿಯೊಂದು ಹೂವಿನ ಮೇಲೆ ಗಿಳಿಗಳು ಕುಳಿತಿವೆ. ಮಧ್ಯ ಕಮಾನಿನ ಇಕ್ಕೆಲಗಳಲ್ಲಿರುವ ಚಿಕ್ಕ ಕಮಾನುಗಳು ಉಬ್ಬು ಪಟ್ಟಿಯಿಂದ ಕೂಡಿದ್ದು ಈ ಕಮಾನುಗಳು ಕೋಟೆಯ ನೆಲಮಾಳಿಗೆಯ ಕೋಣೆಗಳಿಗೆ ಪ್ರವೇಶ ನೀಡುತ್ತವೆ. ಈ ಕಮಾನುಗಳ ಮೇಲೆ ಅಲಂಕಾರಿಕ ಕೆತ್ತನೆಗಳಿದ್ದು ಮೂರು ಕಮಾನುಗಳ ಮೇಲಿನ ಅಲಂಕಾರಿಕ ಕೆತ್ತನೆಗಳನ್ನು ಗಮನಿಸಿದಾಗನಾಲ್ಕು ಅರೆಗಂಬಗಳ ಮೇಲೆ ಗಾರೆಯಿಂದ

ಕೂಡಿರುವ 5 ಪಟ್ಟಿಗಳು ಮತ್ತು ಕಂಬಗಳ ಮೇಲೆ ಬೋಧಿಗೆಯ ರಚನೆಯಿದೆ. ಅರೆಗಂಬಗಳ ಬೋದಿಗೆ ಮೇಲೆ ಅಲಂಕಾರಿಕ ಕೈಪಿಡಿ ಗೋಡೆ ಇದ್ದು, ಇದರಲ್ಲಿ ಸಣ್ಣ ಸಣ್ಣ ಕಮಾನು ಆಕೃತಿಯ ಗೂಡುಗಳ ರಚನೆಯಿದೆ.ಅವುಗಳ ಸಂಖ್ಯೆ ಅನುಕ್ರಮವಾಗಿ ಎಡಭಾಗದಲ್ಲಿ 11 ಮಧ್ಯಭಾಗದಲ್ಲಿ 15 ಮತ್ತು ಬಲಭಾಗದಲ್ಲಿ 11 ಗಳಾಗಿರುತ್ತದೆ. (ಗೂಡುಗಳ ಸಂಖ್ಯೆ 11+15+11) ಎಡಭಾಗದಲ್ಲಿರುವ ಎರಡನೆ ಅರೆಗಂಬದ ಬೋಧಿಗೆ ಮೇಲಿರುವ ಅಲಂಕಾರಿಕ 11 ಗೋಡೆಗಳು ಇದ್ದು ಒಂದು ಅಲಂಕಾರಿಕ ಗೂಡಿನಲ್ಲಿ ಹೂದಳದ ಮಧ್ಯದಲ್ಲಿ ಎರಡು ಗಿಳಿಗಳು ಹಣ್ಣು ತಿನ್ನುತ್ತಿರುವ ಗಾರೆ ಶಿಲ್ಪವನ್ನು ಸೇರಿಸಲಾಗಿದೆ.ಮಧ್ಯಭಾಗದ 15 ಗೂಡುಗಳ ಅರೆಗಂಬದ ಬೋದಿಗೆ ಮೇಲಿರುವ ಕೈಪಿಡಿಯಲ್ಲಿ ಅಲಂಕಾರಿಕ ಕಮಾನು ಗೂಡಿನಲ್ಲಿ ಎರಡು ಗಿಳಿಗಳು ಹಣ್ಣು ತಿನ್ನುತ್ತಿರುವ ಗಾರೆ ಶಿಲ್ಪಗಳಿವೆ. ಬಲಭಾಗದಲ್ಲಿ 11 ಗೂಡುಗಳಿದ್ದು ಈ ಗೂಡುಗಳ ತುದಿ ಅಂಚಿನ ಅರೆಗಂಬದ ಕೈಪಿಡಿಯಲ್ಲಿ ಅಲಂಕಾರಿಕ ಗೂಡಿನಲ್ಲಿ ಎರಡು ಗಿಳಿಗಳು ಹಣ್ಣು ತಿನ್ನುತ್ತಿರುವ ಗಾರೆ ಶಿಲ್ಪಗಳು ಕಂಡುಬರುತ್ತದೆ.ಈ ಗೂಡುಗಳ ಮೇಲ್ಭಾಗದ ಪಟ್ಟಿಯಲ್ಲಿಯು ಸಹ ಅಲಂಕಾರಿಕ ರಚನೆಗಳಿವೆ. (ನಾಲ್ಕು ಅರೆಗಂಬಗಳ ಮೇಲೆ) ಎರಡು ಪಾರ್ಶ್ವಗಳಲ್ಲಿ ವಿರುದ್ಧ ಮುಖವಾಗಿ ಚಲಿಸುತ್ತಿರುವಂತೆ ಎರಡು ಹಂಸಗಳ ಗಾರೆಯ ಶಿಲ್ಪಗಳು ಕಂಡುಬರುತ್ತವೆ.

ಈ ಅಲಂಕಾರಿಕ ಪಟ್ಟಿಯ ಮೇಲ್ಭಾಗವನ್ನು 3 ಮತ್ತು 5 ವಲಯಗಳ ಎಲೆಗಳಿಂದ ಅಲಂಕರಿಸಲಾಗಿದ್ದು ಇದೇ ಮಾದರಿಯ ಅಲಂಕಾರಿಕ ರಚನೆಯನ್ನು ನಾವು ಶ್ರೀರಂಗಪಟ್ಟಣದ ದರಿಯಾ ದೌಲತ್‌ನಲ್ಲಿ ಕಾಣಬಹುದಾಗಿದೆ. ಒಂದು ವಿಶೇಷವೇನೆಂದರೆ ದರಿಯಾ ದೌಲತ್‌ನಲ್ಲಿ ತೈಲವರ್ಣ ಚಿತ್ರಕಲೆ ಕಂಡುಬಂದರೆ ಇಲ್ಲಿ ಗಾರೆಯಲ್ಲಿ ನಿರ್ಮಿಸಲಾಗಿದೆ.ಈ ಕೋಟೆಯ ಪಶ್ಚಿಮ ದ್ವಾರದ ದಿಡ್ಡಿ ಬಾಗಿಲಿನಲ್ಲಿ ಕಂಡುಬಂದಿರುವ ಗಾರೆಯ ಅಲಂಕರಣೆಗಳನ್ನು ನೋಡಿದಾಗ ಇದು ಗಂಜೀಫ್ ಕಲೆಯ ಮಾದರಿಯನ್ನು ಅಳವಡಿಸಿಕೊಂಡಿರಬಹುದೆನಿಸುತ್ತದೆ.

ದಿಡ್ಡಿ ಬಾಗಿಲು (ಚಿಕ್ಕಬಾಗಿಲು)ನ್ನು ತೆಳುವಾದ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದ್ದು ಬಾಗಿಲು ದ್ವಾರದ ವಿಸ್ತೀರ್ಣವು ಅಗಲ 10 ಅಡಿಗಳು ಎತ್ತರ 10 ಅಡಿಗಳು ಮತ್ತು ದಪ್ಪ ಆರೂವರೆ ಅಡಿಗಳಾಗಿರುತ್ತದೆ. ದಿಡ್ಡಿಬಾಗಿಲಿನ ಪಶ್ಚಿಮ ದ್ವಾರದ ಒಟ್ಟು ವಿಸ್ತೀರ್ಣವು ಪೂರ್ವ ಪಶ್ಚಿಮ 34 ಅಡಿಗಳು ಉತ್ತರ ದಕ್ಷಿಣ 50 ಅಡಿಗಳು ಮತ್ತು ಎತ್ತರ 15 ಅಡಿಗಳಾಗಿರುತ್ತದೆ.[21]

**ಪಶ್ಚಿಮ ದ್ವಾರದ (ದಿಡ್ಡಿಬಾಗಿಲು) ಕೋಟೆ ನೆಲಮಾಳಿಗೆಯ ಕೋಣೆಗಳು**:

ಪಶ್ಚಿಮ ದ್ವಾರದ ದಿಡ್ಡಿ ಬಾಗಿಲಿನಲ್ಲಿ ಚಿಕ್ಕ ಕಮಾನುಗಳ ಕೆಳಗಡೆ ಎಡ ಮತ್ತು ಬಲಭಾಗದಲ್ಲಿ ಎರಡು ಕೋಣೆಗಳಿದ್ದು ಎಡಭಾಗದ ಕೋಣೆಯು ಮೂರು ಕಮಾನು ಆಕಾರದ ಪ್ರವೇಶ ಕಿಂಡಿಗಳನ್ನು ಹೊಂದಿದೆ (ಪೂರ್ವಕ್ಕೆ ಒಂದು ಮತ್ತು ದಕ್ಷಿಣಕ್ಕೆ ಎರಡು ಪ್ರವೇಶ ಕಿಂಡಿಗಳು) ಕೋಣೆಯ ಒಳಭಿತ್ತಿಯಲ್ಲಿ 5 ಗೂಡುಗಳಿವೆ, (ಚಿ.ಸಂ.138) ಮೇಲ್ಛಾವಣಿಯು ಕಚ್ಚುಗಾರೆಯಿಂದ ನಿರ್ಮಿಸಲ್ಪಟ್ಟಿದ್ದು ಸರಳವಾಗಿದೆ. ಕೋಣೆಯ ದಕ್ಷಿಣ ದಿಕ್ಕಿನ ಕಲ್ಲಿನಲ್ಲಿ ಹೂವಿನ ದಳದ ಶಿಲ್ಪವಿದೆ, ಕೋಣೆಯ ವಿಸ್ತೀರ್ಣವು ಉದ್ದ 18 ಅಡಿಗಳು ಮತ್ತು ಅಗಲ 9 ಅಡಿಗಳಂದ ಕೂಡಿದೆ. ಬಲಭಾಗದ ಕೋಣೆಯು ಮೂರು ಪ್ರವೇಶ ಕಿಂಡಿಗಳನ್ನು ಹೊಂದಿದ್ದು (ಪೂರ್ವಕ್ಕೆ ಒಂದು ಮತ್ತು ಉತ್ತರಕ್ಕೆ ಎರಡು ಕಿಂಡಿಗಳು) ಕೋಣೆಯ ಒಳಭಿತ್ತಿಯಲ್ಲಿ ನಾಲ್ಕು ಗೂಡುಗಳಿವೆ, ಮೇಲ್ಛಾವಣಿಯು ಕಮಾನಿನ ಆಕಾರವನ್ನು ಹೊಂದಿದ್ದು ಅಚ್ಚುಗಾರೆಯಿಂದ ರಚನೆಯಾಗಿದೆ, ಕೋಣೆಯ ಉತ್ತರ ದಿಕ್ಕಿನ ಒಂದು ಕಲ್ಲಿನಲ್ಲಿ ಹೂವಿನ ದಳಗಳ ಉಬ್ಬು ಶಿಲ್ಪಗಳಿವೆ. ಎರಡು ಗೂಡುಗಳು ವಿಶೇಷವಾಗಿದ್ದು ಅವುಗಳ ಎತ್ತರ 2.2 ಅಡಿ ಮತ್ತು ಅಗಲ 1.9 ಅಡಿಗಳಾಗಿದೆ.ಈ ಕೋಣೆಯ ವಿಸ್ತೀರ್ಣವು ಉದ್ದ 18 ಅಡಿಗಳು ಮತ್ತು ಅಗಲ 9 ಅಡಿಗಳಂದ ಕೂಡಿದೆ.ಈ ಕೋಣೆಗೆ ಹೊಂದಿಕೊಂಡಂತೆ ದಕ್ಷಿಣ ದಿಕ್ಕಿನಲ್ಲಿ ಒಂದು ಕಲ್ಲಿನ ಮೇಲೆ ಉಬ್ಬುಶಿಲ್ಪವಿದ್ದು ಅದು ಅಸ್ಪಷ್ಟವಾಗಿದೆ.ಇತ್ತೀಚಿನ ವರ್ಷಗಳಲ್ಲಿ ಕೇಂದ್ರ ಪುರಾತತ್ವ ಇಲಾಖೆಯವರು ಕೋಟೆ ಜೀರ್ಣೋದ್ಧಾರ ನಡೆಸಿದ್ದು, ಆ ಸಂದರ್ಭದಲ್ಲಿ ಈ ಕಲ್ಲನ್ನು ವೇದಿಕೆಗೆ ಸೇರಿಸಿರುವಂತೆ ಕಂಡುಬರುತ್ತದೆ.

**ಆಯತಾಕಾರದ ವೇದಿಕೆ**: ಪಶ್ಚಿಮ ದ್ವಾರದ ದಿಡ್ಡಿ ಬಾಗಿಲು ಆಯತಾಕಾರ ಮಾದರಿಯ ಒಂದು ವೇದಿಕೆಯನ್ನು ಹೊಂದಿದ್ದು ಇದು ತೆಳುವಾದ ಸುಟ್ಟ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ನಿರ್ಮಿಸಲ್ಪಟ್ಟಿದೆ. ಈ ವೇದಿಕೆಯ ಮೇಲ್ಛಾವಣಿಯನ್ನು ತೆಳುವಾದ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ.ಈ ವೇದಿಕೆಯ ವಿಸ್ತೀರ್ಣವು ಪೂರ್ವ ಪಶ್ಚಿಮ 24 ಅಡಿಗಳು ಉತ್ತರ ದಕ್ಷಿಣ 50 ಅಡಿಗಳು ಮತ್ತು ಎತ್ತರ 15 ಅಡಿಗಳಾಗಿರುತ್ತದೆ. (ಚಿ.ಸಂ.139) ಈ ವೇದಿಕೆಯ ಮೇಲ್ಭಾಗದ ಪೂರ್ವದ ಗೋಡೆಯಲ್ಲಿ ಬಂದೂಕು ಕಿಂಡಿಗಳು ಮತ್ತು ಮುಖ್ಯವಾಗಿ ಎರಡು ಗಡಗಡೆಗಳ (ಗಾಲಿ) ನಿರ್ವಹಿಸುವ ಕಿಂಡಿಗಳಿವೆ. ಈ ವೇದಿಕೆಯ ಮೇಲ್ಛಾವಣಿಯ ಮೇಲೆ ಪೂರ್ವ ದಿಕ್ಕಿಗೆ ಒಂದು ಉದ್ದವಾದ ಕೈಪಿಡಿ ಗೋಡೆಯನ್ನು ತೆಳುವಾದ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ್ದು ಅದರ ಎತ್ತರ 3.9 ಅಡಿ ಅಗಲ 1.5 ಅಡಿ ಮತ್ತು ಉದ್ದ 50 ಅಡಿಗಳಾಗಿರುತ್ತದೆ.[22]

**ಪಶ್ಚಿಮ ದ್ವಾರದ (ದಿಡ್ಡಿ ಬಾಗಿಲು) L ಆಕಾರದ ಎರಡು ಉದ್ದವಾದ ಸಮಾನಾಂತರ ಗೋಡೆಗಳು:** ಪಶ್ಚಿಮ ದ್ವಾರದ ಇಕ್ಕೆಲಗಳ ಅಂಚಿನಲ್ಲಿ ಎರಡು ವೃತ್ತಾಕಾರದ ಬುರುಜುಗಳಿವೆ. ಈ ಬುರುಜುಗಳ ಮುಂಭಾಗದಲ್ಲಿ ಸೇತುವೆ ಮಾದರಿಯ ಉದ್ದವಾದ ಗೋಡೆಗಳು 'L'ಆಕಾರದಲ್ಲಿ ನಿರ್ಮಿಸಲ್ಪಟ್ಟಿದ್ದು ಈ ಗೋಡೆಗಳ ಮೂಲಕ ಕೋಟೆಯು ಮುಂದುವರೆಯುತ್ತದೆ.

**ತುರ್ತು ಪರಿಸ್ಥಿತಿಯ ಬಾಗಿಲು:** ಪಶ್ಚಿಮ ದ್ವಾರದ ಉತ್ತರ ದಿಕ್ಕಿನ ಕೋಟೆಯ ಎಡಭಾಗದ ಸೇತುವೆ ಮಾದರಿಯ ಗೋಡೆಯ ಕೆಳಭಾಗದಲ್ಲಿ ತುರ್ತು ಪರಿಸ್ಥಿತಿಯಲ್ಲಿ ಉಪಯೋಗಿಸುವ ಒಂದು ಚಿಕ್ಕ ಬಾಗಿಲಿದ್ದು ಈ ಬಾಗಿಲಿಗೆ ಕಲ್ಲುದ್ವಾರವಿದ್ದು ಕೋಟೆಯ ದುರಂತವೆಂದರೆ ಈ ಬಾಗಿಲಿನಲ್ಲಿ ಚರಂಡಿ ನೀರು ಹರಿಯುತ್ತಿದೆ.

**ಮೆಟ್ಟಿಲುಗಳು:** ಕೋಟೆಯ ಪಶ್ಚಿಮ ದ್ವಾರದಿಂದ ಒಳಕ್ಕೆ ಪ್ರವೇಶಿಸಿದರೆ ಇಕ್ಕೆಲಗಳಲ್ಲಿ ಕೋಟೆಯೊಳಗೆ ಮೇಲಕ್ಕೆ ಹೋಗಲು ಕಲ್ಲಿನ ಮೆಟ್ಟಿಲುಗಳಿವೆ. (ಚಿ.ಸಂ.140) ಈ ಮೆಟ್ಟಿಲುಗಳನ್ನು ಹತ್ತಿದಾಗ ಕೋಟೆಯ ಮುಂದುವರೆದ ಭಾಗವನ್ನು ಕಾಣಬಹುದು. ಉತ್ತರ ದಿಕ್ಕಿನ ಕೋಟೆಗೆ ಹೋಗುವ ಮೆಟ್ಟಿಲುಗಳ ಜಾಗದಲ್ಲಿ ಕೋಟೆಗೆ ಹೊಂದಿಕೊಂಡಂತೆ ನೀರುಬಾಗಿಲು ಆಂಜನೇಯಸ್ವಾಮಿ ದೇವಾಲಯವಿದೆ. ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿ ಆಂಜನೇಯ ಸ್ವಾಮಿ ದೇವಾಲಯಗಳ ನಿರ್ಮಾಣ ಹೆಚ್ಚಾಗಿ ಕಂಡುಬಂದಿದ್ದು ಇದರ ಪ್ರಭಾವವು ಸಹ ಕೋಟೆಯ ಮೇಲೆ ಆಗಿರುವ ಅಂಶವು ಗೋಚರಿಸಲ್ಪಡುತ್ತದೆ.

**ಕೋಟೆಯ ಭಾಗಗಳು-ಬುರುಜುಗಳು ಮತ್ತು ಬತ್ತೇರಿಗಳು:**

**ಕೊತ್ತಲಗಳು:** ಕೊತ್ತಲವೆಂದರೆ ಕೋಟೆಯ ಮೇಲ್ಭಾಗದಲ್ಲಿ ಕೋಟೆಯ ಮೇಲೆ ಸೈನಿಕರು ಕಾಯುವ ಎತ್ತರ ಪ್ರದೇಶ ಎಂಬ ಅರ್ಥವನ್ನು ಕೊಡುತ್ತದೆ. ಕೊತ್ತಲಕ್ಕೆ ಬುರುಜು ಮತ್ತು ಕಾವಲು ಗೋಪುರವೆಂತಲೂ ಕರೆಯುತ್ತಾರೆ.ಕೋಟೆಯೊಂದಿಗೆ ಕೊತ್ತಲ ಸಹ ಸೇರಿಕೊಂಡಿದೆ.ಯುದ್ಧ ನಡೆಯುವ ಸನ್ನಿವೇಶ ಬಂದಾಗ ಇವು ಆಯಾಕಟ್ಟಿನ ರಚನೆಯಾಗಿದ್ದವು. ಎತ್ತರ ಸ್ಥಳದಲ್ಲಿ ನಿರ್ಮಾಣವಾಗಿರುವುದರಿಂದ ಶತ್ರುವಿನ ವಿರುದ್ಧ ಸಹಜವಾಗಿಯೇ ರಕ್ಷಣೆ ಸಿಗುತ್ತಿತ್ತು.[23] ಸಾಮಾನ್ಯವಾಗಿ ಕೋಟೆಯ ಮುಂಚಾಚಿದ ಭಾಗವನ್ನು ಕೊತ್ತಲವೆಂದು ಕರೆಯುತ್ತಾರೆ. ಕೋಟೆಯೊಳಗಿನ ಚೌಕಕಾರದ ಭಾಗವನ್ನು ಬತೇರಿ ಎಂದು ಕರೆಯುತ್ತಾರೆ.

ದೇವನಹಳ್ಳಿ ಕೋಟೆಯಲ್ಲಿ ಉತ್ತರ ಮತ್ತು ದಕ್ಷಿಣ ಭಾಗದಲ್ಲಿ ಬುರುಜುಗಳು ಮತ್ತು ಬತೇರಿಗಳಿವೆ. ಬುರುಜುಗಳು ಒಂದೇ ಅಳತೆಯಲ್ಲ. ಇವು ಅರ್ಧಗೋಳಾಕಾರ, ಮೊಟ್ಟೆಯಾಕಾರ

ಮತ್ತು 'U' ಆಕಾರದಲ್ಲಿವೆ. ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯ ಕೋಟೆಯ ಬುರುಜುಗಳು ಸಹ ಮೊಟ್ಟಯಾಕಾರದಲ್ಲಿದ್ದು, ದೇವನಹಳ್ಳಿ ಕೋಟೆಯ ಕೆಲವು ಬುರುಜುಗಳು ಸಹ ಮೊಟ್ಟೆಯಾಕಾರ ಮತ್ತು ಅರ್ಧಗೋಳಾಕಾರದಲ್ಲಿವೆ. ಬುರುಜುಗಳು ಕೋಟೆಯಿಂದ ಹೊರಚಾಚಿದ್ದು ಬುರುಜುಗಳು ಹೊರಮೈ ಬಿಳಿ ಗ್ರಾನೈಟ್ ಶಿಲೆಯಿಂದ ಮತ್ತು ಒಳಮೈ ತೆಳುವಾದ ಸುಟ್ಟ ಇಟ್ಟಿಗೆ ಗಾರೆಯಿಂದ ನಿರ್ಮಿಸಲ್ಪಟ್ಟಿವೆ. ಬುರುಜುಗಳ ಮೇಲೆ ತೋಪು ಕಿಂಡಿಗಳಿದ್ದು ಇವುಗಳು ಇಳಿಜಾರಾಗಿವೆ. ದೇವನಹಳ್ಳಿ ಕೋಟೆಯಲ್ಲಿ ಒಟ್ಟು 13 ಬುರುಜುಗಳು (ಚಿ.ಸಂ.141) (ಉತ್ತರ ದಿಕ್ಕಿನಲ್ಲಿ 6 ಮತ್ತು ದಕ್ಷಿಣ ದಿಕ್ಕಿನಲ್ಲಿ 7) ಮತ್ತು 2 ಬತೇರಿಗಳು (ಉತ್ತರ ದಿಕ್ಕಿನಲ್ಲಿ 1 ಮತ್ತು ದಕ್ಷಿಣ ದಿಕ್ಕಿನಲ್ಲಿ 1) ಇವೆ. ಕೋಟೆಯ ಭದ್ರತೆಯನ್ನು ಹೆಚ್ಚಿಸಲು ಕೋಟೆ ಗೋಡೆಗೆ ಹೊಂದಿಕೊಂಡಂತೆ ಅಲ್ಲಲ್ಲಿ ವೃತ್ತಾಕಾರದ ಮತ್ತು 'U'ಆಕಾರದ ಬುರುಜುಗಳು ಮತ್ತು ಚೌಕಕಾರದ ಬತೇರಿಯನ್ನು ನಿರ್ಮಿಸಲಾಗಿದೆ. ಬುರುಜುಗಳು ಕೋಟೆಯಿಂದ ಹೊರಚಾಚಿಕೊಂಡಿ ಕೋಟೆಯ ಭಾಗಗಳಾಗಿವೆ.

**ಕೋಟೆ ಉತ್ತರ ದಿಕ್ಕಿನ ಬುರುಜುಗಳು ಮತ್ತು ಬತೇರಿ:**

**1ನೇ ಬುರುಜು:** ಇದು ಕೋಟೆಯ ಪಶ್ಚಿಮ ದ್ವಾರದ ಅಂಚಿನಲ್ಲಿದ್ದು ವರ್ತುಲಾಕಾರದಲ್ಲಿದೆ. ಈ ಕೊತ್ತಲದಲ್ಲಿ 'ಎಲ್' ಆಕಾರದ ಕಾವಲುಗಾರರ ತಾಣವಿದ್ದು ಇದು ಚಿಕ್ಕದಾಗಿದ್ದು ಒಬ್ಬ ಮನುಷ್ಯನು ಕುಳಿತುಕೊಳ್ಳಲು ಮಾತ್ರ ಸ್ಥಳಾವಕಾಶವಿದೆ, ಈ ಕಿಂಡಿಯಲ್ಲಿ ಮತ್ತೊಂದು ಒಳಕಿಂಡಿ ಇದ್ದು 3 ತೋಪು ಕಿಂಡಿಗಳಿವೆ (ಪಿರಂಗಿ ಕಿಂಡಿಗಳು) ಈ ಪಿರಂಗಿ ಕಿಂಡಿಗಳು ಇಳಿಜಾರಾಗಿದ್ದು ಪಿರಂಗಿ ಕಿಂಡಿಯ ತಳಭಾಗ ಕಲ್ಲು ದಿಂಡುಗಳಿಂದ ಮಾಡಲ್ಪಟ್ಟಿದೆ. ಈ ಬುರುಜಿನ ಕೈಪಿಡಿ ಗೋಡೆಗಳಲ್ಲಿ ಯಾವುದೇ ಬಂದೂಕು ಕಿಂಡಿಗಳಿಲ್ಲ.

**2ನೇ ಬುರುಜು:** ಈ ಎರಡನೇ ಬುರುಜು ವೃತ್ತಾಕಾರದಲ್ಲಿದ್ದು ದೊಡ್ಡ ಕೊತ್ತಲವಾಗಿದೆ, ತುದಿ ಅಂಚಿನಲ್ಲಿ 2 ಅಷ್ಟಕೋನಾಕೃತಿಯ ಅರೆಗಂಬಗಳಿದ್ದು ಎಡಭಾಗದ ಅರೆಗಂಬ ಪಕ್ಕದಲ್ಲಿ ಕಾವಲುಗಾರ ನಿಂತುಕೊಳ್ಳಬಹುದಾದ ವರ್ತುಲಾಕಾರದ ಚಿಕ್ಕ ತಾಣವಿದೆ. ಬಲಭಾಗದ ಅರೆಗಂಬ ಸುಂದರವಾದ ಕೆತ್ತನೆಗಳನ್ನು ಹೊಂದಿದೆ. ಬಲಗಡೆಯ ಅರೆಗಂಬದ ಪಕ್ಕದಲ್ಲಿ 'L'ಆಕಾರದ ಕಾವಲುಗಾರನ ಚಿಕ್ಕತಾಣವಿದ್ದು ಈ ಬುರುಜುಗಳಲ್ಲಿ 5 ತೋಪು ಕಿಂಡಿಗಳಿವೆ.

**3ನೇ ಬುರುಜು:**ಮೂರನೇ ಬುರುಜು ಲಾಳಾಕಾರದಲ್ಲಿರುವ ದೊಡ್ಡ ಕೊತ್ತಲವಾಗಿದ್ದು ಇದರ ತುದಿಗಳಲ್ಲಿ 3 ಭಾಗಗಳುಳ್ಳ ಅರೆಗಂಬಗಳಿದ್ದು ಅರೆಗಂಬಗಳ ಇಕ್ಕೆಲಗಳಲ್ಲಿ ಅಗಲ ಮತ್ತು ಎತ್ತರವಾದ ವರ್ತುಲಾಕಾರದ ಕಾವಲುಗಾರರ ತಾಣಗಳಿವೆ.

**4ನೇ ಬುರುಜು**: ಇದು ಲಾಳಾಕಾರದಲ್ಲಿರುವ ಚಿಕ್ಕಬುರುಜಾಗಿದ್ದು ಇದರಲ್ಲಿ 2 ಕಾವಲುಗಾರರ ತಾಣಗಳಿವೆ. ಈ ತಾಣಗಳಲ್ಲಿ ತಲಾ ಎರಡು ಬಂದೂಕು ಕಿಂಡಿಗಳು ಮತ್ತು ಮೂರು ತೋಪು ಕಿಂಡಿಗಳಿವೆ.

**5ನೇ ಬುರುಜು**: ಐದನೆ ಬುರುಜು ವಿಶಾಲವಾಗಿದ್ದು ವರ್ತುಲಾಕಾರದ ದೊಡ್ಡ ಬುರುಜಾಗಿದೆ. ಈ ಬುರುಜಿನ ನೆಲಕ್ಕೆ ಕಲ್ಲುಹಾಸುಗಳನ್ನು ಹಾಕಲಾಗಿದೆ. (ಚಿ.ಸಂ.143) ತುದಿ ಅಂಚಿನಲ್ಲಿ ಎರಡು ಅಲಂಕಾರಿಕ ಅರೆಗಂಬಗಳಿದ್ದು ಎಡಭಾಗದ ಅರೆಗಂಬ ಪಕ್ಕದಲ್ಲಿ ಕೋಟೆ ಗೋಡೆಯಲ್ಲಿ ಒಂದು ದೊಡ್ಡ ಗೂಡು ಇದ್ದು ಈ ಅರೆಗಂಬದ ಕೆಳಗಡೆ ಕಲ್ಲಿನಲ್ಲಿ ಹೂದಳ ಮತ್ತು ಮತ್ಸ್ಯದ ಉಬ್ಬು ಶಿಲ್ಪವಿದೆ. (ಚಿ.ಸಂ.144) ಬಲಭಾಗದ ಅರೆಗಂಬದ ಕೆಳಗಡೆ ಇರುವ ಕಲ್ಲಿನಲ್ಲಿ ಒಂದು ಮತ್ಸ್ಯದ ಉಬ್ಬು ಶಿಲ್ಪವಿದೆ. ಇಂತಹ ಮತ್ಸ್ಯ ಶಿಲ್ಪಗಳು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯ ಕೋಟೆಯಲ್ಲಿಯೂ ಸಹ ಕಂಡುಬಂದಿವೆ. ಈ ಬುರುಜಿನಲ್ಲಿ 5 ತೋಪು ಕಿಂಡಿಗಳು,4 ಮೆಟ್ಟಿಲು ಮಾದರಿಯ ಪೀಠಗಳು 2 ಮದ್ದುಗುಂಡು ಸಂಗ್ರಹ ಅಥವಾ ವಿಶ್ರಾಂತಿಯನ್ನು ಪಡೆಯುವ ಕೋಣೆಗಳು ಕಂಡುಬಂದಿವೆ.

**6ನೇ ಬುರುಜು**: ಇದು ವರ್ತುಲಾಕಾರದಲ್ಲಿದ್ದು ಇದರಲ್ಲಿ ಎರಡು ಕಾವಲುಗಾರರ ತಾಣಗಳಿದ್ದು ಇದರಲ್ಲಿ ತಲ 2 ಬಂದೂಕುಗಳನ್ನು ಸೇರಿಸುವ ಕಿಂಡಿಗಳು, 5 ತೋಪು ಕಿಂಡಿಗಳು ಮತ್ತು 2 ಚಿಕ್ಕ ಮದ್ದಿನ ಮನೆ ಅಥವಾ ವಿಶ್ರಾಂತಿ ಪಡೆಯುವ ತಾಣಗಳಿವೆ ಅವುಗಳನ್ನು ಸುಟ್ಟ ಇಟ್ಟಿಗೆ ಮತ್ತು ಸುಣ್ಣ ಗಾರೆಯಿಂದ ನಿರ್ಮಿಸಲಾಗಿದೆ.

**ಬತೇರಿ**: ಈ 6ನೇ ಬುರುಜುವಿನ ಮುಂಭಾಗದಲ್ಲಿ 1 ಬತೇರಿ ಇದ್ದು ಇದು ಚೌಕಕಾರದಲ್ಲಿದ್ದು ಕೋಟೆಯ ತಳಭಾಗದಿಂದ ಮೇಲ್‌ಹಂತದವರೆಗೆ ನಿರ್ಮಾಣವಾಗಿದೆ. ಇದರ ಒಂದು ಭಾಗ ನೆಲಮಟ್ಟದಲ್ಲಿದ್ದರೆ ಮೂರು ಭಾಗಗಳು ಕೋಟೆಯ ಮೇಲಿವೆ. ಈ ಬತೇರಿಯ ಹೊರಮೈ ಕಲ್ಲುಗಳಿಂದ ನಿರ್ಮಾಣವಾಗಿದ್ದು, ಪಶ್ಚಿಮ ಭಾಗವು 2 ಹಂತದಲ್ಲಿ ಪಿರಮಿಡ್ಡಿನ ಆಕೃತಿಯಲ್ಲಿ ನಿರ್ಮಾಣವಾಗಿದೆ. ಈ ಬತೇರಿಯ ಪ್ರವೇಶ ದ್ವಾರವು ದಕ್ಷಿಣ ದಿಕ್ಕಿಗಿದೆ ಈ ಬತೇರಿಯಲ್ಲಿ ಒಂದು ಕಾವಲುಗಾರರ ಕೋಣೆಯಿದ್ದು ಇದರಲ್ಲಿ 1 ಬಂದೂಕು ಸೇರಿಸುವ ಕಿಂಡಿ ಮಾತ್ರ ಇದು 6 ತೋಪು ಕಿಂಡಿಗಳಿವೆ. ಬತೇರಿ ಗೋಡೆಯಲ್ಲಿ ನಾಲ್ಕು ಬಂದೂಕು ಕಿಂಡಿ ಇದ್ದು ಬತೇರಿಯ ಒಟ್ಟು ವಿಸ್ತೀರ್ಣವು ಉದ್ದ 51 ಅಡಿ ಅಗಲ 41 ಅಡಿ ಮತ್ತು ಎತ್ತರ 16 ಅಡಿಗಳಷ್ಟು ವಿಸ್ತಾರವಾಗಿದೆ.

**ಕೋಟೆ ದಕ್ಷಿಣ ದಿಕ್ಕಿನ ಬುರುಜುಗಳು ಮತ್ತು ಬತೇರಿ**

**1ನೇ ಬುರುಜು**: ಇದು ಪಶ್ಚಿಮ ದ್ವಾರದ ಅಂಚಿನಲ್ಲಿದ್ದು ವೃತ್ತಾಕಾರದಲ್ಲಿ ನಿರ್ಮಿಸಿದ್ದು ಚಿಕ್ಕದಾಗಿದೆ. 3 ತೋಪು ಕಿಂಡಿಗಳಿದ್ದು ಕಾವಲುಗಾರರ ಕೋಣೆಗಳು ಕಂಡು ಬರುವುದಿಲ್ಲ.

**2ನೇ ಬುರುಜು**: U ಆಕಾರದಲ್ಲಿದ್ದು 2 ಕಾವಲುಗಾರರ ಕೋಣೆಗಳನ್ನು ಹೊಂದಿದ್ದು ಹಾಗೂ ಶಿಥಿಲವಾಗಿವೆ, 5 ತೋಪು ಕಿಂಡಿಗಳಿವೆ.

**3ನೇ ಬುರುಜು**: U ಆಕಾರದಲ್ಲಿರುವ ಈ ಬುರುಜಿನ ಇಕ್ಕೆಲಗಳಲ್ಲಿ ಎರಡು ಕಾವಲುಗಾರರ ಕೋಣೆಗಳನ್ನು ನಿರ್ಮಿಸಲಾಗಿದ್ದು ಇವುಗಳಲ್ಲಿ ಒಬ್ಬ ವ್ಯಕ್ತಿ ನಿಲ್ಲಬಹುದಾದ ಸ್ಥಳಾವಕಾಶವಿದ್ದು ಇದರ ಪಹರೆ ಕೋಣೆಗಳಲ್ಲಿ ತಲಾ ಎರಡು ಬಂದೂಕು ಕಿಂಡಿಗಳಿವೆ.

**4ನೇ ಬುರುಜು**: U ಆಕಾರದಲ್ಲಿದೆ. ನಾಲ್ಕು ಐದು ಮತ್ತು ಆರನೆ ಬುರುಜುಗಳು U ಅಕ್ಷರದ ಮಾದರಿಯಲ್ಲಿದ್ದು ಕಾವಲುಗಾರರಿಗೆ ಇರಬೇಕಾದ ಕೋಣೆಗಳು ಕಂಡುಬರುವುದಿಲ್ಲ. ಬುರುಜಿನ ನೆಲಹಾಸು ಶಿಥಿಲವಾಗಿದೆ. ಮೂರು ಬರುಜುಗಳಲ್ಲಿ ಮೂರು ತೋಪು ಕಿಂಡಿಗಳು ಕಂಡುಬರುತ್ತವೆ ಹಾಗೂ ನೆಲಹಾಸುಗಳು ಶಿಥಲವಾಗಿದ್ದು ಸಂರಕ್ಷಣೆ ಮಾಡಬಹುದಾಗಿದೆ.

**7ನೇ ಬುರುಜು**: ಇದು ಸಹU ಆಕಾರದಲ್ಲಿದ್ದು ಚಿಕ್ಕದಾಗಿದ್ದು, ಇಲ್ಲಿಯೂ ಸಹ ಕಾವಲುಗಾರರ ಕೋಣೆಗಳಿಲ್ಲ. 2 ತೋಪು ಕಿಂಡಿಗಳಿವೆ. ಈ ಬುರುಜಿನ ಉತ್ತರ ದಿಕ್ಕಿಗೆ ಉದ್ದವಾದ ಕೋಟೆ ಗೋಡೆಗಳು ಕಂಡು ಬರುವುದಿಲ್ಲ ಮತ್ತು ಇದು ಸಹ ಶಿಥಿಲವಾಗಿದೆ.

**ಬತೇರಿ**: 6ನೇ ಬುರುಜಿಗೆ ಎದುರಿಗೆ ಒಂದು ಬತೇರಿ ಚೌಕಕಾರದಲ್ಲಿದ್ದು ಒಂದು ರೀತಿಯ ವೇದಿಕೆ ಮಾದರಿಯಲ್ಲಿದೆ. ಇದರ ಉದ್ದ 60 ಅಡಿಗಳು ಅಗಲ 65 ಅಡಿಗಳು ಮತ್ತು ಎತ್ತರ 29 ಅಡಿಗಳಾಗಿದೆ. ಇದು ಕೋಟೆಯ ಒಳಭಾಗದ ರಸ್ತೆಯ ಪಕ್ಕದಲ್ಲಿದ್ದು, ನೆಲಮಟ್ಟದಿಂದ ಕೋಟೆಗೆ ತಾಗಿಕೊಂಡಂತೆ ಕಂಡುಬರುತ್ತದೆ. ಇದರ ಹೊರಮೈ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು ದಕ್ಷಿಣ ದಿಕ್ಕಿಗೆ ಪ್ರವೇಶ ದ್ವಾರವಿದೆ. ಈ ದ್ವಾರದಿಂದ ಬತೇರಿಗೆ ಪ್ರವೇಶಿಸಲು ಹತ್ತು ಮೆಟ್ಟಿಲುಗಳಿವೆ ಹಾಗೂ ದ್ವಾರದ ವಿಸ್ತೀರ್ಣವು ಎತ್ತರ 6 ಅಡಿ ಮತ್ತು ಅಗಲ ಐದೂವರೆ ಅಡಿಗಳಾಗಿರುತ್ತದೆ. ಈ ಬತೇರಿ ಕೋಟೆಗಿಂತ ಎತ್ತರವಾಗಿದ್ದು 3 ತೋಪು ಕಿಂಡಿಗಳಿವೆ. ಬತೇರಿಯ ಕೈಪಿಡಿ ಗೋಡೆಯಲ್ಲಿ ಕೆಲವು ತೋಪು ಕಿಂಡಿಗಳು ಶಿಥಿಲವಾಗಿದ್ದು ಕಾವಲುಗಾರರ ಕೋಣೆಗಳಾಗಲೀ ಬಂದೂಕು ಕಿಂಡಿಗಳಾಗಲೀ ಕಂಡು ಬಂದಿರುವುದಿಲ್ಲ. ಈ ಬತೇರಿಯ ಹೊರಭಾಗದಲ್ಲಿ ಪೂರ್ವ ಮತ್ತು ಉತ್ತರ ದಿಕ್ಕಿಗೆ 2 ದ್ವಾರ ಪಾಲಕರ ಶಿಲ್ಪಗಳಿವೆ.[24]

**ಬಂದೂಕು ಕಿಂಡಿಗಳು**: ವಿಶೇಷವಾಗಿ ನಿರ್ಮಿಸಿರುವ ಈ ಕೋಟೆ ಕೈಪಿಡಿ ಗೋಡೆಗಳ ತೋಪು ಕಿಂಡಿಗಳಲ್ಲಿ ಬಂದೂಕು ಕಿಂಡಿಗಳವೆ. ಸಾಮಾನ್ಯವಾಗಿ ಒಂದು ಬಂದೂಕು ಕಿಂಡಿಗಳ ಸಂಖ್ಯೆ ಹೆಚ್ಚಾಗಿ ಕಂಡುಬಂದಿದ್ದು ಮತ್ತೆ ಕೆಲವು ಕಡೆ ಒಳಭಾಗದ ಒಂದೇ ಕಿಂಡಿ ಹೊರಭಾಗದಲ್ಲಿ 3, 4, 5, 8 ಕಿಂಡಿಗಳಾಗಿ ರಚನೆಯಾಗಿದೆ. (ಚಿ.ಸಂ.145) ಪಶ್ಚಿಮ ದ್ವಾರದ ಆಯತಾಕಾರ ವೇದಿಕೆಯ ಕೈಪಿಡಿ ಗೋಡೆಯಲ್ಲಿ (ಪಶ್ಚಿಮ ದಿಕ್ಕಿನ) 5 ಬಂದೂಕು ಕಿಂಡಿಗಳವೆ. ಮಧ್ಯಭಾಗದ ಬಂದೂಕು ಕಿಂಡಿಯು ಹೊರಭಾಗದಲ್ಲಿ 3 ಕಿಂಡಿಗಳಾಗಿ, ಇನ್ನುಳಿದ ನಾಲ್ಕರಲ್ಲಿ ತಲಾ ನಾಲ್ಕರಂತೆ ಹೊರಭಾಗದಲ್ಲಿ 4 ಕಿಂಡಿಗಳಾಗಿ ರಚನೆಯಾಗಿದೆ.

**ಕೋಟೆಯ ಉತ್ತರ ಭಾಗದ ಬಂದೂಕು ಕಿಂಡಿಗಳು:**

- 1 ರಿಂದ 2ನೇ ಬುರುಜುವಿನ ನಡುವಿನ ಸಮಾನಾಂತರ ಗೋಡೆ ಮತ್ತು ಅದಕ್ಕೆ ತಾಕಿರುವ ಎಡಭಾಗದ ಗೋಡೆಯಲ್ಲಿ 9 ಬಂದೂಕು ಕಿಂಡಿಗಳವೆ.
- 2 ರಿಂದ 3ನೇ ಬುರುಜು ನಡುವಣ ಕೈಪಿಡಿ ಗೋಡೆಯಲ್ಲಿ 10 ಬಂದೂಕು ಕಿಂಡಿಗಳವೆ.
- 3 ರಿಂದ 4ನೇ ಬುರುಜು ನಡುವಣ ಕೈಪಿಡಿ ಗೋಡೆಯಲ್ಲಿ 12 ಬಂದೂಕು ಕಿಂಡಿಗಳವೆ.
- 4 ರಿಂದ 5ನೇ ಬುರುಜು ನಡುವಣ ಕೈಪಿಡಿ ಗೋಡೆಯಲ್ಲಿ 12 ಬಂದೂಕು ಕಿಂಡಿಗಳು ಮತ್ತು 1ಒಳಭಾಗದ ಬಂದೂಕು ಕಿಂಡಿಯು ಹೊರಭಾಗದಲ್ಲಿ 4 ಕಿಂಡಿಗಳಾಗಿ ರಚನೆಯಾಗಿದೆ.
- 5 ರಿಂದ 6ನೇ ಬುರುಜುವಿನ ನಡುವಿನ ಕೈಪಿಡಿ ಗೋಡೆಯಲ್ಲಿ 10 ಬಂದೂಕು ಕಿಂಡಿಗಳು. 1 ಒಳಭಾಗದ ಬಂದೂಕು ಕಿಂಡಿ ಹೊರಭಾಗದಲ್ಲಿ 3 ಕಿಂಡಿಗಳಾಗಿ ಮತ್ತು 4 ಕಿಂಡಿಗಳಾಗಿ ರಚನೆಯಾಗಿದೆ.
- 6ನೇ ಬುರುಜುವಿನ ಮುಂಭಾಗದಲ್ಲಿರುವ ಬತೇರಿಯಲ್ಲಿ 4 ಬಂದೂಕು ಕಿಂಡಿಗಳವೆ.

**ಕೋಟೆಯ ದಕ್ಷಿಣ ಭಾಗದ ಬಂದೂಕು ಕಿಂಡಿಗಳು:**

ಕೋಟೆಯ ದಕ್ಷಿಣ ಭಾಗದ ಕೈಪಿಡಿ ಗೋಡೆ ಬತೇರಿಯಲ್ಲಿ ಒಳಭಾಗದ 1 ಕಿಂಡಿ ಹೊರಭಾಗದಲ್ಲಿ 2, 4, 5, 8 ಕಿಂಡಿಗಳಾಗಿ ರಚನೆಯಾಗಿದೆ.

- 1ನೇ ಬುರುಜುವಿನ ಮುಂಭಾಗದ ಸಮಾನಾಂತರ ಗೋಡೆಯಲ್ಲಿ 4 ಬಂದೂಕು ಕಿಂಡಿಗಳವೆ
- ಸಮಾನಾಂತರ ಗೋಡೆಯು ಬಲ ತಿರುವು ತೆಗೆದುಕೊಂಡು ಮುಂದುವರೆದ ಕೋಟೆ ಕೈಪಿಡಿ ಗೋಡೆಯಲ್ಲಿ 4 ಬಂದೂಕು ಕಿಂಡಿಗಳದ್ದು ಒಳಭಾಗದ 1 ಬಂದೂಕು ಕಿಂಡಿಯು

ಹೊರಭಾಗದಲ್ಲಿ 5 ಕಿಂಡಿಗಳಾಗಿ ರಚನೆಯಾಗಿದೆ. ವಿಶೇಷವೇನೆಂದರೆ ಈ ಕೋಟೆ ಕೈಪಿಡಿಯಲ್ಲಿ ಒಳಭಾಗದ 3 ಬಂದೂಕು ಕಿಂಡಿಗಳಲ್ಲಿ ಹೊರಭಾಗದಲ್ಲಿ 8 ಬಂದೂಕು ಕಿಂಡಿಗಳಾಗಿ ರಚನೆಯಾಗಿದೆ.

- 2ನೇ ಬುರುಜುವಿನಿಂದ 3ನೇ ಬುರುಜುವಿನ ಕೋಟೆ ಕೈಪಿಡಿ ಗೋಡೆಯಲ್ಲಿ 13 ಬಂದೂಕು ಕಿಂಡಿಗಳಿದ್ದು ಒಳಭಾಗದ 1 ಬಂದೂಕು ಕಿಂಡಿಯು ಹೊರಭಾಗದಲ್ಲಿ 4 ಕಿಂಡಿಗಳಾಗಿ ರಚನೆಯಾಗಿದೆ.
- 3ನೇ ಬುರುಜುವಿನಿಂದ 4ನೇ ಬುರುಜುವಿನವರೆಗೆ ಕೋಟೆ ಕೈಪಿಡಿ ಗೋಡೆಯಲ್ಲಿ ಮೇಲ್ಭಾಗ ಮತ್ತು ಕೆಳಭಾಗಗಳಲ್ಲಿ ಬಂದೂಕು ಕಿಂಡಿಗಳಿದ್ದು ಮೇಲ್ಭಾಗದಲ್ಲಿ ಒಳಭಾಗದ 4 ಕಿಂಡಿಗಳಲ್ಲಿ ಹೊರಭಾಗದಲ್ಲಿ 4 ಕಿಂಡಿಗಳ ರಚನೆಯಾಗಿದ್ದು ತಳಭಾಗದಲ್ಲಿ ಏಕ ಬಂದೂಕು ಕಿಂಡಿಗಳ ಸಂಖ್ಯೆ 37 ಆಗಿರುತ್ತದೆ.
- 4ರಿಂದ 5ನೇ ಬುರುಜು ನಡುವಣ ಕೋಟೆ ಕೈಪಿಡಿ ಗೋಡೆಯಲ್ಲಿ ಏಕ ಮತ್ತು ದ್ವಿ ಬಂದೂಕು ಕಿಂಡಿಗಳಿದ್ದು ತಳಭಾಗದಲ್ಲಿ 62 ಬಂದೂಕು ಕಿಂಡಿಗಳಿದ್ದರೆ, 5ನೇ ಬುರುಜುವಿನ ಗೋಡೆಯಲ್ಲಿ 3 ಬಂದೂಕು ಕಿಂಡಿಗಳಿವೆ
- 5ನೇ ಬುರುಜು ಮತ್ತು 6ನೇ ಬುರುಜು ನಡುವಣ ಕೋಟೆ ಕೈಪಿಡಿ ಗೋಡೆಯಲ್ಲಿ 83 ಏಕ ಬಂದೂಕು ಕಿಂಡಿಗಳು ಮತ್ತು ಬುರುಜುವಿನಲ್ಲಿ 9 ಕಿಂಡಿಗಳಿವೆ
- 6ನೇ ಬುರುಜುವಿನಿಂದ 7ನೇ ಬುರುಜುವಿನ ಕೋಟೆ ಕೈಪಿಡಿ ಗೋಡೆಯಲ್ಲಿ ಏಕ ಬಂದೂಕು ಕಿಂಡಿಗಳ ಸಂಖ್ಯೆ 72 ಮತ್ತು 7ನೇ ಬುರುಜುವಿನಲ್ಲಿ 19 ಏಕ ಬಂದೂಕು ಕಿಂಡಿಗಳಿವೆ.
- 7ನೇ ಬುರುಜುವಿನ ಮುಂಭಾಗದ ಉತ್ತರ ದಿಕ್ಕಿನ ಮುಂದುವರೆದ ಕೋಟೆ ಕೈಪಿಡಿ ಗೋಡೆಯಲ್ಲಿ ಉತ್ತಮ ಸ್ಥಿತಿಯಲ್ಲಿರುವ 39 ಬಂದೂಕು ಕಿಂಡಿಗಳು ಮತ್ತು 10 ಶಿಥಿಲ ಬಂದೂಕು ಕಿಂಡಿಗಳು ಕಂಡುಬರುತ್ತವೆ. ಕೋಟೆಯ ಉತ್ತರ ಭಾಗದ ಕೈಪಿಡಿಯಲ್ಲಿನ ಬಂದೂಕು ಕಿಂಡಿಗಳಿಗಿಂತ ದಕ್ಷಿಣ ಭಾಗದ ಕೋಟೆ ಕೈಪಿಡಿ ಗೋಡೆಯಲ್ಲಿ ಒಳಭಾಗದ ಒಂದು ಬಂದೂಕು ಕಿಂಡಿಯು ಹೊರಭಾಗದಲ್ಲಿ ಗರಿಷ್ಟ 8 ಕಿಂಡಿಗಳಾಗಿ ರಚನೆಯಾಗಿದೆ. ಕೋಟೆಯ ದಕ್ಷಿಣ ಭಾಗಕ್ಕೆ ಹೆಚ್ಚಿನ ಸುರಕ್ಷತೆ ನೀಡಲು ಈ ರೀತಿಯ ಕ್ರಮಗಳನ್ನು ತೆಗೆದುಕೊಂಡಿರುವ ಸಾಧ್ಯತೆಗಳು ಕಂಡು ಬರುತ್ತವೆ.[25]

ದೇವನಹಳ್ಳಿಯ ಕೋಟೆಯ ವಿಶೇಷತೆ ಏನೆಂದರೆ ಕೋಟೆಯ ಮೇಲ್ಭಾಗದ ಒಳ ಆವರಣದಲ್ಲಿ ಸ್ವಲ್ಪ ದೊಡ್ಡದಾದ ಒಂದು ಬಂದೂಕಿನ ಕಿಂಡಿ ಕಂಡರೂ ಅದು ಕೋಟೆಯ ಹೊರಭಾಗಕ್ಕೆ ಮೂರು ನಾಲ್ಕರಿಂದ ಐದು ಮತ್ತು ಆರು ಕಿಂಡಿಗಳನ್ನು ಸಂಪರ್ಕಿಸುವಂತೆ ಕಲೆ

ಯುದ್ಧ ನೀತಿಯ ಒಂದು ಸ್ವರೂಪವನ್ನು ಬಹಳ ಸ್ಪಷ್ಟವಾಗಿ ನಿರೂಪಿಸುತ್ತದೆ.ಕಲಾತ್ಮಕವಾಗಿ ಕೋಟೆಯ ರಚನೆಯ ಸಂದರ್ಭದಲ್ಲಿ ಇಂತಹ ವ್ಯೂಹ ರಚನೆ ಬಹಳ ಪ್ರಮುಖವಾದ ಅಂಶವಾಗಿದೆ.ಕೆಲವು ಕೋಟೆಗಳಲ್ಲಿ ಒಳಗಿನ ಒಂದು ಬಂದೂಕು ಕಿಂಡಿ ಕೋಟೆಯ ಹೊರಗೆ ಶತ್ರುಗಳ ಆಗಮನದ ಕಡೆಗೆ ಬಂದೂಕು ಅಳವಡಿಸಲು ಮೂರು ರಂಧ್ರಗಳಿರುವುದು ಸಾಮಾನ್ಯ.ಆದರೆ ದೇವನಹಳ್ಳಿಯ ಈ ಕೋಟೆಯ ಗೋಡೆಯ ಮೇಲ್ಭಾಗದಲ್ಲಿ ಒಂದು ಬಂದೂಕಿನ ಕಿಂಡಿಗೆ ಹೊರಗಡೆಗೆ ಅನೇಕ ಕಿಂಡಿಗಳನ್ನು ರಚಿಸಿ ಶತ್ರುಗಳು ಬರುವ ದಿಕ್ಕಿಗೆ ಬಂದೂಕನ್ನು ಬದಲಿಸಿ ಶತ್ರುಗಳನ್ನು ಹಿಮ್ಮೆಟ್ಟಿಸುವ ಅಥವಾ ಸಂಹರಿಸುವ ಈ ರಚನೆ ಬಹಳ ವಿಶೇಷವಾಗಿದೆ.[26]

**2 ಸಮಾನಾಂತರ ಗೋಡೆಗಳು:**

ಕೋಟೆಯ ಉತ್ತರ ದಿಕ್ಕಿನ ಕಡೆ 1ನೇ ಬುರುಜಿಗೆ ಎದುರಾಗಿ ಉದ್ದವಾದ ಗೋಡೆಯನ್ನು ನಿರ್ಮಿಸಿದ್ದು ಈ ಗೋಡೆಗೆ ಹೊಂದಿಕೊಂಡಂತೆ ಕೋಟೆ ಗೋಡೆಯು ಎಡತಿರುವು ತೆಗೆದುಕೊಂಡು ಮುಂದುವರೆದಿದೆ. ಕೋಟೆಯ ದಕ್ಷಿಣ ಕಡೆ 1ನೇ ಬುರುಜುವಿಗೆ ಎದುರಾಗಿ ಉದ್ದವಾದ ಗೋಡೆಯನ್ನು ನಿರ್ಮಿಸಿದ್ದು ಈ ಗೋಡೆಗೆ ಹೊಂದಿಕೊಂಡಂತೆ ಕೋಟೆ ಗೋಡೆಯು ಬಲ ತಿರುವು ತೆಗೆದುಕೊಂಡು ಮುಂದುವರೆದಿದೆ. 2 ಸಮಾನಾಂತರ ಗೋಡೆಗಳ ವಿಸ್ತೀರ್ಣವು ಸುಮಾರು 130 ಅಡಿ ಉದ್ದವಾಗಿದ್ದು 2 ಗೋಡೆಗಳು 'L' ಆಕಾರದಲ್ಲಿ ಮುಂದುವರೆದಿದ್ದು ಉತ್ತರ ದಿಕ್ಕಿನ ಸಮಾನಾಂತರ ಗೋಡೆಯ ಕೆಳಭಾಗದಲ್ಲಿ ತುರ್ತುಪರಿಸ್ಥಿತಿಯಲ್ಲಿ ಉಪಯೋಗಿಸುವ ಒಂದು ಚಿಕ್ಕ ಬಾಗಿಲಿದೆ.

**ಪಥಗಳು:** ಕೋಟೆಯ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ರಸ್ತೆಯ ಮಾದರಿಯ ಪಥಗಳು ಕೋಟೆಗೆ ಹೊಂದಿಕೊಂಡಂತೆ ಒಳಭಾಗದಲ್ಲಿ ನಿರ್ಮಾಣವಾಗಿವೆ. ಈ ಪಥಗಳನ್ನು ಮಣ್ಣಿನಿಂದ ನಿರ್ಮಿಸಿದ್ದು ಅವುಗಳ ಪಾರ್ಶ್ವದಲ್ಲಿ ಕಲ್ಲಿನಿಂದ ತಡೆ ಗೋಡೆಯನ್ನು ನಿರ್ಮಿಸಲಾಗಿದೆ.(ಚಿ.ಸಂ.146) ತಳಭಾಗದಿಂದ ರಸ್ತೆಗೆ ಹತ್ತಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದ್ದು ರಸ್ತೆ ಮಾದರಿಯ ಪಥವನ್ನು ಮಣ್ಣಿನಿಂದ ನಿರ್ಮಿಸಲಾಗಿದ್ದು ಯಥೇಚ್ಛ ಪ್ರಮಾಣದಲ್ಲಿ ಮಣ್ಣನ್ನು ಬಳಸಲಾಗಿದೆ. ದೇವನಹಳ್ಳಿ ಕೋಟೆಯ ನಿರ್ಮಾಣದಲ್ಲಿ ಮಣ್ಣಿನ ಅವಶ್ಯಕತೆ ಕಂಡುಬಂದಿದ್ದರಿಂದ ಮಣ್ಣನ್ನು ಕೋಟೆಯ ಉತ್ತರ ದಿಕ್ಕಿನಲ್ಲಿರುವ ಚಿಕ್ಕಕೆರೆಯಿಂದ ತಂದಿರಬಹುದು ಅಥವಾ ಅಲ್ಲಿನ ಮಣ್ಣನ್ನು ತೆಗೆದು ಚಿಕ್ಕ ಕೆರೆಯನ್ನು ನಿರ್ಮಿಸಿರುವ ಸಾಧ್ಯತೆಗಳು ಕಂಡುಬರುತ್ತವೆ.

**ಉತ್ತರ ದಿಕ್ಕಿನ ಪಥ**: ಈ ಪಥವು ಉತ್ತರ ಭಾಗದಲ್ಲಿ ನೀರುಬಾಗಿಲು ಆಂಜನೇಯ ಸ್ವಾಮಿ ದೇವಾಲಯದ ಪಕ್ಕದಲ್ಲಿರುವ ಮೆಟ್ಟಿಲುಗಳಿಂದ ಪ್ರಾರಂಭವಾಗಿ ಬತೇರಿ ತನಕ ವ್ಯಾಪಿಸಿದ್ದು, ಪಥವು 2 ಹಂತಗಳಲ್ಲಿ ನಿರ್ಮಾಣವಾಗಿದೆ. ಕೆಳಹಂತವು ಅಡಿಪಾಯದಿಂದ ಪ್ರಾರಂಭವಾಗಿ 2ನೇ ಪಥಕ್ಕೆ ತಾಗುತ್ತದೆ. ಈ ಪಥವು ಪಾರ್ಶ್ವದ ಗೋಡೆಯು ಕಲ್ಲು ತಡೆಗೋಡೆಯಿಂದ ನಿರ್ಮಿಸಲ್ಪಟ್ಟಿದ್ದು ಕಲ್ಲುಗಳ ಸಂದಿಯಲ್ಲಿ ಗಾರೆಯನ್ನು ಬಳಸಲಾಗಿದೆ. ಕಲ್ಲುಗಳ ಪಾರ್ಶ್ವ ಗೋಡೆಯು ಪಿರಮಿಡ್ಡಿನ ಆಕೃತಿಯಲ್ಲಿ ನಿರ್ಮಾಣವಾಗಿದ್ದು ಅಡಿಪಾಯದಿಂದ ಪಥಕ್ಕೆ ತಲುಪಲು ಮತ್ತು ಇಳಿಯಲು 3 ಕಡೆ ಮೆಟ್ಟಿಲುಗಳ ವ್ಯವಸ್ಥೆಯಿದೆ, ಬತೇರಿ ಪಶ್ಚಿಮ ದಿಕ್ಕಿಗೆ 16 ಮೆಟ್ಟಿಲುಗಳಿವೆ, ಕೆಳಹಂತದ ಪಥದಲ್ಲಿ 2 ಶಿಲ್ಪಗಳು ಕಂಡುಬಂದಿದ್ದು ಅವುಗಳಲ್ಲಿ ಒಂದು ಶಿಲ್ಪವು ಭಗ್ನವಾಗಿದೆ. ಈ ಪಥವು ಅಡಿಪಾಯದಿಂದ 16 ಅಡಿ ಎತ್ತರದಲ್ಲಿ ನಿರ್ಮಾಣವಾಗಿದ್ದು ಇದರ ಅಗಲವು ಕ್ರಮವಾಗಿ 12 ಮತ್ತು 14 ಅಡಿಗಳಾಗಿರುತ್ತವೆ.

2ನೇ ಹಂತದ ಪಥವು ಕೆಳಹಂತದ ಪಥಕ್ಕಿಂತ ಪಕ್ಕದಲ್ಲಿ ಮೇಲ್ಭಾಗದಲ್ಲಿ ನಿರ್ಮಾಣವಾಗಿದ್ದು ಪಥದ ಪಾರ್ಶ್ವಗೋಡೆಯು ಕಲ್ಲುಗಳಿಂದ ನಿರ್ಮಾಣವಾಗಿದ್ದು ಕೆಲವು ಕಲ್ಲುಗಳಲ್ಲಿ ಉಬ್ಬು ಶಿಲ್ಪಗಳಿದ್ದು ಸ್ಪಷ್ಟವಾಗಿ ಕಂಡು ಬರುತ್ತಿಲ್ಲ. ಈ ಪಥವು ಉತ್ತರ ದಿಕ್ಕಿನ ನೀರುಬಾಗಿಲು ಆಂಜನೇಯ ಸ್ವಾಮಿ ದೇವಾಲಯದಿಂದ ಪ್ರಾರಂಭವಾಗಿ ಬತೇರಿ ತನಕ ವ್ಯಾಪಿಸಿದ್ದು ಈ ಪಥವು 7 ಅಡಿ ಎತ್ತರ ಮತ್ತು 13 ಅಡಿ ಅಗಲವನ್ನು ಹೊಂದಿದೆ. 2 ಸಮಾನಾಂತರ ಪಥಗಳ ಉದ್ದವು 330 ಮೀ. ಅಥವಾ 1100 ಅಡಿಗಳಾಗಿರುತ್ತದೆ.[27]

**ದಕ್ಷಿಣ ದಿಕ್ಕಿನ ಪಥ**: ದಕ್ಷಿಣ ದಿಕ್ಕಿನ ಪಥವು ಒಂದೇ ಹಂತದಲ್ಲಿದ್ದು ದಕ್ಷಿಣ ಭಾಗದಲ್ಲಿರುವ ಮೆಟ್ಟಿಲುಗಳಿಂದ ಪ್ರಾರಂಭವಾಗಿ 7ನೇ ಬುರುಜು ತನಕ ವ್ಯಾಪಿಸಿದ್ದು ಈ ಪಥವು 1 ರಿಂದ 3ನೇ ಬುರುಜುವರೆಗೂ ಉತ್ತಮವಾಗಿದ್ದು, 4ನೇ ಬುರುಜುವಿನಿಂದ 7ನೇ ಬುರುಜುವರೆಗಿನ ಪಥವು ಶಿಥಿಲವಾಗಿದ್ದು ಪಥದಲ್ಲಿ ಕುರುಚಲು ಗಿಡಗಳು ಮತ್ತು ಗಿಡಗಂಟೆಗಳು ಬೆಳೆದಿವೆ. ಈ ಪಥಕ್ಕೂ ಕೂಡ ಪಾರ್ಶ್ವದಲ್ಲಿ ಕಲ್ಲಿನ ತಡೆಗೋಡೆ ನಿರ್ಮಿಸಲಾಗಿದೆ. ಈ ಮಣ್ಣಿನ ಪಥದ ಅಗಲ ಸುಮಾರು 28 ಅಡಿಗಳು ಆಗಿರುತ್ತದೆ.

**ನೀರಿನ ದೋಣಿಗಳು**: ಕೋಟೆಯ ಮೇಲೆ ಮತ್ತು ರಸ್ತೆಯ ಮಾದರಿಯ ಪಥದ ಮೇಲೆ ಬಿದ್ದ ನೀರು ಸರಾಗವಾಗಿ ಕೆಳಕ್ಕೆ ಹರಿದು ಹೋಗಲು ನೀರಿನ ದೋಣಿಗಳನ್ನು ಪಥದ ಪಾರ್ಶ್ವ ಕಲ್ಲು ಗೋಡೆಯಲ್ಲಿ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಉತ್ತರ ದಿಕ್ಕಿನಲ್ಲಿರುವ ಕೆಳಹಂತದ ಪಥದ ಪಾರ್ಶ್ವಗೋಡೆಯಲ್ಲಿ ಒಂದು ಕಡೆ ನೀರಿನ ದೋಣಿ ಮತ್ತು ದಕ್ಷಿಣ ಭಾಗದ ಪಥದ ಪಾರ್ಶ್ವಗೋಡೆಯಲ್ಲಿ 4 ಕಡೆ ನೀರಿನ ದೋಣಿಗಳು ನಿರ್ಮಾಣಗೊಂಡಿವೆ. ಉತ್ತರ ಭಾಗದ

ನೀರಿನ ದೋಣಿಯು ಸುಸ್ಥಿತಿಯಲ್ಲಿದ್ದು ದಕ್ಷಿಣ ಭಾಗದ ನೀರಿನ ದೋಣಿಗಳಲ್ಲಿ ಎರಡು ಸುಸ್ಥಿತಿಯಲ್ಲಿದ್ದು ಇನ್ನುಳಿದ ಎರಡು ದುಸ್ಥಿತಿಯಲ್ಲಿವೆ. (ಚಿ.ಸಂ.147)

**ಕಂದಕ:** ಕೋಟೆಯ ಸುತ್ತಲೂ ಕಂದಕ ಇರುವುದು ಕಂಡುಬರುತ್ತದೆ. ಆದರೆ ಪ್ರಸ್ತುತ ಕಂದಕವು ಕೆಲವು ಭಾಗಗಳಲ್ಲಿ ಗೋಚರಿಸಿದರೂ ಸರಿಯಾದ ನಿರ್ವಹಣೆ ಇಲ್ಲದೇ ಗಿಡ ಗಂಟೆಗಳು ಬೆಳೆದುಕೊಂಡು ಕಂದಕದ ಅಸ್ಥಿತ್ವವೇ ಇರಲಿಲ್ಲವೆಂಬಂತಾಗಿದೆ. ಕೋಟೆಯ ಸಂರಕ್ಷಣಾ ಸಂದರ್ಭದಲ್ಲೂ ಸಹ ಕಂದಕಗಳನ್ನು ಸ್ವಚ್ಛಗೊಳಿಸಿರುವಂತೆ ಕಂಡುಬರುವುದಿಲ್ಲ.[28]

**ಕೋಟೆಯ ಹೊರಭಾಗದ ಭಿತ್ತಿಯಲ್ಲಿನ ಶಿಲ್ಪಗಳು:** ಕೋಟೆಯ ಉತ್ತರ ದಿಕ್ಕಿನ ಭಿತ್ತಿಯಲ್ಲಿ ಉಬ್ಬು ಶಿಲ್ಪಗಳು ಕಂಡುಬಂದಿದ್ದು ಅವುಗಳಲ್ಲಿ

**ಕೀರ್ತಿಮುಖ:** ಇದು ಎರಡನೆ ಬುರುಜಿನ ಹೊರಭಾಗದಲ್ಲಿ ಕಂಡುಬಂದಿದ್ದು ಚಿಕ್ಕಕೆರೆಗೆ ಎದುರಾಗಿ ಇರುವ ಈ ಬುರುಜಿನಲ್ಲಿ ಕೋಟೆಯ ಮೇಲಿನಿಂದ ಕೆಳಗಡೆ 10ನೇ ಸಾಲಿನ ಮಧ್ಯಭಾಗದಲ್ಲಿ ಕಲ್ಲಿನ ಮೇಲೆ ಕೀರ್ತಿಮುಖ ಶಿಲ್ಪವಿದೆ. (ಚಿ.ಸಂ.148) ವಿಜಯನಗರ ಕಾಲದಲ್ಲಿ ಕೀರ್ತಿಮುಖ ಶಿಲ್ಪಗಳ ಬಳಕೆಯು ಹೆಚ್ಚಾಗಿ ಬಳಕೆಗೆ ಬಂದಿತು. ಸಾಮಾನ್ಯವಾಗಿ ಕೋಟೆಗೆ ಯಾರ ದೃಷ್ಟಿಯು ತಗುಲಬಾರದೆಂದು ಈ ರೀತಿಯ ಶಿಲ್ಪವನ್ನು ನಿರ್ಮಿಸಲಾಗುತ್ತಿತ್ತು ಎಂದು ಸ್ಥಳೀಯರು ಮಾಹಿತಿ ನೀಡಿರುತ್ತಾರೆ. ಸಾಮಾನ್ಯವಾಗಿ ದೇವಾಲಯಗಳ ಶಿಲ್ಪಗಳ ಪ್ರಭಾವಳಿಯ ಮಧ್ಯಭಾಗದಲ್ಲಿ ಗೋಡಿಶಿಲ್ಪಗಳ ಪ್ರಭಾವಳಿಗಳ ಮಧ್ಯಭಾಗದಲ್ಲಿ ಅಥವಾ ಭಿತ್ತಿಗಳಲ್ಲಿ ಕೀರ್ತಿಮುಖಗಳನ್ನು ಉಬ್ಬು ಕೆತ್ತನೆಯಲ್ಲಿ ಕೆತ್ತಿರುತ್ತಾರೆ. ಅಂದರೆ ಧಾರ್ಮಿಕ ಕಟ್ಟಡಗಳ ಈ ಕೆತ್ತನೆ ರಕ್ಷಣಾ ವಾಸ್ತುಶಿಲ್ಪದಲ್ಲಿ ಈ ರೀತಿ ಕೀರ್ತಿಮುಖ ಕಂಡುಬಂದಿರುವುದು ವಿಶೇಷವಾಗಿದೆ.

**ಟಗರು ಕಾಳಗ:** 3ನೇ ಬುರುಜುವಿನ ಹೊರಭಾಗದಲ್ಲಿ ಇಟ್ಟಿಗೆ ಮತ್ತು ಗಾರೆಯ ಕೈಪಿಡಿಯಲ್ಲಿ ಟಗರು ಕಾಳಗದಗಾರೆ ಶಿಲ್ಪವಿದ್ದು ಈ ಶಿಲ್ಪದಲ್ಲಿ ಎರಡು ಟಗರುಗಳು ಪರಸ್ಪರ ಕಾದಾಡುತ್ತಿರುವಂತೆ ಚಿತ್ರಿಸಲಾಗಿದೆ. (ಚಿ.ಸಂ.149) ಈ ಶಿಲ್ಪವು ಸ್ಪರ್ಧೆ ಮತ್ತು ಪ್ರತಿಸ್ಪರ್ಧೆಯನ್ನು ಬಿಂಬಿಸುತ್ತದೆ. ಟಗರು ಕಾಳಗವು ಬಲಿದಾನ ಸಂಕೇತವಾಗಿದ್ದು ದೇವನಹಳ್ಳಿ ಮೂಲತಃ ಕುಸ್ತಿ ಮತ್ತು ಜಟ್ಟಿ ಕಾಳಗಗಳಿಗೆ ಹೆಸರಾಗಿದ್ದು ಇದನ್ನು ಟಗರು ಕಾಳಗದ ಮೂಲಕ ಬಿಂಬಿಸಲಾಗಿದೆ. ಅನೇಕ ಸಂದರ್ಭಗಳಲ್ಲಿ ಟಗರು ಕಾಳಗ ದಕ್ಷಿಣ ಭಾರತದ ಒಂದು ಜನಪದ ಕ್ರೀಡೆಯಂತೆ ವಾರ್ಷಿಕ ವಿಶೇಷ ಸಂದರ್ಭಗಳಲ್ಲಿ ನಡೆದುಕೊಂಡು ಬಂದಿದ್ದು ಇಲ್ಲಿ ಗಾರೆ ಶಿಲ್ಪದಲ್ಲಿ ಮಾಡಿರುವುದು ವಿಶೇಷವಾಗಿದೆ.

**ನವಿಲು:** ಮೂರನೇ ಬುರುಜುವಿನ ಹೊರಭಾಗದಲ್ಲಿ ಇಟ್ಟಿಗೆ ಮತ್ತು ಗಾರೆಯ ಕೈಪಿಡಿಯಲ್ಲಿ ಗಾರೆಯ ನವಿಲು ಶಿಲ್ಪವಿದ್ದು ಇದು ಅಸ್ಪಷ್ಟವಾಗಿದ್ದು ಶಿಥಿಲಾವಾಗಿರುವಂತೆ ಕಂಡುಬರುತ್ತದೆ.

**ಕೀರ್ತಿಮುಖ (ಸಿಂಹಮುಖ);** ಇದು ಗಾರೆ ಶಿಲ್ಪವಾಗಿದ್ದು ಮೂರನೆ ಬುರುಜುವಿನ ಹೊರಭಾಗದಲ್ಲಿ ಕೋಟೆಯ ಮೇಲ್ಭಾಗದ ಇಟ್ಟಿಗೆ ಮತ್ತು ಗಾರೆ ಕೈಪಿಡಿಯಲ್ಲಿ ಕಂಡುಬಂದಿದ್ದು, ಇದು ಗಾರೆ ಶಿಲ್ಪವಾಗಿದ್ದು, ಕುಳಿತಿರುವ ಸಿಂಹವಾಗಿದ್ದು ಈ ಶಿಲ್ಪವು ನಾಯಕತ್ವ ಮತ್ತು ರಾಜಗಾಂಭೀರ್ಯದ ಸಂಕೇತವಾಗಿದೆ. ಸಾಮಾನ್ಯವಾಗಿ ಕೋಟೆಗೆ ಯಾರ ದೃಷ್ಟಿಯು ತಗುಲಬಾರದೆಂದು ಈ ರೀತಿಯ ಶಿಲ್ಪವನ್ನು ನಿರ್ಮಿಸಲಾಗುತ್ತಿತ್ತು ಎಂದು ಸ್ಥಳಿಯರು ಮಾಹಿತಿ ನೀಡಿರುತ್ತಾರೆ.

**ಆಂಜನೇಯ ಶಿಲ್ಪ:** ಒಳಭಾಗದ ಕೋಟೆಯ ಭಿತ್ತಿಯಲ್ಲಿ ಮೂರನೆ ಬುರುಜಿಗೆ ಎದುರಾಗಿರುವ ರಸ್ತೆಯ ಮಾದರಿಯ ಪಥದ ಕಲ್ಲಿನ ಪಾರ್ಶ್ವಗೋಡೆಯ ಕಲ್ಲಿನಲ್ಲಿ ಆಂಜನೇಯ ಶಿಲ್ಪವಿದ್ದು ಈ ಶಿಲ್ಪವು ಕುಳಿತು ಕೈಮುಗಿಯುತ್ತಿರುವ ಭಂಗಿಯಲ್ಲಿದೆ. (ಚಿ.ಸಂ.150) ಸಾಮಾನ್ಯವಾಗಿ ಆಂಜನೇಯನು ರಕ್ಷಣೆ, ಶೌರ್ಯ, ಸ್ವಾಮಿನಿಷ್ಠೆಯ ಸಂಕೇತವಾಗಿದ್ದು ವಿಜಯನಗರ ಆಳ್ವಿಕೆಯ ಕಾಲದಲ್ಲಿ ಆಂಜನೇಯ ಶಿಲ್ಪಗಳಿಗೆ ಮತ್ತು ದೇವಾಲಯಗಳಿಗೆ ಹೆಚ್ಚು ಒತ್ತನ್ನು ಕೊಡಲಾಗಿತ್ತು ಎಂಬ ಅಂಶವು ಗೋಚರಿಸಲ್ಪಡುತ್ತದೆ.[29] ದೇವನಹಳ್ಳಿಯ ಕೋಟೆಯನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು ಸಂರಕ್ಷಿತ ಸ್ಮಾರಕವೆಂದು ಘೋಷಿಸಿದೆ.[30]

**ಜೀರ್ಣೋದ್ಧಾರ:** ಕೋಟೆಯು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಸುಪರ್ದಿಯಲ್ಲಿದ್ದು ಇತ್ತೀಚಿನ ವರ್ಷಗಳಲ್ಲಿ ಇಲಾಖೆ ಕೋಟೆಯ ಒಳ ಆವರಣದಲ್ಲಿ ಪಶ್ಚಿಮ ದಿಕ್ಕಿನಲ್ಲಿ ದಿಡ್ಡಿ ಬಾಗಿಲಿನ ಎರಡು ಪಾರ್ಶ್ವದಲ್ಲಿನ ಕಲ್ಲಿನ ವೇದಿಕೆಯನ್ನು ಕೋಟೆಯ ಹೊರ ಭಾಗದಲ್ಲಿ ಕೋಟೆಯ ರಕ್ಷಣೆಗಾಗಿ ಸುಮಾರು ಐದು ಅಡಿ ಎತ್ತರದ ಕಬ್ಬಿಣದ ರಕ್ಷಣ ಗೋಡೆಯನ್ನು ನಿರ್ಮಿಸಿದೆ. ಆದರೆ ದೇವನಹಳ್ಳಿಯ ಕೋಟೆಯ ಸಂರಕ್ಷಣೆ ಮತ್ತು ನಿರ್ವಹಣೆ ಸಮರ್ಪಕವಾಗಿಲ್ಲವೆಂದೇ ಹೇಳಬಹುದು.

**ಆವತಿ ಗ್ರಾಮದ ಕೋಟೆ:**

ಆವತಿ ಗ್ರಾಮವು ಬೆಂಗಳೂರು-ಹೈದರಾಬಾದ್ ರಸ್ತೆ, ರಾಷ್ಟ್ರೀಯ ಹೆದ್ದಾರಿ ಸಂಖ್ಯೆ-7ರಲ್ಲಿದ್ದು ದೇವನಹಳ್ಳಿಯಿಂದ ಸುಮಾರು 4 ಕಿ.ಮೀ. ದೂರದಲ್ಲಿದ್ದು, ಆವತಿ ಗ್ರಾಮಕ್ಕೆ ಹೊಂದಿಕೊಂಡಂತೆ ಬಿಳಿ ಗ್ರಾನೈಟ್ ಶಿಲೆಗಳ ಬೆಟ್ಟಗಳ ಸಾಲಿದ್ದು ಆವತಿಯು ನಾಡಪ್ರಭುಗಳ ಮೂಲಸ್ಥಾನ ಎಂದು ಹೆಸರಾಗಿದ್ದು ಆವತಿ ನಾಡಪ್ರಭುಗಳು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಸಣ್ಣ ಪಾಳೆಯಪಟ್ಟಾಗಿ ಆಳ್ವಿಕೆ ನಡೆಸಿದರು. ಶಾಸನಗಳು ಆವತಿಯನ್ನು ಆವತಿಯೂರ್, ಆಹುತಿ ಎಂದು ಉಲ್ಲೇಖಿಸಿವೆ.

**ಉಲ್ಲೇಖ:** ಆವತಿಯಲ್ಲಿ ಕೋಟೆ ನಿರ್ಮಾಣ ಮಾಡಿದುದರ ಬಗ್ಗೆ ದೇವೇಗೌಡನಹಳ್ಳಿ ಕೈಫಿಯತ್ತು (ನಂ.22, ಸಂಪುಟ-287) ನಲ್ಲಿ ಉಲ್ಲೇಖವಿದೆ. ಅದರ ಸಾರಾಂಶವೇನೆಂದರೆ ಪೂರ್ವ ದೇಶದಿಂದಾ ಯೇಳು ಬಂಡಿಯವರು ಪಂಚನದಿಕ್ಷೇತ್ರ ಪಂಚಕ್ರೋಶ ಮಧ್ಯದಲ್ಲಿ ದಂಡಕಾರಣ್ಯದಲ್ಲಿ ನೆಲಸಿ ಅಡವಿಯಲ್ಲಿ ದೇವೇಗೌಡಯಂಬುವನು ವಂದು ಹುಡ್ಯ ಕಟ್ಟಿಕೊಂಡು ಯಿರುತ್ತಾಯಿದ್ದದ್ದರಿಂದಾ ಅಲ್ಲಿ ಮುಂದೆ ಕೋಟೆಗೆ ಪ್ರಯತ್ನ ಮಾಡೋದಕ್ಕೆ ಉದ್ಯುಕ್ತರಾಗಿಯಿದ್ದರು. ಯಿೀ ಕೋಟೆ ಕಟ್ಟುವಾಗ್ಯೆ ರಣ ಭೈರೆಗವುಡರು ಮುಹೂರ್ತ ನಿಶ್ಚಯಮಾಡಿದ ಸಂವತ್ಸರಕ್ಕೆ ಚೈತು ಶುದ್ಧ 15 ಗುರುವಾರ ಚಿತ್ತಾ ನಕ್ಷತ್ರದ ಉದಯದ 5 ಘಳಿಗೆ ವೃಷಭ ಲಗ್ನದಲ್ಲಿ ಹೋರೆದ್ರೆ ಕಾಣನವಾಶ ದ್ವಾದಶಾಂಶ. ತ್ರೀಕಾಂಶ ಯಿೀ ಶುಭ ಷವರ್ಗ ಸರಿಯಾಗಿ ಗಾಚಯದಿಂದಾ ವಾಸ್ತುಪ್ರಕಾರ ಶಂಕು ಸ್ಥಾಪನೆ ಮಾಡಿ ಚಂದ್ರಮೌಳೇಶ್ವರ ಸ್ವಾಮಿಯವರ ಸನ್ನಿಧಾನಕ್ಕೆ ಒಂದು ಫಲಪುಷ್ಪ ಸಮರ್ಪಣೆ ಮಾಡಿದರು.[31]

ಆವತಿ ಕೋಟೆಯು ಒಂದು ಗಿರಿದುರ್ಗ ಕೋಟೆಯಾಗಿದ್ದು, ಆವತಿ ನಾಡಪ್ರಭು ರಣಭೈರೇಗೌಡನು ಬಂಡೆಯ ಜಾಗದಲ್ಲಿ ಒಂದು ಕೋಟೆಯನ್ನು ನಿರ್ಮಿಸಿದನು. ಆದರೆ ಈಗ ಈ ಕೋಟೆ ಸಂಪೂರ್ಣವಾಗಿ ನಾಶವಾಗಿದ್ದು, ಅವಶೇಷಗಳ ರೂಪದಲ್ಲಿ ಕೋಟೆಯ ಒಂದು ಸಾಲಿನ ಗೋಡೆಯು ಬೆಟ್ಟದ ತುದಿಯಲ್ಲಿ ಮಾತ್ರ ಉಳಿದುಕೊಂಡು ಬಂದಿದೆ.ಆವತಿ ಬೆಟ್ಟ ತನ್ನ ಸುತ್ತಲಿನ ಪ್ರದೇಶದಿಂದ ಸುಮಾರು 70 ರಿಂದ 75 ಮೀ.ಎತ್ತರದಲ್ಲಿದ್ದು, ದೊಡ್ಡದೊಡ್ಡ ಬಂಡೆಗಳ ರಾಶಿಯಿಂದ ಕೂಡಿದ್ದು ಸಮತಟ್ಟಾದ ಪ್ರದೇಶವು ಕಂಡುಬರುವುದಿಲ್ಲ. ನೈಸರ್ಗಿಕ ರಕ್ಷಣೆಯನ್ನು ಬಂಡೆಗಲ್ಲುಗಳು ಒದಗಿಸುತ್ತಿದ್ದರಿಂದ ಕೋಟೆ ಗೋಡೆಯನ್ನು ಬೆಟ್ಟದ ಸುತ್ತಲೂ ನಿರ್ಮಿಸುವ ಬದಲು ಅಲ್ಲಲ್ಲಿ ಬಂಡೆಗಲ್ಲುಗಳ ಮಧ್ಯದಲ್ಲಿ ನಿರ್ಮಿಸಿದ್ದಾರೆ. ಆದ್ದರಿಂದ ಅನ್ಯ ಗಿರಿದುರ್ಗಗಳಂತೆ ಮತ್ತು ಬೇರೆ ಕೋಟೆಗಳಂತೆ ಎತ್ತರವಾಗಿ ಗೋಚರಿಸುವಂತಹ ಕೋಟೆ ಗೋಡೆಗಳಿಂದ ಕೂಡಿದ ಕೋಟೆ ಇದಾಗಿಲ್ಲ.[32]

ಬೆಟ್ಟದ ಪಾದದಲ್ಲಿರುವ ಆವತಿ ಊರನ್ನು ಒಳಗೊಂಡಂತೆ ನಿರ್ಮಿಸಲಾಗಿದ್ದ ಈ ಕೋಟೆಯನ್ನು ಪ್ರವೇಶಿಸಲು ದ್ವಾರವನ್ನು ಊರಿನ ಆರಂಭದಲ್ಲಿ ನಿರ್ಮಿಸಲಾಗಿತ್ತೆಂದು ಕ್ಷೇತ್ರಕಾರ್ಯದಿಂದ ಹಾಗೂ ಸ್ಥಳೀಯರಿಂದ ತಿಳಿದುಬರುತ್ತದೆ ಎರಡು ಬಂಡೆಗಲ್ಲುಗಳನ್ನು ಬಳಸಿಕೊಂಡು ಕೋಟೆಯ ದ್ವಾರವನ್ನು ನಿರ್ಮಿಸಲಾಗಿತ್ತೆಂದು ತಿಳಿದುಬರುತ್ತದೆ. ಈ ಎರಡು ಬಂಡೆಗಲ್ಲುಗಳ ಪಕ್ಕದಲ್ಲಿ ಹಳೆಯದಾದ ಅವಶೇಷಗಳು ಈಗಲೂ ಕಂಡುಬರುತ್ತವೆ. (ಚಿ.ಸಂ.151) ಆವತಿ ಕೋಟೆಯು ಚಿಕ್ಕ ಗೋಡೆಗಳಿಂದ ಮತ್ತು ಬಂಡೆಕಲ್ಲುಗಳನ್ನು ಬಳಸಿಕೊಂಡು ಕೊತ್ತಲಗಳಿಂದ ನಿರ್ಮಿಸಲಾಗಿತ್ತು ಎಂದು ದೊರೆಯುವ ಅವಶೇಷಗಳಿಂದ ತಿಳಿಯಬಹುದು. ಈ

ಕೋಟೆಗೆ ನೈಸರ್ಗಿಕ ರಕ್ಷಣೆಯನ್ನು ಬೆಟ್ಟ ಮತ್ತು ಬಂಡೆಗಲ್ಲುಗಳು ನೀಡಿದ್ದರಿಂದ ಕೋಟೆಯು ಒಂದು ಸಾಂಕೇತಿಕ ರೂಪದಲ್ಲಿತ್ತು ಎಂದು ಗೋಚರವಾಗುತ್ತದೆ. ನಾಡಪ್ರಭುಗಳ ಪ್ರಾರಂಭಿಕ ಹಂತದ ಕೋಟೆ ಇದಾಗಿದ್ದು ಅವರು ತಮಗೆ ದೊರೆತ ಸಂಪನ್ಮೂಲಗಳನ್ನು ಬಳಸಿಕೊಂಡು ಕೋಟೆಯನ್ನು ನಿರ್ಮಿಸಿರುವ ಸಾಧ್ಯತೆ ಇದೆ.ಕೋಟೆಯ ಕುಂಬೆ ಈಗ ನಾಶವಾಗಿದ್ದು ಇತ್ತೀಚಿನ ದಿನಗಳಲ್ಲಿ ಬೆಟ್ಟಕ್ಕೆ ಹೋಗಲು ರಸ್ತೆ ಕಾಮಗಾರಿ ನಡೆಯುತ್ತಿರುವುದರಿಂದ ಬಂಡೆಗಲ್ಲುಗಳನ್ನು ಸಡಿಲಿಸಲಾಗಿದೆ ಮತ್ತು ಹಳೆಯ ಕೋಟೆಯ ಅವಶೇಷಗಳು ಶಿಥಿಲಗೊಂಡಿವೆ.

**ಕುಂದಾಣ ಕೋಟೆ**

ಕುಂದಾಣ ಗ್ರಾಮವು ದೇವನಹಳ್ಳಿಯಿಂದ ಸುಮಾರು 10 ಕಿ.ಮೀ ದೂರದಲ್ಲಿದ್ದು ಹೋಬಳಿ ಕೇಂದ್ರವಾಗಿದೆ. ಈ ಗ್ರಾಮವು 13ನೇ ಶತಮಾನದಲ್ಲಿ ಹೊಯ್ಸಳ ಅರಸ ರಾಮನಾಥನ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.[33]

**ಕುಂದಾಣ ಉಲ್ಲೇಖ:** ಶಾಸನಗಳಲ್ಲಿ ಕುಂದಾಣದ ಬಗ್ಗೆ ಉಲ್ಲೇಖವಿದ್ದು ಹೊಸಕೋಟೆಯ ಶಾಸನ ಸಂಖ್ಯೆ 162 ಕುಂದಾಣಯೆಂದು ಉಲ್ಲೇಖಿಸಿದೆ.[34] ನೆಲಮಂಗಲ ಶಾಸನದಲ್ಲಿ ಶ್ರೀಕುಂದಾಣಿ ಮಹದೇವ ವೊಡೆಯರ್, ಮಗ ಚನ್ನವೀರ ವೊಡಯ ಅವರ ಮಗ ವೀರಂಣೊಡೆಯ ವೊಡೆಯ ಮಾಡಿಸಿದ ಸೋಪಾನ ಎಂದು ಶಿವಗಂಗೆ ಬೆಟ್ಟಕ್ಕೆ ಸೋಪಾನ ಮಾಡಿಸಿದುದರ ಬಗ್ಗೆ ಉಲ್ಲೇಖಿಸಿದೆ.[35] ತುಮಕೂರು ಶಾಸನಗಳಲ್ಲಿ ಕುಂದಣಿ ಎಂದು ಉಲ್ಲೇಖಿಸಲ್ಪಟ್ಟಿದೆ.[36]

ಕುಂದಾಣ ಗ್ರಾಮದ ಬಳಿ 200 ಅಡಿ ಎತ್ತರದ (ಸಮುದ್ರ ಮಟ್ಟದಿಂದ 3305 ಅಡಿ ಎತ್ತರ) ಚಪ್ಪಟೆಯಾಕಾರದ ಬಂಡೆ ಇದೆ.[37] ಈ ಬೆಟ್ಟದ ಪಶ್ಚಿಮ ದಕ್ಷಿಣ ಮತ್ತು ಉತ್ತರಭಾಗ ಕಡಿದಾಗಿದ್ದು ಪೂರ್ವಭಾಗ ಇಳಿಜಾರಾಗಿದ್ದು ಪೂರ್ವದ ಕಾಲುದಾರಿಯಿಂದ ಬಂಡೆಯ ಮೇಲೆ ಪ್ರವೇಶಿಸಬಹುದು. ಕುಂದಾಣ ಬೆಟ್ಟದ ಮೇಲೆ ಕೋಟೆ ಇದ್ದು ಕ್ರಿ.ಶ.1291ರ ಶಾಸನವು ಇದನ್ನು ಕುಂದವೂರ ದುರ್ಗ ಎಂದು ಉಲ್ಲೇಖಿಸಿದೆ.[38] ಬಂಡೆಯ ಮೇಲೆ ವಿಜಯನಗರೋತ್ತರ ಮತ್ತು ಪಾಳೆಯಗಾರರ ಕಾಲದೆಂದು ಹೇಳಲಾಗುವ ಕಲ್ಲಿನ ದ್ವಾರಗಳನ್ನು ಹೊಂದಿರುವ ಕೋಟೆಯಿದೆ. (ಚಿ.ಸಂ.152) ಇಲ್ಲಿರುವ ಕೋಟೆಗೋಡೆಯ ತಳಭಾಗವು ದೊಡ್ಡ ಗಾತ್ರದ ಕಲ್ಲುಗಳನ್ನು ಹೊಂದಿದ್ದು ಅವು ಯಾವುದೇ ರೀತಿಯ ಗಾರೆ ಮತ್ತು ಸಿಮೆಂಟ್ ಬಳಕೆ ಮತ್ತು ಲೇಪನವನ್ನು ಹೊಂದಿಲ್ಲ. ಕೆಲವು ಗೋಡೆಯನ್ನು ಸಣ್ಣ ಗಾತ್ರದ ಕಲ್ಲುಗಳನ್ನು ಬಳಸಿಕೊಂಡು ಒಂದರ ಮೇಲೊಂದು ಜೋಡಿಸಿ ನಿರ್ಮಿಸಲಾಗಿದೆ. ಬಂಡೆ ಮೇಲಿನ ಪ್ರದೇಶವು 100 ಮೀ.ಉದ್ದ ಮತ್ತು 50 ಮೀ ಅಗಲವನ್ನು ಹೊಂದಿದ್ದು ಅಂಡಾಕಾರವಾಗಿದೆ. ಬಂಡೆಯ ಮೇಲೆ ಸ್ವಾಭಾವಿಕವಾದ

ಕಲ್ಲುಕೊಳ, ಪೂರ್ವಾಭಿಮುಖವಾಗಿರುವ ಚನ್ನರಾಯಸ್ವಾಮಿ ದೇವಾಲಯ ಪುರಾತನ ಕಾಲದ ಕಲ್ಲುಗಳಿಂದ ನಿರ್ಮಿಸಿದ ತಳಪಾಯಗಳು ಕಂಡುಬಂದಿದೆ. ಸುಮಾರು 13 ಅಡಿ ಎತ್ತರದ ಕಲ್ಲುಸ್ತಂಭ ಕಂಡುಬಂದಿದ್ದು ಕೆಳಭಾಗ ಚೌಕಾಕಾರ ಮತ್ತು ನಂತರ ಅಷ್ಟಕೋನಾಕೃತಿ ದಿಂಡನ್ನು ಹೊಂದಿದ್ದು ಮೇಲ್ಭಾಗ ವೃತ್ತಕಾರದಲ್ಲಿದೆ. (ಚಿ.ಸಂ.153) ಇಲ್ಲಿನ ಬಹುತೇಕ ಅವಶೇಷಗಳು ವಿಜಯನಗರೋತ್ತರ ಕಾಲಕ್ಕೆ ಸೇರಿದವು.

ಊರಿನ ಹೊರಭಾಗದಿಂದ ಕುಂದಾಣ ಬೆಟ್ಟ ಮತ್ತು ಕೋಟೆಯನ್ನು ಗಮನಿಸಿದರೆ, ಕುಂದಾಣ ಬೆಟ್ಟದ ಮೇಲೆ ಸುತ್ತಲೂ ಅಲ್ಲಲ್ಲಿ ಕಲ್ಲುಗಳ ಜೋಡಣೆಯು ಕಂಡುಬರುತ್ತದೆ. ಕುಂದಾಣ ಬೆಟ್ಟ ಮತ್ತು ಬೆಟ್ಟದ ಮೇಲಿನ ಕೋಟೆಯನ್ನು ಕೊಪ್ಪಲು ಕಡೆಯಿಂದ ಪ್ರವೇಶಿಸಬಹುದು.ಕುಂದಾಣ ಸುತ್ತಮುತ್ತಲೂ ಹಲವಾರು ಬಿಳಿಗ್ರಾನೈಟ್ ಬಂಡೆಗಳಿದ್ದು ಈ ಬಂಡೆಗಳ ಕಲ್ಲುಗಳಿಂದ ಬೆಟ್ಟದ ಮೇಲೆ ಕೋಟೆ ನಿರ್ಮಿಸಿರುವುದು ಕಂಡುಬರುತ್ತದೆ.[39]

**ಸ್ಮಾರಕಗಳು:**

**ಟಿಪ್ಪು ಹುಟ್ಟಿದ ಸ್ಮಾರಕ-ದೇವನಹಳ್ಳಿ:** ದೇವನಹಳ್ಳಿ ಟಿಪ್ಪು ಸುಲ್ತಾನನ ಜನ್ಮಸ್ಥಳವಾಗಿದ್ದು ಐತಿಹಾಸಿಕವಾಗಿ ಬಹಳ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿನ ಟಿಪ್ಪು ಸ್ಮಾರಕವು ದೇವನಹಳ್ಳಿಯ ಟಿಪ್ಪು ಸುಲ್ತಾನ ಜನ್ಮಸ್ಥಳ ರಸ್ತೆಯಲ್ಲಿದ್ದು ಕೋಟೆಗೆ ನೈರುತ್ಯದಲ್ಲಿ ಸುಮಾರು 150 ಮೀ.ದೂರದಲ್ಲಿರುವ ಈ ಸ್ಥಳವು ಟಿಪ್ಪುವಿನ ಜನ್ಮಸ್ಥಳವೆಂದು ಸಾಂಪ್ರದಾಯಿಕವಾಗಿ ಗುರುತಿಸಲ್ಪಟ್ಟಿದೆ. ಪೂರ್ವಾಭಿ ಮುಖವಾಗಿ ದ್ವಾರವಿರುವ ಕಲ್ಲುಗಳಿಂದ ನಿರ್ಮಿತವಾದ ಸುತ್ತಲೂ ಗೋಡೆಗಳ ಮಧ್ಯದಲ್ಲಿ ಚೌಕಕಾರದ ಜಗುಲಿಯ ಮೇಲಿರುವ 4 ಕಂಬಗಳ ಕಮಾನಿನ ಕಟ್ಟಡ ಮಾತ್ರ ಈಗ ಉಳಿದಿರುವ ಅವಶೇಷ [40]ಆದರೆ ಈ ಜನ್ಮಸ್ಥಳದ ಭಾಗದಲ್ಲಿ ಟಿಪ್ಪು ವಂಶಸ್ಥರು ವಾಸವಾಗಿದ್ದ ಮನೆಗಳಾಗಲೀ ಅಥವಾ ಹವೇಲಿಗಳಾಗಲೀ ಕಂಡುಬರುವುದಿಲ್ಲವಾದರೂ ಸಂಶೋಧನಾ ಕಾರ್ಯ ಕೈಗೊಂಡಾಗ ಈ ಮಂಟಪದ ಹಿಂಭಾಗದಲ್ಲಿ ಪುರಾತತ್ವ ಇಲಾಖೆಯವರು ಉತ್ಖನನ ನಡೆಸಿದರೆ ಐತಿಹಾಸಿಕ ಮಾಹಿತಿ ದೊರಕಬಹುದು. ಟಿಪ್ಪುವಿನ ಜನ್ಮದ ಜ್ಞಾಪಕಾರ್ಥವಾಗಿಪ್ರಾಕಾರವನ್ನು ನಿರ್ಮಿಸಿ ಅದರ ಮಧ್ಯಭಾಗದಲ್ಲಿ ಕಮಾನುಗಳಿಂದ ಕೂಡಿದ ಕಟ್ಟಡವನ್ನು ನಿರ್ಮಿಸಲಾಗಿದ್ದು, ಇದು ನಾಲ್ಕು ಕಂಬಗಳ ತೆರೆದ ಕಮಾನಿನ ಕಟ್ಟಡವಾಗಿದ್ದು, ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿದ್ದು ಚೌಕಕಾರವಾಗಿದೆ. ಕಮಾನಿನ ಕಟ್ಟಡದ ಒಳಗಡೆ ಟಿಪ್ಪುವಿನ ಜನ್ಮವರ್ಷವನ್ನು ನಮೂದಿಸಿರುವ ಶಿಲಾವಿನ್ಯಾಸವಿದೆ. ಇದರ ವಿಸ್ತೀರ್ಣವು ಉದ್ದ 2.6 ಅಡಿ ಮತ್ತು ಅಗಲವು 2.6 ಅಡಿಗಳಾಗಿರುತ್ತವೆ. ಕಮಾನು ಕಟ್ಟಡ ವಿಸ್ತೀರ್ಣವು ಉದ್ದ 10 ಅಡಿಗಳು ಮತ್ತು ಅಗಲ 10

ಅಡಿಗಳಂದ ಕೂಡಿದ್ದು ಮತ್ತು ಎತ್ತರವು ಸುಮಾರು 15 ಅಡಿಗಳಷ್ಟಿದೆ. ಈ ಕಮಾನಿನ ಕಟ್ಟಡವನ್ನು ಬಿಳಿ ಗ್ರಾನೈಟ್ ಶಿಲೆ ಮತ್ತು ಗಾರೆಯಿಂದ ನಿರ್ಮಿಸಲಾಗಿದ್ದು ಈ ಸ್ಮಾರಕ ಜಾಗದ ಒಟ್ಟು ವಿಸ್ತೀರ್ಣವು ಉತ್ತರ ದಕ್ಷಿಣ 45 ಅಡಿಗಳು ಮತ್ತು ಪೂರ್ವಪಶ್ಚಿಮ 34.5 ಅಡಿಗಳಷ್ಟು ಸುತ್ತಳತೆಯನ್ನು ಹೊಂದಿದ್ದು ಸ್ಮಾರಕ ಜಾಗದ ನೆಲಹಾಸಿಗೆಗೆ ಕಲ್ಲುಚಪ್ಪಡಿಗಳನ್ನು ಹಾಕಲಾಗಿದ್ದು ಕಟ್ಟಡದ ಸುತ್ತಲೂ ಅದೇ ಗ್ರಾನೈಟ್ ಶಿಲೆಯಿಂದಕಲ್ಲು ಗೋಡೆ ನಿರ್ಮಿಸಲಾಗಿದೆ. (ಚಿ.ಸಂ.154) ಪ್ರಸ್ತುತ ಈ ಸ್ಮಾರಕವನ್ನು ಕೇಂದ್ರ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿತ ಸ್ಮಾರಕವೆಂದು ಘೋಷಿಸಿದೆ.[41] ಟಿಪ್ಪುವಿನ ಜನ್ಮಸ್ಥಳವನ್ನು ಗುರ್ತಿಸಲು ಒಂದು ಶಿಲಾಫಲಕ ಮತ್ತು ಬಿಳಿಗ್ರಾನೈಟ್ ಶಿಲೆಯ ಮಂಟಪ ಹಾಗೂ ಅದೇ ಕಲ್ಲನ್ನು ನೆಲಹಾಸಿಗೆ ಬಳಸಿರುವುದು ಮತ್ತು ಮೇ, 4, 1799ರ ಟಿಪ್ಪು ಮರಣ ಹೊಂದಿದ ಶ್ರೀರಂಗಪಟ್ಟಣದಲ್ಲೂ ಸಹ ಅದೇ ಮಾದರಿಯ ಬಿಳಿ ಗ್ರಾನೈಟ್ ಶಿಲೆಯ ನೆಲ ಹಾಸು ಮತ್ತು ಸುತ್ತಲೂ ಗೋಡೆ ನಿರ್ಮಿಸಿ ಮಂಟಪವನ್ನು ಕಟ್ಟಿ ಶಿಲಾಫಲಕವನ್ನು ಅಳವಡಿಸಿ ಅನಾಥವಾಗಿ ಬಿದ್ದಿದ ಒಬ್ಬ ಧೀಮಂತ ಸುಲ್ತಾನನ ಕತೆಯ ಅಂತ್ಯ ಒಂದು ವಿಪರ್ಯಾಸವೇ ಸರಿ. ಈ ಎರಡು ಸ್ಮಾರಕಗಳು ಕೇಂದ್ರ ಪುರಾತತ್ವ ಸರ್ವೇಕ್ಷಣಾಲಯದವರ ಅಧೀನದಲ್ಲಿದ್ದು ಶ್ರೀರಂಗಪಟ್ಟಣದಲ್ಲಿ ಟಿಪ್ಪುವಿನ ಸತ್ತ ದೇಹ ಸಿಕ್ಕಿದ ಸ್ಥಳದ ಅನತಿ ದೂರದಲ್ಲಿ ಟಿಪ್ಪುವಿನ ಅರಮನೆ ಹಾಗೂ ಕಾವೇರಿ ನದಿಗೆ ಹಾಕಿರುವ ವಾಟರ್ ಗೇಟ್‌ಗಳು ಹತ್ತಿರದಲ್ಲಿದ್ದರೂ ಜನ್ಮಸ್ಥಳದ ಸುತ್ತಮುತ್ತ ಇಂತಹ ಸ್ಮಾರಕಗಳು ಕಂಡುಬಾರದೇ ಇರುವುದು ಹೆಚ್ಚಿನ ಸಂಶೋಧನೆಗೆ ಒಳಪಡಿಸಬೇಕಿರುವುದನ್ನು ಸೂಚಿಸುತ್ತದೆ.

**ದ್ವಾರಮಂಟಪ:** ಬೆಂಗಳೂರಿನ ನಾಡಪ್ರಭು ಕೆಂಪೇಗೌಡನ ಕಾಲದ ದ್ವಾರಮಂಟಪ ಮಾದರಿಯಲ್ಲಿಯೇ, ದೇವನಹಳ್ಳಿ ತಾಲೂಕಿನ ವಿವಿಧ ಕಡೆ ದ್ವಾರಮಂಟಪಗಳು ಕಂಡುಬಂದಿದ್ದು ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ದ್ವಾರ ಮಂಟಪ-ಕಾರಹಳ್ಳಿ:** ಕಾರಹಳ್ಳಿಯಿಂದ ಕೆರೆಗೆ ಹೋಗುವ ಮಾರ್ಗದಲ್ಲಿ ವಿಜಯನಗರೋತ್ತರ ಕಾಲಕ್ಕೆ ಸೇರಿದ ನಾಲ್ಕು ಕಂಬಗಳು ಮತ್ತು ಶಿಖರವನ್ನು ಹೊಂದಿರುವ ದ್ವಾರಮಂಟಪವು ಕಂಡುಬಂದಿದ್ದು (ಚಿ.ಸಂ.155) ಸುಮಾರು ಎರಡೂವರೆ ಅಡಿಗಳ ಮೇಲೆ ರಚನೆಯಾಗಿದ್ದು ವೇದಿಕೆಯ ಕೆಳಭಾಗದಲ್ಲಿ ಆನೆಗಳ ಸಾಲಿನ ಉಬ್ಬು ಶಿಲ್ಪಗಳಿವೆ. ಈ ಗೋಪುರವು ನಾಲ್ಕು ಕಂಬಗಳನ್ನು ಹೊಂದಿದ್ದು ಕಂಬಗಳು ಚೌಕ, ಅಷ್ಟ, ಷೋಡಶ ಮಾದರಿಯನ್ನು ಮತ್ತು ಬೋದಿಗೆಯನ್ನು ಹೊಂದಿವೆ. ಮಂಟಪದ ಮಧ್ಯಭಾಗದಲ್ಲಿ ಕಪ್ಪು ಗ್ರಾನೈಟ್ ಶಿಲೆಯಲ್ಲಿ ರಚನೆಯಾಗಿರುವ ನಂದಿ ಶಿಲ್ಪವಿದೆ. ಕಂಬಗಳ ಎತ್ತರ ಸುಮಾರು 6 ಅಡಿಗಳಾಗಿದ್ದು 5 ಅಡಿ ಸುತ್ತಳತೆಯನ್ನು ಹೊಂದಿದೆ.ಕಂಬಗಳಲ್ಲಿ ನಂದಿ, ಆನೆ, ಗಣೇಶ, ಕುಂಭ, ನರ್ತಕಿ, ಕಮಲ,

ಗಂಡಬೇರುಂಡುಗಳ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಭುವನೇಶ್ವರಿಯು ಚೌಕಾಕಾರವಾಗಿದ್ದು ಕಮಲದ ಮೊಗ್ಗಿನ ರಚನೆಯಿಂದ ಕೂಡಿದ್ದು ಅದರ ಸುತ್ತಲೂ ಬಳ್ಳಿಸುರುಳಿಗಳವೆ. ಈ ದ್ವಾರಮಂಟಪವು ಗೋಪುರವನ್ನು ಹೊಂದಿದ್ದು ಗೋಪುರವನ್ನು ಸುಟ್ಟ ಇಟ್ಟಿಗೆ ಮತ್ತು ಸುಣ್ಣ ಗಾರೆಯಿಂದ ನಿರ್ಮಿಸಲಾಗಿದೆ. ಈ ದ್ವಾರಮಂಟಪದ ಎತ್ತರವು ಸುಮಾರು 20 ಅಡಿಗಳಾಗಿರುತ್ತದೆ.ಈ ಮಂಟಪವನ್ನು ವಿಜಯನಗರ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದ್ದು, ಮಂಟಪವು ಸುಮಾರು 4 ಅಡಿಗಳ ವೇದಿಕೆಯನ್ನು ಹೊಂದಿದೆ, ಈ ಮಂಟಪವು ಗೋಪುರವನ್ನು ಹೊಂದಿದ್ದು ಇಟ್ಟಿಗೆ ಕಚ್ಚುಗಾರೆಯಿಂದ ನಿರ್ಮಿಸಲ್ಪಟ್ಟಿದೆ..[42]

**ಕೊಯಿರಾ ಗ್ರಾಮದ ದ್ವಾರಗೋಪುರ:** ಈ ದ್ವಾರಗೋಪುರ ಕೊಯಿರಾ ಗ್ರಾಮದ ಊರಿನ ಹೊರ ವಲಯದಲ್ಲಿ ಬಂಡೆಯ ಮೇಲಿದ್ದು ಎರಡೂವರೆ ಅಡಿ ಎತ್ತರದ ವೇದಿಕೆ ಮೇಲೆ ಮಂಟಪವನ್ನು ನಿರ್ಮಿಸಲಾಗಿದ್ದು ಈ ಮಂಟಪವು 4 ಕಂಬಗಳಿಂದ ಕೂಡಿದ್ದು ಕಂಬಗಳ ಎತ್ತರವು ಸುಮಾರು ಮೂರುವರೆ ಅಡಿಗಳಷ್ಟು ಚೌಕ ಅಷ್ಟ ಮಾದರಿ ಮತ್ತು ಸರಳವಾದ ಬೋದಿಗೆಯನ್ನು ಹೊಂದಿವೆ. ಕಂಬಗಳಲ್ಲಿ ಲಜ್ಜೆಗೌರಿ, ನರ್ತಕಿ ಮುಂತಾದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಕಂಬಗಳ ಮೇಲೆ ಪಿರಿಮಿಡ್ಡಿನಾಕೃತಿಯ ಗೋಪುರವಿದ್ದು ಗೋಪುರವು ಚೌಕಕಾರವಾಗಿದ್ದು ಗೋಪುರದ ಮಧ್ಯಭಾಗದಲ್ಲಿ ಪ್ರಸವ ಸ್ತ್ರೀಯ ಉಬ್ಬುಶಿಲ್ಪವಿದೆ (ಚಿ.ಸಂ.156) ಈ ಮಂಟಪವು ಮಾಗಡಿ ತಾಲೂಕಿನ ಹಿರಿಯ ಕೆಂಪೇಗೌಡ ಸಮಾಧಿಯ ಮಂಟಪವನ್ನು ಹೋಲುತ್ತದೆ. ಈ ಮಂಟಪವನ್ನು ವಿಜಯನಗರೋತ್ತರ ಶೈಲಿಯಲ್ಲಿ ನಿರ್ಮಿಸಲಾಗಿದೆ.[43]

## ಅಡಿ ಟಿಪ್ಪಣಿಗಳು

1. ಸುಂಕಂ ಗೋವರ್ಧನ, ಕನ್ನಡ ನಾಡಿನ ಪ್ರಮುಖ ಕೋಟೆಗಳು, ಬೆಂಗಳೂರು, ಪುಟ ಸಂಖ್ಯೆ 1-2, 2012.
2. ಅದೇ, ಪು.ಸಂ.2-3.
3. ಅದೇ, ಪು.ಸಂ.4.
4. ಕೊಟ್ರೇಶ್,ಎಂ. ಬಳ್ಳಾರಿ ಜಿಲ್ಲೆಯ ಕೋಟೆಗಳು, ಕನ್ನಡ ವಿ.ವಿ. ಹಂಪಿ, ಪು.ಸಂ.21, 2011.
5. ಪುಟ್ಟಸ್ವಾಮಿ, ಬಿ.ಎಸ್.ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು, ಪು.ಸಂ.139-140.
6. ಕೊಟ್ರೇಶ್, ಎಂ, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕ.ವಿ.ವಿ.ಹಂಪಿ, ಪು.ಸಂ.22, 2011.
7. ಸುಂಕಂ ಗೋವರ್ಧನ, ಕನ್ನಡ ನಾಡಿನ ಪ್ರಮುಖ ಕೋಟೆಗಳು, ಬೆಂಗಳೂರು, ಪು.ಸಂ.5, 2012.
8. ಚನ್ನಬಸಪ್ಪ ಎಸ್ ಪಾಟೀಲ, ಕರ್ನಾಟಕ ಕೋಟೆಗಳು, ಸಂಪುಟ-1, ಕ.ವಿ.ವಿ. ಹಂಪಿ, ಪು.ಸಂ.4 ಮತ್ತು 5. 1999.
9. ಅದೇ, ಪು.ಸಂ.5.
10. ಅದೇ, ಪು.ಸಂ.5.
11. ಅರುಣಿ, ಎಸ್.ಕೆ,ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ ಶಿಲ್ಪಕಲೆ, ಪು.ಸಂ.73, 74, 75
12. ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವೃತ್ತ, ಬೆಂಗಳೂರು.
13. ಮೈಸೂರು ಗ್ಯಾಜೆಟಿಯರ್, ಪು.ಸಂ.158, 1930.
14. ಅರುಣಿ,ಎಸ್.ಕೆ,ಯಲಹಂಕ ನಾಡಪ್ರಭುಗಳ ವಾಸ್ತಯಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.75, 76, 77, 2007.
15. ಅದೇ, ಪು.ಸಂ.74.
16. ಚನ್ನಬಸಪ್ಪ ಎಸ್ ಪಾಟೀಲ. ಕರ್ನಾಟಕ ಕೋಟೆಗಳು, ಸಂಪುಟ, 1, ಕ.ವಿ.ವಿ. ಹಂಪಿ, ಪು.ಸಂ. 188, 1999.
17. ಅದೇ, ಪು.ಸಂ.188.
18. ಕ್ಷೇತ್ರಕಾರ್ಯ ವರದಿ ಆಧರಿಸಿ ಬರೆಯಲಾಗಿದೆ.
19. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ.284. 2009.
20. ಕ್ಷೇತ್ರಕಾರ್ಯ ವರದಿ ಆಧರಿಸಿ ಬರೆಯಲಾಗಿದೆ.
21. ಅದೇ,
22. ಅದೇ,

23. ಕೊಟ್ರೇಶ್. ಎಂ. ಬಳ್ಳಾರಿ ಜಿಲ್ಲೆಯ ಕೋಟೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.30–31, 2011.

24. ಕ್ಷೇತ್ರಕಾರ್ಯ ವರದಿ ಆಧರಿಸಿ ಬರೆಯಲಾಗಿದೆ

25. ಅದೇ,

26. ಅದೇ,

27. ಅದೇ,

28. ಅದೇ,

29. ಅದೇ,

30. ಭಾರತ ಗೆಜೆಟ್, ಮೈಸೂರು ರಾಜ್ಯ, ಬೆಂಗಳೂರು ಜಿಲ್ಲೆ, ಕ್ರಮಸಂಖ್ಯೆ 6, ನವೆಂಬರ್ 29, ನವದೆಹಲಿ, 1951.

31. ಪುಟ್ಟಸ್ವಾಮಿ,ಬಿ.ಎಸ್. ಯಲಹಂಕ ನಾಡ ಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು, 2011, ಪು.ಸಂ.140.

32. ಅರುಣಿ. ಎಸ್.ಕೆ. ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.40, 2007.

33. ಹಯವದನರಾವ್, ಸಿ. ಮೈಸೂರು ಗ್ಯಾಸೆಟಿಯರ್, ಪು.ಸಂ.194, 1930.

34. ಎ.ಕ.ಸಂ.9, ಎಚ್.ಟಿ. 162, ಕ್ರಿ.ಶ.1300.

35. ಎ.ಕ.ಸಂ.9, ಎನ್.ಎಲ್, 137.

36. ತುಮಕೂರು ಶಾಸನ ಸಂಖ್ಯೆ–68, ಕ್ರಿ.ಶ.1287, ಬೈರಸಂದ್ರ, ಶಾಸನ ಸಂಖ್ಯೆ–93, ಹರಳೂರು, ಕ್ರಿ.ಶ.1287.

37. ಎಂ.ಎ.ಆರ್,1935, ಪು.ಸಂ.50.

38. ರಾಜೇಂದ್ರಪ್ಪ ಎಸ್. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೋಟೆಗಳು, ಕನಕಸಿರಿ (ಸ್ಮರಣ ಸಂಚಿಕೆ) ಕನ್ನಡ ಸಾಹಿತ್ಯ ಪರಿಷತ್ತು, ಪು.ಸಂ.94.

39. ಕ್ಷೇತ್ರಕಾರ್ಯ ವರದಿ ಆಧರಿಸಿ ಬರೆಯಲಾಗಿದೆ.

40. ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು.

41. ಕ್ರಮ ಸಂಖ್ಯೆ, 7, ಮೈಸೂರು ರಾಜ್ಯ, ಬೆಂಗಳೂರು ಜಿಲ್ಲೆ, ಭಾರತ ಗ್ಯಾಸೆಟ್, ನವದೆಹಲಿ, ನವೆಂಬರ್ 29, 1951.

42. ಕ್ಷೇತ್ರಕಾರ್ಯ ವರದಿ ಆಧರಿಸಿ ಬರೆಯಲಾಗಿದೆ.

43. ಅದೇ,

## ಅಧ್ಯಾಯ-7

## ಶಿಲ್ಪಗಳು, ವೀರಗಲ್ಲು, ಮಾಸ್ತಿಗಲ್ಲುಗಳು ಮತ್ತು ಅಪ್ರಕಟಿತ ಶಾಸನಗಳು

**ಪೀಠಿಕೆ**:

ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಗಳಾದ ಮಾನಸಾರ, ಮನುಷ್ಯಾಲಯ ಚಂದ್ರಿಕ, ಅಂಶೋಬೋಧಿನಿ, ಸುಪ್ರಭೇದಾಗಮ, ವಾಸ್ತುವಿದ್ಯ, ಶಿಲ್ಪರತ್ನ, ಅಭಿಲಾಷತೀರ್ಥ ಚಿಂತಾಮಣಿ, ಸಮರಾಂಗಣ ಸೂತ್ರಧಾರ, ಮಯಮತ ಶಿಲ್ಪಶಾಸ್ತ್ರ, ಕಾಶ್ಯಪ ಶಿಲ್ಪಶಾಸ್ತ್ರ, ಅಂಶುಮದ್ಬೇದಾಗಮ, ವಾಸ್ತು ರತ್ನಾವಳಿ, ಪ್ರತಿಮಾ ಲಕ್ಷಣ, ಪ್ರತಿಮಾ ಮಾನ ಲಕ್ಷಣ, ರೂಪ ಮಂಡನ, ವಾಸ್ತುಮಂಡನ, ಬೃಹತ್‌ಸಂಹಿತ ಮುಂತಾದ ಗ್ರಂಥಗಳು ವಿವಿಧ ರೀತಿಯ ಶಿಲ್ಪಕಲೆಯ ಬಗ್ಗೆ ತಿಳಿಯಲು ಅತ್ಯಮೂಲ್ಯ ಗ್ರಂಥಗಳಾಗಿವೆ.

ಶಿಲ್ಪಶಾಸ್ತ್ರ ಮೂರ್ತಿಗಳ ರಚನೆಯನ್ನು ನಿರ್ದಿಷ್ಟವಾಗಿ ಮಾಡಲಾಗಿರುತ್ತದೆ. ಧ್ಯಾನದ ಮೂಲಕ ಮನಸ್ಸಿನಲ್ಲಿ ಮೂಡಿದ ಶಿಲ್ಪವನ್ನು ಭಾವಶಿಲ್ಪವೆನ್ನುವರು. ಶಿಲೆಯ ಆಯ್ಕೆಯಿಂದ ಹಿಡಿದು ಮೂರ್ತಿ ಪ್ರತಿಷ್ಠಾಪನೆವರೆಗಿನ ಶಾಸ್ತ್ರ ನಿಯಮಗಳನ್ನು ಹಲವಾರು ಮೂರ್ತಿ ವಿಜ್ಞಾನ ಗ್ರಂಥಗಳಲ್ಲಿ ವಿವರಿಸಲಾಗಿದೆ. ಅವುಗಳಲ್ಲಿ ಮಾನಸಾರ, ಮಯಮತ, ಸಮರಾಂಗಣ ಸೂತ್ರದಾರ 27 ಶೈವ ವೈಖಾನಸಾಗಮ, ವೈಷ್ಣವ, ಶಾಕ್ತ, ಜೈನ, ಬೌದ್ಧ, ಆಗಮಗಳು, ಪುರಾಣಗಳು ಪ್ರಮುಖವಾಗಿವೆ. ಮೂರ್ತಿಶಿಲ್ಪದಲ್ಲಿ ಗಮನಿಸಬೇಕಾದ ಮುಖ್ಯವಾದ ಮೂರು ಅಂಶಗಳೆಂದರೆ ಭಂಗಿ, ಮುದ್ರೆ ಮತ್ತು ಆಯುಧಗಳು.[1] ದೇವನಹಳ್ಳಿ ತಾಲೂಕಿನಲ್ಲಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದಿರುವ ಶಿಲ್ಪಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಭಿತ್ತಿಶಿಲ್ಪಗಳು-ಕಥಾನಕ ಶಿಲ್ಪಗಳು:** ಗೋಡೆಯ ಮೇಲೆ ರೂಪುಗೊಂಡ ಶಿಲ್ಪಗಳು, ಭಿತ್ತಿ ಶಿಲ್ಪಗಳು. ಭಿತ್ತಿ ಶಿಲ್ಪಗಳ ರಚನೆಯು ಅಲಂಕಾರಿಕ ದೃಷ್ಟಿಯಿಂದ ಮುಖ್ಯವೆನಿಸಿದ್ದು, ಬಿಡಿಶಿಲ್ಪವಾಗಿರಲೀ ಅಥವಾ ಉಬ್ಬುಶಿಲ್ಪವಾಗಿರಲೀ ವಾಸ್ತುಭಾಗದ ಸೌಂದರ್ಯವನ್ನು ಹೆಚ್ಚಿಸುವುದಲ್ಲದೇ ಖಾಲಿ ಇರುವ ಜಾಗಗಳನ್ನು ಕಲಾಕೃತಿಗಳಿಂದ ತುಂಬುವುದಕ್ಕೆ ಬಿಡಿಶಿಲ್ಪಗಳು ಇಲ್ಲವೇ ಕಥಾನಕ ಶಿಲ್ಪಗಳಿಗೆ ಪ್ರಾಮುಖ್ಯತೆ ನೀಡಲಾಗುತ್ತಿತ್ತು.

ದೀರ್ಘ ಕಥೆಗಳನ್ನು ಭಿತ್ತಿಯಲ್ಲಿ ಸಾಲಾಗಿ ಶಿಲ್ಪಪಟ್ಟಿಕೆಗಳ ರೂಪದಲ್ಲಿರುವುದನ್ನು ಕಥನ ಶಿಲ್ಪಗಳೆಂದು ಕರೆಯಲಾಗುತ್ತದೆ. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಕಾಲದಿಂದಲೂ ರಾಮಾಯಣ ಮತ್ತು ಮಹಾಭಾರತದ ಕಥಾನಕ ಶಿಲ್ಪಗಳನ್ನು ರಚಿಸುವ ಸಂಪ್ರದಾಯವನ್ನು ಕಾಣಬಹುದಾಗಿದೆ.ಇವು ಕಥೆಗಳನ್ನು ಭಿತ್ತಿರೂಪದಲ್ಲಿ ತಿಳಿಸುತ್ತವೆ. ನಂತರ ಹೊಯ್ಸಳರು ಮತ್ತು

ವಿಜಯನಗರ ದೇವಾಲಯಗಳ ಭಿತ್ತಿಯಲ್ಲಿ ಕಥಾನಕ ಶಿಲ್ಪಗಳ ರಚನೆಯ ಸಂಪ್ರದಾಯ ಮುಂದುವರೆಯಿತು. ಆವತಿ ನಾಡಪ್ರಭುಗಳ ಕಾಲದಲ್ಲಿ ಗಿರಿಜಾ ಕಲ್ಯಾಣದ ಕಥನ ಶಿಲ್ಪಗಳು ಪ್ರಾಮುಖ್ಯತೆ ಪಡೆದವು.ಶೈವ ಮತ್ತು ವೈಷ್ಣವ ಸಂಪ್ರದಾಯದಂತೆ ಕಥನ ಶಿಲ್ಪಗಳು ರಚನೆಯಾದವು.

**ರಾಮಾಯಣ, ಭಾಗವತ ಹಾಗೂ ನರಸಿಂಹ ಅವತಾರ ಶಿಲ್ಪಗಳು:** ರಾಮಾಯಣ ಶಿಲ್ಪಗಳನ್ನು ಯಂಬ್ರಹಳ್ಳಿ ತಿಮ್ಮರಾಯಸ್ವಾಮಿ ಮತ್ತು ದೇವನಹಳ್ಳಿಯ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದ ಭಿತ್ತಿಯಲ್ಲಿ ಕಂಡರಿಸಲಾಗಿದೆ. ದೇವನಹಳ್ಳಿ ಶ್ರೀವೇಣುಗೋಪಾಲಸ್ವಾಮಿ ದೇವಾಲಯದ ಭಿತ್ತಿಯಲ್ಲಿ ರಾಮಲಕ್ಷ್ಮಣ, ಸೀತಾಸ್ವಯಂವರ, ಶ್ರೀರಾಮಪಟ್ಟಾಭಿಷೇಕ ಮುಂತಾದ ಶಿಲ್ಪಗಳನ್ನು ಕಂಡರಿಸಲಾಗಿದೆ. (ಚಿ.ಸಂ.157) ಯಂಬ್ರಹಳ್ಳಿ ತಿಮ್ಮರಾಯಸ್ವಾಮಿ ದೇವಾಲಯದ ಭಿತ್ತಿಯಲ್ಲಿ ರಾಮ ಸುಗ್ರೀವರ ಭೇಟಿ, ವಾಲಿಯ ವಧೆ, (ಚಿ.ಸಂ.158) ನರಸಿಂಹ ಅವತಾರದ ಹಿರಣ್ಯ ಕಶ್ಯಪುವಿನ ಸಂಹಾರದ ಸನ್ನಿವೇಶ ಶಿಲ್ಪಗಳು, ಕೃಷ್ಣನ ಬಾಲ್ಯ ಲೀಲೆಗಳಾದ ಬೆಣ್ಣೆ ಕದಿಯುವುದು, ಗೋಪಿಕಾ ವಸ್ತ್ರಾಪಹರಣ ಮುಂತಾದ ಶಿಲ್ಪಗಳಿದ್ದು ನವರಂಗದ ಉತ್ತರ ದಿಕ್ಕಿನ ಭಿತ್ತಿಯಲ್ಲಿ ನರಸಿಂಹ ಹಿರಣ್ಯ ಕಶ್ಯಪುವನ್ನು ಸಂಹರಿಸುವ ಕಥಾನಕ ಮೂರು ಶಿಲ್ಪಗಳಿವೆ. ಅವುಗಳಲ್ಲಿ ಕಂಬದಿಂದ ನರಸಿಂಹ ಹೊರಬರುತ್ತಿರುವುದು, ಹಿರಣ್ಯ ಕಶ್ಯಪನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಹೊಟ್ಟೆಯನ್ನು ಬಗೆಯುತ್ತಿರುವುದು ಮತ್ತು ಕೊನೆಯದಾಗಿ ನರಸಿಂಹ ಲಕ್ಷ್ಮಿಯೊಂದಿಗೆ ಇರುವುದನ್ನು ಹಾಗೂ ಅವರ ಪಕ್ಕದಲ್ಲಿ ಪ್ರಹ್ಲಾದ ಮತ್ತು ಋಷಿ ವಂದಿಸುತ್ತಿರುವ ಶಿಲ್ಪಗಳು ಕಂಡುಬರುತ್ತವೆ. ಇದೇ ದೇವಾಲಯದ ಅರ್ಧಮಂಟಪದ ಪಶ್ಚಿಮ ಗೋಡೆಯ ಭಿತ್ತಿಯಲ್ಲಿ ಭಾಗವತ ಶಿಲ್ಪಗಳಾದ ವಿಷ್ಣುವಿನ ಅವತಾರಗಳಾದ ನರಸಿಂಹ, ತ್ರಿವಿಕ್ರಮ, ಗೋವರ್ಧನ, ಗಿರಿಧಾರಿ, ಕಾಳಿಂಗ ಮರ್ಧನ, ಕೂರ್ಮ ಅವತಾರ ಶಿಲ್ಪಗಳು ಮತ್ತು ಗರುಡವಾಹನದ ಮೇಲೆ ಕುಳಿತಿರುವ ವಿಷ್ಣುವಿನ ಶಿಲ್ಪಗಳಿವೆ.

**ಚೆಂಚುಲಕ್ಷ್ಮಿ ಶಿಲ್ಪ**: ನಾಡಪ್ರಭುಗಳ ಶಿಲ್ಪಗಳಲ್ಲಿ ಗುರುತಿಸಲ್ಪಡುವ ಜಾನಪದ ಕಥೆಯಿರುವ ಶಿಲ್ಪವೆಂದರೆ ಚೆಂಚುಲಕ್ಷ್ಮಿ. ಈ ಶಿಲ್ಪಕ್ಕೆ ಪ್ರಮುಖ ಉದಾಹರಣೆಯೆಂದರೆ ವೇಣುಗೋಪಾಲಸ್ವಾಮಿ ದೇವಾಲಯದ ನವರಂಗದ ಒಂದು ಕಂಬದಲ್ಲಿ ಚೆಂಚುಲಕ್ಷ್ಮಿಯ ಉಬ್ಬುಶಿಲ್ಪವಿದ್ದು ಚೆಂಚುಲಕ್ಷ್ಮಿ ಪಾದಕ್ಕೆ ನಾಟಿದ ಮುಳ್ಳನ್ನು ತೆಗೆಯುತ್ತಿರುವ ಪುರುಷಧಾರಿ ವಿಷ್ಣುವಿನ ಶಿಲ್ಪವಿದೆ. (ಚಿ.ಸಂ.159)

**ಲಜ್ಜೇಗೌರಿ ಶಿಲ್ಪಗಳು**: ದೇವನಹಳ್ಳಿ ವೇಣುಗೋಪಾಲಸ್ವಾಮಿ ದೇವಾಲಯದ ಮುಖ ಮಂಟಪದ ಕಂಬದ ಮೇಲೆ ಲಜ್ಜೇಗೌರಿ ಶಿಲ್ಪವಿದೆ. ಯಂಬ್ರಹಳ್ಳಿ ತಿಮ್ಮರಾಯಸ್ವಾಮಿ ದೇವಾಲಯದ ನವರಂಗದ ಕಂಬದಲ್ಲಿ ಲಜ್ಜೇಗೌರಿ ಶಿಲ್ಪವಿದ್ದು ಲಜ್ಜೆಗೌರಿ ಮೇಲೆ ನವಿಲು, ನಾಗರಹಾವು ಮತ್ತು

ಮೇಲ್ಭಾಗದಲ್ಲಿ ಗೋವಿನ ಶಿಲ್ಪವಿದೆ. ಲಜ್ಜೇಗೌರಿಯು ಮುಖಮುಚ್ಚಿಕೊಳ್ಳದೆ ತನ್ನ ಎಡಗೈಯನ್ನು ತನ್ನ ತೊಡೆಯ ಸಂದಿಯಲ್ಲಿ ಸೇರಿಸಿಕೊಂಡಿರುವುದು ವಿಶೇಷವಾಗಿದೆ.

**ವ್ಯಕ್ತಿ ಶಿಲ್ಪಗಳು-ನಾಡಪ್ರಭು ಮತ್ತು ಪಾಳೆಗಾರರ ಶಿಲ್ಪಗಳು**:ಹೊಸ ದೇವಾಲಯಗಳ ನಿರ್ಮಾಣ ಅಥವಾ ಅವುಗಳ ಜೀರ್ಣೋದ್ಧಾರದ ಸಮಯದಲ್ಲಿ ಇಂತಹ ಶಿಲ್ಪಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ತಾವು ಸೇವೆ ಸಲ್ಲಿಸಿದ ಸೂಚಕವಾಗಿ ದೇವರ ಎದುರಿನ ಕಂಬಗಳ ಮೇಲೆ ಉಬ್ಬು ಶಿಲ್ಪಗಳನ್ನು ಅಥವಾ ಲೋಹದಲ್ಲಿ ನಮಸ್ಕರಿಸುತ್ತಾ ನಿಂತಿರುವ ಶಿಲ್ಪಗಳನ್ನು ಹಾಕಿಸುತ್ತಿದ್ದರು. ಇಂತಹ ಶಿಲ್ಪಗಳು ಅವರ ಪೋಷಾಕು, ಕಿರೀಟ, ಆಭರಣಗಳು ಉದ್ದನೆಯ ಖಡ್ಗ ಧರಿಸಿ ರಾಜಗಾಂಭೀರ್ಯದಲ್ಲಿ ಇರುವಂತೆ ಕಂಡುಬರುತ್ತದೆ. ಯಂಬ್ರಹಳ್ಳಿ ತಿಮ್ಮರಾಯಸ್ವಾಮಿ ದೇವಾಲಯದ ನವರಂಗದ ಮಂಟಪದ ಕಂಬದಲ್ಲಿ ನಾಡಪ್ರಭುವಿನ ಶಿಲ್ಪವಿದೆ. ಬೊಮ್ಮವಾರ ಸುಂದರೇಶ್ವರ ದೇವಾಲಯದ ನವರಂಗದ ಗೋಪುರದ ಮೇಲೆ ನಾಡಪ್ರಭು ಮತ್ತು ಪಾಳೆಗಾರರ ಗಾರೆ ಶಿಲ್ಪಗಳನ್ನು ಕಂಡರಿಸಲಾಗಿದೆ.

**ಗಾರೆ ಶಿಲ್ಪಗಳು:** ವಿವಿಧ ಮೂರ್ತಿಗಳನ್ನು ಗಾರೆಯಿಂದ ರಚಿಸುವ ಕಲೆ ಪ್ರಾಚೀನ ಕಾಲದಿಂದಲೂ ಅಸ್ಥಿತ್ವದಲ್ಲಿದ್ದು ಗಾರೆಯನ್ನು ವಾಸ್ತು ಮತ್ತು ಮುರ್ತಿಶಿಲ್ಪಗಳ ರಚನೆಯಲ್ಲಿ ಬಳಸಿರುವುದನ್ನು ಕಾಣಬಹುದು. ಹಂಪಿಯ ಬಹುತೇಕ ಶಿಲ್ಪಗಳನ್ನು ಗಾರೆಯಲ್ಲಿ ನಿರ್ಮಿಸಲಾಗಿದೆ. ಬಿಜಾಪುರ ಗುಲ್ಬರ್ಗಾ ಮತ್ತು ಬೀದರ್‌ನಲ್ಲಿನ ಮುಸ್ಲಿಂರ ಸ್ಮಾರಕಗಳಲ್ಲಿ ಪ್ರಧಾನವಾಗಿ ಗಾರೆ ಬಳಸಯಾಗಿದೆ. ದೇವಾಲಯಗಳಲ್ಲಿಯ ಕೈಪಿಡಿ ಗೋಡೆಯ ಗೂಡುಗಳಲ್ಲಿ ಹಾಗೂ ಮಹಾದ್ವಾರದ ಗೋಪುರಗಳಲ್ಲಿ ಗಾರೆ ಮೂರ್ತಿಶಿಲ್ಪಗಳನ್ನು ರಚಿಸಲಾಗಿದೆ. ಗಾರೆಯನ್ನು ಸುಣ್ಣ, ಮರಳು, ನೀರು, ಬೆಲ್ಲ, ಕೋಳಿಮೊಟ್ಟೆ ಅದರ ಸಿಪ್ಪೆ, ಲೋಳೆರಸ, ಕಪ್ಪೆ ಚಿಪ್ಪು, ಕಪಿಚೂರು, ಅಂಟು ಪದಾರ್ಥಗಳನ್ನು ಸೇರಿಸಿ ಸಿದ್ಧಪಡಿಸಲಾಗುತ್ತದೆ.[2] ದೇವಾಲಯಗಳ ಹೊರಗೋಡೆಯ ದೇವಕೋಷ್ಠ ಮತ್ತು ವಿಮಾನಗಳ ದೇವಕೋಷ್ಠಗಳಲ್ಲಿ ಗಾರೆ ಶಿಲ್ಪಗಳನ್ನು ಕಾಣಬಹುದು.ಇವು ಉಬ್ಬುಶಿಲ್ಪಗಳಾಗಿದ್ದು ಕಲಾವಿದರು ತಮ್ಮ ಸೂಕ್ಷ್ಮ ಕಲೆಯನ್ನು ಗಾರೆ ಶಿಲ್ಪಗಳ ರಚನೆಯ ಮುಖಾಂತರ ವ್ಯಕ್ತಪಡಿಸುತ್ತಿದ್ದರು. ನಾಡಪ್ರಭುಗಳ ಕಾಲದಲ್ಲಿ ಗಾರೆಶಿಲ್ಪಗಳಿಗೆ ಹೆಚ್ಚಿನ ಆದ್ಯತೆ ನೀಡಿದಂತೆ ಕಂಡುಬರುತ್ತದೆ. ದೇವಾಲಯಗಳ ವಿಮಾನ ಮತ್ತು ಕೋಷ್ಟಗಳ ರಚನೆಯಲ್ಲಿ ದೇವಾನುದೇವತೆಗಳ ಶಿಲ್ಪಗಳನ್ನು ಗಾರೆಯಲ್ಲಿ ನಿರ್ಮಿಸಲಾಗಿದೆ. (ಚಿ.ಸಂ.160) ಈ ಗಾರೆಶಿಲ್ಪಗಳ ಬಾಳಿಕೆ ಕಡಿಮೆಯಾಗಿದ್ದು ಇವುಗಳನ್ನು ಜೀರ್ಣೋದ್ದಾರ ಸಂದರ್ಭದಲ್ಲಿ ಕಾಲಕಾಲಕ್ಕೆ ಸರಿಯಾದ ರೀತಿಯಲ್ಲಿ ಸಂರಕ್ಷಣ ಕಾರ್ಯ ನಡೆಯುತ್ತಿಲ್ಲ.

**ಉಬ್ಬುಶಿಲ್ಪಗಳು**: ಇವು ಸಾಮಾನ್ಯವಾಗಿ ಕಂಬಗಳ ಮತ್ತು ಭಿತ್ತಿಗಳ ಮೇಲೆ ಕಂಡರಿಸಲ್ಪಟ್ಟಿದ್ದು ಅವುಗಳಲ್ಲಿ ಮುಖ್ಯವಾಗಿ,

**ಯೋಗನರಸಿಂಹ ಶಿಲ್ಪ**: ಈ ಶಿಲ್ಪವು ದೇವನಹಳ್ಳಿ ಶ್ರೀವೇಣುಗೋಪಾಲಸ್ವಾಮಿ ದೇವಾಲಯದ ಮುಖಮಂಟಪದ ಸಿಂಹಕಂಬದಲ್ಲಿದೆ. (ಚಿ.ಸಂ.161) ಈ ಶಿಲ್ಪವು ಹಂಪಿಯ ವಿಜಯವಿಠಲ ದೇವಾಲಯದಲ್ಲಿರುವ ಯೋಗನರಸಿಂಹನ ಶಿಲ್ಪದ ಮಾದರಿಯಲ್ಲಿದೆ.

**ವಾನರ ಶಿಲ್ಪ**: ಈ ಶಿಲ್ಪವು ದೇವನಹಳ್ಳಿ ಶ್ರೀವೇಣುಗೋಪಾಲಸ್ವಾಮಿ ದೇವಾಲಯದ ನವರಂಗದಲ್ಲಿನ ಬಲಭಾಗದ ಮೊದಲನೆ ಅರೆಗಂಬದಲ್ಲಿ ಕಂಡುಬರುತ್ತದೆ. (ಚಿ.ಸಂ.162) ನಾಲ್ಕುವಾನರ ಶಿಲ್ಪವು ಹಂಪಿಯಲ್ಲಿನ ವಿಜಯವಿಠಲ ದೇವಾಲಯದ ಅಧಿಷ್ಠಾನದಲ್ಲಿರುವ ವಾನರಶಿಲ್ಪವನ್ನು ಹೋಲುತ್ತದೆ.

**ಬಿಡಿ ಶಿಲ್ಪಗಳು**: ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೇವನಹಳ್ಳಿ ತಾಲೂಕಿನಲ್ಲಿ ವಿವಿಧ ಕಡೆ ಹಲವಾರು ಬಿಡಿಶಿಲ್ಪಗಳು ಕಂಡುಬಂದಿದ್ದು ಅವುಗಳನ್ನು ಈ ಮುಂದಿನಂತೆ ತಿಳಿಸಲಾಗಿದೆ.

**ವೀರಕೆಂಪಮ್ಮ ಶಿಲ್ಪ**: ಆವತಿ ಗ್ರಾಮದ ಕುಂಬೆಗುಂಡಿನ ಪಕ್ಕದಲ್ಲಿ ಒಂದು ಸಣ್ಣಬಂಡೆಯಲ್ಲಿ ಒಂದು ಚಿಕ್ಕ ಶಿಲ್ಪವಿದ್ದು ಇದನ್ನು ಸ್ಥಳೀಯರು ವೀರಕೆಂಪಮ್ಮ ಶಿಲ್ಪವೆಂದು ಕರೆಯುತ್ತಾರೆ. ಇದೊಂದು ಸಾಧಾರಣವಾದ ಉಬ್ಬುಶಿಲ್ಪವಾಗಿದ್ದು ವೀರಕೆಂಪಮ್ಮಳು ಆವತಿ ರಣಭೈರೆಗೌಡರ ಕುಲದೇವರೆಂದು ಸ್ಥಳೀಯ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಶಿಲ್ಪವು ಆಕಾರದಲ್ಲಿ ಕುಬ್ಜವಾಗಿದ್ದು ದೊಡ್ಡ ಮುಖ ಉದ್ದನೆಯ ಕಿರೀಟ ಬೆಳ್ಳಿಯ ಕಣ್ಣುಗಳು ಕಿರುಗಾತ್ರದ ಕೈಗಳನ್ನು ಹೊಂದಿದ್ದು[3] ಶಿಲ್ಪದ ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ರುಂಡದ ರಚನೆ ಇದೆ. (ಚಿ.ಸಂ.163) ಶಿಲ್ಪಕ್ಕೆ V ಮಾದರಿಯ ಕಮಾನು ಕೆತ್ತಲಾಗಿದ್ದರೂ ಇತ್ತೀಚಿನ ದಿನಗಳಲ್ಲಿ ಬಣ್ಣ ಬಳಿದಿರುವುದರಿಂದ ಮೂಲ ಕೆತ್ತನೆಯು ಸರಿಯಾಗಿ ಗೋಚರಿಸುವುದಿಲ್ಲ.

**ಮಹಾಗಣಪತಿ-ಕೊಯಿರಾ**: ಕೊಯಿರಾಗ್ರಾಮವು ದೇವನಹಳ್ಳಿಯಿಂದ ಸುಮಾರು 12 ಕಿ.ಮೀ ದೂರದಲ್ಲಿದೆ ಕೊಯಿರಾ ಗ್ರಾಮದ ಬಂಡೆಗಳಿರುವ ಹಳೆಯ ಜಾಗದಲ್ಲಿ ಮಹಾಗಣಪತಿಯನ್ನು ಪ್ರತಿಷ್ಠಾಪಿಸಿ ಅದಕ್ಕೆ ಒಂದು ಮಂಟಪವನ್ನು ನಿರ್ಮಿಸಿ ಬಂಡೆಯಲ್ಲಿ ಗಣೇಶನನ್ನು ಕೆತ್ತಲಾಗಿದೆ. ಈ ಉಬ್ಬು ಕೆತ್ತನೆಯ ಗಣೇಶನಿಗೆ ನಾಲ್ಕು ಕೈಗಳಿವೆ. ಗಣೇಶ ಸುಮಾರು 4 ಅಡಿ ಎತ್ತರಹೊಂದಿದ್ದು ಬಿಳಿಕಣ ಶಿಲೆಯಿಂದ ಕೆತ್ತಲ್ಪಟ್ಟಿದ್ದು ಎಡಗೈಯಲ್ಲಿ ಸೊಂಡಿಲ ಮೇಲಿದ್ದು ಹೊಟ್ಟೆ ಮೇಲೆ ಅಲಂಕಾರಿಕ ಕೆತ್ತನೆಯಿದ್ದು ಎಡಗಾಲು ಮಡಚಿದೆ. (ಚಿ.ಸಂ.164)

**ಕನಕಲ್ಲಮ್ಮ ಶಿಲ್ಪ**: ಕನಕಲ್ಲಮ್ಮ ಅಕ್ಷತ ಕನ್ಯೆಯರ ದೇವತೆ ಎಂದು ಹೆಸರಾಗಿದ್ದುಆವತಿ ಗ್ರಾಮದ ಕುಂಬಿ ಬೆಟ್ಟದ ಹಿಂದಿನ ತಪ್ಪಲಿನಲ್ಲಿ ಕನಕಲ್ಲಮ್ಮ ಎಂಬ ಶಿಲ್ಪವು ಬಂಡೆಯ ಮೇಲ್ಮೈಯಲ್ಲಿದೆ. ಸಾಮಾನ್ಯವಾಗಿ ಕನ್ಯೆಯರು, ಚಿಕ್ಕ ಹೆಣ್ಣು ಮಕ್ಕಳು ಶಿಲ್ಪಕ್ಕೆ ಪೂಜೆ ಮಾಡುವುದು ವಿಶೇಷವಾಗಿದೆ. (ಚಿ.ಸಂ.165) ಈಕೆಯನ್ನು ಬರಗಾಲ ಮತ್ತು ಇತರೆ ಸಂದರ್ಭಗಳಲ್ಲಿ ಪೂಜಿಸಲಾಗುತ್ತದೆ.[4] ಮಳೆ-ಬೆಳೆ ಬಗ್ಗೆ ಇಲ್ಲಿನ ನೀರಿನ ಸ್ಥಿತಿಗತಿಯನ್ನು ಆಧರಿಸಿ ತಿಳಿದುಕೊಳ್ಳಲಾಗುತ್ತಿದೆ ಎಂದು ಸ್ಥಳೀಯರಾದ ರೈಲ್ವೆ ಆನಂದ್ ಎಂಬುವರು ಮಾಹಿತಿ ನೀಡಿರುತ್ತಾರೆ.

**ಸ್ಥಾನಕ ಲಕ್ಷ್ಮಿ-ಗಂಗವಾರ**: ಈ ಶಿಲ್ಪವು ಗಂಗವಾರ ಗ್ರಾಮದ ಮಧ್ಯಭಾಗದಲ್ಲಿದ್ದು ಅಶ್ವತ್ಥಕಟ್ಟೆ ಮೇಲಿನ ವೀರಗಲ್ಲು ಮತ್ತು ನಾಗರಕಲ್ಲುಗಳ ಪಕ್ಕದಲ್ಲಿದ್ದು ಗಂಗರ ಶೈಲಿಯಲ್ಲಿದ್ದು[5] ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲ್ಪಟ್ಟಿದ್ದು ಇದರ ಎತ್ತರ 4 ಅಡಿಗಳುಮತ್ತು ಅಗಲ 1.10 ಅಡಿಗಳಾಗಿದ್ದು, ಈ ಶಿಲ್ಪವು 4 ಕೈಗಳನ್ನು ಹೊಂದಿದ್ದು ಬಲಗೈ ಕೆಳಗೈಯಲ್ಲಿ ಅಭಯಹಸ್ತ, ಬಲಗೈ ಮುಂಗೈ ತ್ರುಟಿತವಾಗಿದ್ದು ಎಡಗೈ ಮೇಲ್ಗೈ ಶಂಖವನ್ನು ಮತ್ತು ಕೆಳಗೈ ಕಟಿಹಸ್ತವಾಗಿದೆ. ಈ ಶಿಲ್ಪವು ಕಿರೀಟ ಮುಕುಟ ಕೊರಳಲ್ಲಿ ಹಾರ ಕರ್ಣಕುಂಡಲಗಳು ಯಜ್ಞೋಪವೀತ ಸ್ತನಪಟ್ಟಿ ಮುಂತಾದವುಗಳ ಕೆತ್ತನೆಯಿಂದ ಸರ್ವಲಂಕಾರಭೂಷಿತವಾಗಿದೆ.(ಚಿ.ಸಂ.166)

**ದುಗ್ಗಲಮ್ಮ/ದುರ್ಗಾಶಿಲ್ಪ-ಬೂದಿಗೆರೆ**:ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದುರ್ಗಾದೇವಿಯ ಆರಾಧನೆಯು ನಿರಂತರವಾಗಿ ಸಾಗುತ್ತಾ ಬಂದಿದೆ. ದುರ್ಗಿಯು ಶಕ್ತಿ ದೇವತೆಯಾಗಿದ್ದು ಭವಾನಿ, ಕಾಳಿ, ನಾರಾಯಣಿ, ವೈಷ್ಣವಿ, ಬನಶಂಕರಿ ಮುಂತಾದ ಹೆಸರಿನಿಂದ ಕರೆಯಲ್ಪಡುತ್ತಿದ್ದಾಳೆ. ದಕ್ಷಿಣ ಕರ್ನಾಟಕದ ಭಾಗದಲ್ಲಿ ಕ್ರಿ.ಶ.6-7ನೇ ಶತಮಾನದಿಂದ ದುರ್ಗಾದೇವಿಯ ಶಿಲ್ಪಗಳು ಕಂಡುಬಂದಿದೆ. ಗಂಗವಾರ ಪ್ರದೇಶದಲ್ಲಿ ನಿರ್ಮಿತವಾಗಿರುವ ಶಿವಾಲಯಗಳಲ್ಲಿ ದುರ್ಗಾದೇವಿ ಶಿಲ್ಪವು ಶಿವಪಂಚಾಯತನದ ಅಂಗವಾಗಿ ಕಂಡುಬರುತ್ತದೆ. ದೇವನಹಳ್ಳಿ ತಾಲೂಕಿನ ಬೂದಿಗೆರೆ ಗ್ರಾಮದ ಕೆರೆಕಟ್ಟೆ ಮೇಲಿರುವ ದುರ್ಗಾದೇವಿ ಶಿಲ್ಪವು ವಿಶೇಷವಾಗಿದ್ದು ಮಹಿಷನ ಶಿರದ ಮೇಲೆ ಸಮಭಂಗಿಯಲ್ಲಿ ಸ್ಥಾನಿಕಳಾಗಿರುವ ದೇವಿ ಪ್ರಸನ್ನವದನಳಾಗಿದ್ದಾಳೆ. ಚತುರ್ಭುಜೆಯಾದ ದೇವಿಯ ಕೈಗಳಲ್ಲಿ ಅಭಯ, ಚಕ್ರ, ಶಂಖ, ಕಟಿಹಸ್ತಗಳಿವೆ. ದೇವಿಯ ಪಾದದ ಬಳಿ ಬಲಗಡೆ ಭಕ್ತನೊಬ್ಬನು ತನ್ನ ಕತ್ತನ್ನು ಕತ್ತರಿಸಿಕೊಳ್ಳುತ್ತಿದ್ದಾನೆ. ಎಡಭಾಗದಲ್ಲಿ ಅರ್ಚಕ ಅಂಜಲಿ ಬದ್ಧನಾಗಿದ್ದಾನೆ. ಈ ಶಿಲ್ಪವು ದುರ್ಗಾ ಆರಾದನೆಯಲ್ಲಿ ನಡೆಯುವ 'ಬಲಿಪದ್ಧತಿ' ಬಗ್ಗೆ ಬೆಳಕು ಚೆಲುತ್ತದೆ.[6] (ಚಿ.ಸಂ.167) ಈ ಶಿಲ್ಪಕ್ಕೆ ಒಂದು ಮಂಟಪವನ್ನು ನಿರ್ಮಿಸಲಾಗಿದೆ. ಮಂಟಪದ ವಿಸ್ತೀರ್ಣವು 8 ಅಡಿ ಉದ್ದ ಮತ್ತು ಅಗಲ 8 ಅಡಿಗಳಾಗಿರುತ್ತದೆ. ದುರ್ಗಿಯ ಶಿಲ್ಪವು ಪಲ್ಲವರ ಶಿಲ್ಪದ ತದ್ವತ್ ಅನುಕರಣೆಯೆಂಬಂತೆ ಕಂಡುಬರುತ್ತದೆ.[7]

**ಎರಡು ಮೂರ್ತಿ ಶಿಲ್ಪಗಳು-ದೇವನಹಳ್ಳಿ:** ದೇವನಹಳ್ಳಿ ವೇಣುಗೋಪಾಲ ಸ್ವಾಮಿ ದೇವಾಲಯದ ದ್ವಾರಮಂಟಪದ ಮುಂಭಾಗದ ಇಕ್ಕೆಲಗಳಲ್ಲಿ ದ್ವಾರಪಾಲಕರಂತಿರುವ ಎರಡು ಶಿಲ್ಪಗಳಿದ್ದು ಎರಡು ಶಿಲ್ಪಗಳು ಗಂಗವಾರದ್ದಾಗಿದೆ ಮತ್ತು ಪಲ್ಲವರ ಶಿಲ್ಪದ ಪ್ರಭಾವವನ್ನು ತೋರುತ್ತವೆ.[8] ಈ ಎರಡು ಶಿಲ್ಪಗಳು ಗಂಗರ ಶೈಲಿಯಲ್ಲಿದ್ದು ಮತ್ತು ನಿಂತಿರುವ ಭಂಗಿಯಲ್ಲಿದ್ದು ಸುಮಾರು ಐದು ಅಡಿ ಎತ್ತರವನ್ನು ಹೊಂದಿದೆ. ಇವು ಚತುರ್ಭುಜ ಹೊಂದಿದ್ದು ಬಲಗೈ ಹಿಂಗೈಯಲ್ಲಿ ಚಕ್ರ ಮುಂಗೈ ಅಭಯಹಸ್ತವಾಗಿಯೂ ಎಡಗೈ ಹಿಂಗೈಯಲ್ಲಿ ಶಂಖ ಮತ್ತು ಬಲಗೈ ಸೊಂಟದ ಮೇಲೆ ಇರಿಸಿದೆ.ಇವು ಎತ್ತರದ ಕಿರೀಟ ತಿರುನಾಮ ಕೊರಳಲ್ಲಿ ಹಾರ ಕಟಿಬಂಧ ಯಜ್ಞೋಪವೀತ ಉಡುಪುಗಳಿಂದ ಸರ್ವಾಲಂಕಾರ ಭೂಷಿತವಾಗಿದೆ. (ಚಿ.ಸಂ.168)

**ತೆರೆದ ಆವರಣದಲ್ಲಿರುವ ಶಿವಲಿಂಗ-ಕಾರಹಳ್ಳಿ**:ಕಾರಹಳ್ಳಿ ಗ್ರಾಮವು ದೇವನಹಳ್ಳಿ-ನಂದಿಬೆಟ್ಟ ರಸ್ತೆಯಲ್ಲಿ ದೇವನಹಳ್ಳಿಯಿಂದ ಸುಮಾರು 8 ಕಿ.ಮೀ ದೂರದಲ್ಲಿದೆ. ಕಾರಹಳ್ಳಿ ಗ್ರಾಮದಿಂದ ಕಾರಹಳ್ಳಿ ಕೆರೆಗೆ ಹೋಗುವ ರಸ್ತೆಯ ಪಕ್ಕದಲ್ಲಿರುವ ಗೋಪುರದಿಂದ ಮುಂದಕ್ಕೆ ಬಲಭಾಗದಲ್ಲಿ ಖಾಸಗಿಯವರಿಗೆ ಸೇರಿದ ಜಮೀನಿನಲ್ಲಿ ತೆರೆದ ಆವರಣದಲ್ಲಿ ಒಂದು ಶಿವಲಿಂಗವಿದೆ. (ಚಿ.ಸಂ.169) ಈ ಶಿವಲಿಂಗದ ಬ್ರಹ್ಮಭಾಗವು ಭೂಮಿಯಲ್ಲಿ ಮುಚ್ಚಿಹೋಗಿದ್ದು ವಿಷ್ಣುಭಾಗ ಮತ್ತು ರುದ್ರಭಾಗವು 2.8 ಅಡಿ ಎತ್ತರವಾಗಿದ್ದು 3 ಅಡಿ ಸುತ್ತಳತೆಯನ್ನು ಮತ್ತು ಬ್ರಹ್ಮಸೂತ್ರ ರೇಖೆಯನ್ನು ಒಳಗೊಂಡಿದೆ. ಹೀಗಾಗಿ ಇದನ್ನು ಶಿವಾದಿಕ ಲಿಂಗವೆಂದು ಕರೆಯಲಾಗುತ್ತದೆ. ಈ ಶಿವಲಿಂಗವನ್ನು ದೈನಂದಿನ ಮತ್ತು ಧಾರ್ಮಿಕ ಕಾರ್ಯಕ್ರಮಗಳ ಸಂದರ್ಭದಲ್ಲಿ ಪೂಜಿಸಲಾಗುತ್ತಿದೆ.[9]

**ಮಂಟಪದೊಳಗಿನ ಶಿವಲಿಂಗ-ಕಾರಹಳ್ಳಿ**:.ಕಾರಹಳ್ಳಿಯ ಸಪ್ತಮಾತೃಕೆ/ಚೌಡೇಶ್ವರಿ ದೇವಾಲಯದ ಮುಂಭಾಗದಲ್ಲಿರುವ ಮಂಟಪದಲ್ಲಿ ಬಿಳಿಕಣಶಿಲೆಯಲ್ಲಿ ಕೆತ್ತಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗದ ಬ್ರಹ್ಮಭಾಗವು ಭೂಮಿಯಲ್ಲಿ ಮುಚ್ಚಿಹೋಗಿದ್ದು ವಿಷ್ಣುಭಾಗ ಮತ್ತು ರುದ್ರಭಾಗವು 1.5 ಅಡಿ ಎತ್ತರವಾಗಿದ್ದು ಬ್ರಹ್ಮಸೂತ್ರ ರೇಖೆಯನ್ನು ಒಳಗೊಂಡಿದೆ. (ಚಿ.ಸಂ.170) ಆದ್ದರಿಂದ ಇದನ್ನು ಶಿವಾದಿಕ ಲಿಂಗವೆಂದು ಕರೆಯಲಾಗುತ್ತದೆ. ಶಿವಲಿಂಗದ ಮುಂದೆ ಅಭಿಮುಖವಾಗಿರುವ ನಂದಿ ಶಿಲ್ಪವನ್ನು ಬೇರೆಡೆಯಿಂದ ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂದು ಕಂಡು ಬರುತ್ತದೆ.[10]

**ಮಂಟಪದೊಳಗಿನ ಶಿವಲಿಂಗ-ಕೆಂಪಲಿಂಗನಪುರ**: ಕೆಂಪಲಿಂಗಪುರವು ಐವಿಸಿ ರಸ್ತೆಯಲ್ಲಿ ಕಂಡುಬರುವ ಒಂದು ಗ್ರಾಮವಾಗಿದ್ದು ದೇವನಹಳ್ಳಿಯಿಂದ ಸುಮಾರು 4 ಕಿ.ಮೀ. ದೂರದಲ್ಲಿದೆ.

ಕೆಂಪಲಿಂಗಪುರ ಗ್ರಾಮದ ಮಧ್ಯಭಾಗದಲ್ಲಿರುವ ಕಲ್ಲುಚಪ್ಪಡಿಗಳಿಂದ ಕೂಡಿದ ಮಂಟಪದ ಮಧ್ಯಭಾಗದಲ್ಲಿ ಶಿವಲಿಂಗವಿದ್ದು ಇದರ ಎತ್ತರ 1.4 ಅಡಿಗಳಾಗಿದ್ದು ಸರಳವಾಗಿದೆ. ಇದರ ವಿಷ್ಣುಭಾಗ ಮತ್ತು ಬ್ರಹ್ಮಭಾಗ ಮುಚ್ಚಿಹೋಗಿದ್ದು ರುದ್ರಭಾಗ ಮಾತ್ರ ಕಂಡುಬರುತ್ತದೆ.[11] (ಚಿ.ಸಂ.171)

## ವೀರಗಲ್ಲುಗಳು

ಜನತೆ ಬಾಳಬದುಕಿದ ರೀತಿ, ಅನುಸರಿಸಿದ ಧರ್ಮ, ಬೆಳೆಸಿದ ಕಲೆ, ಅವರ ಜೀವನದ ಸಮಸ್ಯೆಗಳು, ಅವರ ಜೀವನಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಮತ್ತು ಜನತೆಯ ಇತಿಹಾಸ. ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು. ಮಡಿದವರ ಸ್ಮಾರಣಾರ್ಥವಾಗಿಯೇ, ಕೆಲವರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು.

ಜೀವನದ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ ಗೋವು ಕಳ್ಳರ ಜೊತೆ ಹೋರಾಡಿಹಾಗೂ ತಮ್ಮ ಅರಸರ ಪರವಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳು ವೀರಗಲ್ಲುಗಳು ಎನ್ನಬಹುದು. ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೇ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಕಲ್ಲುಗಳೇ ವೀರಗಲ್ಲುಗಳು.ಅವರು ಮಾಡಿದ ಹೋರಾಟ ನಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ ಸಮಾಜದ ಒಳಿತಿಗಾಗಿ ಜೀವನದ ಹಂಗನ್ನು ತೊರೆದ ಅವರ ಹೋರಾಟವು ಸಾಮಾಜಿಕ ಕಳಕಳ ಸ್ವಾಮಿನಿಷ್ಠೆ ಮತ್ತು ಸ್ವಾಭಿಮಾನಗಳಿಂದ ಕೂಡಿದುದಾಗಿದೆ.

ಕರ್ನಾಟಕಲ್ಲಿ ವೀರಗಲ್ಲುಗಳನ್ನು ಗಮನಿಸಿದರೆ ಇವುಗಳ ಶಿಲ್ಪವನ್ನು ಶಾಸನರಹಿತ ಶಿಲ್ಪ ಮತ್ತು ಶಾಸನಸಹಿತ ಶಿಲ್ಪವೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಶಾಸನವಿರಲೀ ಅಥವಾ ಇಲ್ಲದೇ ಇರಲಿ ಆ ವೀರಗಲ್ಲಿನ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ. ಆದುದರಿಂದ ಈ ವೀರಗಲ್ಲುಗಳಲ್ಲಿನ ವಿಷಯ ಮತ್ತು ಅವುಗಳ ಮೇಲಿರುವ ಶಿಲ್ಪದ ಆಧಾರದಿಂದ ಮತ್ತು ಅಧ್ಯಯನದ ದೃಷ್ಠಿಯಿಂದ ವಿವಿಧ ಭಾಗಗಳಾಗಿ ಮಾಡಬಹುದು. ವೀರಗಲ್ಲುಗಳ ಬಗ್ಗೆ ಅಭ್ಯಸಿಸುವಾಗ 3 ಹಂತಗಳಲ್ಲಿ ಮಾಡಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಮೊದಲನೇ ಫಲಕ ಶಿವನು ಸಾನಿಧ್ಯದಲ್ಲಿರುವುದನ್ನು ಬಿಡಿಸಿರುವುದು. ಇದಕ್ಕೆ ಸಾಕ್ಷಿಯಾಗಿ ವೀರಗಲ್ಲಿನ ಮೇಲ್ಭಾಗದಲ್ಲಿ ಒಂದು ಕಡೆ ಸೂರ್ಯ ಮತ್ತೊಂದು ಕಡೆ ಚಂದ್ರನನ್ನು ಕೆತ್ತಿರುತ್ತಾರೆ. ಎರಡನೇ

ಹಂತದಲ್ಲಿ ಯುದ್ಧದಲ್ಲಿ ಮಡಿದ ವೀರನನ್ನು ಕೈಲಾಸಕ್ಕೆ ಕೊಂಡುಯ್ಯುತ್ತಿರುವ ಸುರಾಂಗನೆಯರನ್ನು ಚಿತ್ರಿಸಿರುವುದು ಹಾಗೂ ಕೆಳಗಿನ ಫಲಕದಲ್ಲಿ ವೀರನು ಶತ್ರು ಪಕ್ಷದವರೊಡನೆ ಹೋರಾಟ ಮಾಡುತ್ತಿರುವ ದೃಶ್ಯವನ್ನು ಕೆತ್ತಿರುತ್ತಾರೆ. ಅಂದರೆ ಇಲ್ಲಿ ಶಿಲ್ಪಿಯು ತನ್ನ ಸಮಕಾಲೀನದಲ್ಲಿ ಕಣ್ಣಾರೆ ಕಂಡಂತಹ ನೈಜ ಘಟನೆಗಳನ್ನು ಕಲ್ಲಿನ ಮೇಲೆ ಚಿತ್ರಿಸಿರುತ್ತಾನೆ. ಮಡಿದ ವೀರರು ಕುಟುಂಬದ ನಿರ್ವಹಣೆಗೆ ಜಮೀನನ್ನು ದತ್ತಿ ನೀಡುತ್ತಿದ್ದರು ಹಾಗೂ ಇವರ ಹೆಸರು ಸೂರ್ಯ, ಚಂದ್ರರಿರುವ ತನಕ ಅಜರಾಮರವಾಗಿರುವಂತೆ ಹಾರೈಸುತ್ತಿದ್ದರು ಮತ್ತು ವೀರರಿಗೆ ಕೊಟ್ಟ ದಾನವನ್ನು ನೆತ್ತರು ಕೊಡುಗೆ ಎಂದು ಕರೆಯುತ್ತಾರೆ. ಯುದ್ಧದಲ್ಲಿ ಗೆದ್ದು ಬಂದ ವೀರನ ಕೆಂಪಾದ ಕತ್ತಿಯನ್ನು ರಾಜ ತಾನೇ ಕೈಯಾರೆ ತೊಳೆದು ದಾನ ಕೊಟ್ಟರೇ ಅಂತಹ ದಾನವನ್ನು ಬಾಳ್ಗಳ್ಚು ಎಂದು ಕರೆಯುತ್ತಾರೆ.

ವೀರ ಎಂದರೆ ದೇಶಕ್ಕಾಗಿ, ತನ್ನ ಒಡೆಯನಿಗಾಗಿ ಸಾಮಾಜಿಕ ಮೌಲ್ಯಗಳ ರಕ್ಷಣೆ ಮತ್ತು ಸ್ಥಾಪನೆಗಾಗಿ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟು ಹೋರಾಡಿ ಮಡಿದ ವ್ಯಕ್ತಿಗಳನ್ನು ವೀರರೆಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ವೀರರು ಆತ್ಮಬಲಿಯನ್ನು ಮಾಡಿಕೊಳ್ಳುತ್ತಿದ್ದರು. ಈ ಆತ್ಮಬಲಿಯನ್ನು ಎರಡು ಹಂತಗಳಲ್ಲಿ ಗುರುತಿಸಬಹುದು. ಅವುಗಳೆಂದರೆ, ಒಂದನೆಯದಾಗಿ ಧಾರ್ಮಿಕ ಕಾರಣಕ್ಕಾಗಿ ಆತ್ಮಬಲಿ ಮಾಡಿಕೊಂಡವರು ಮತ್ತು ಎರಡನೆಯದಾಗಿ ಸಾಮಾಜಿಕ ಕಾರಣಗಳಗಾಗಿ ಆತ್ಮಬಲಿ ಮಾಡಿಕೊಂಡವರು.[12]

ಸಾಮಾನ್ಯವಾಗಿ ವೀರರ ಜ್ಞಾಪಕಾರ್ಥಕವಾಗಿ ವೀರರ ಗುಡಿಗಳು ಊರಿನ ಹೊರಭಾಗದಲ್ಲಿ ಕೆರೆಯ ಬಳಿಯೋ ಅಥವಾ ಹೊಲಗಳಲ್ಲಿಯೋ ಇರುತ್ತವೆ. ಆದರೆ ಇಂತಹ ಕಡೆಯೇ ಇರುತ್ತದೆ ಎಂದು ಖಚಿತವಾಗಿ ಹೇಳಲಾಗುವುದಿಲ್ಲ ಹಾಗೂ ವೀರಗಲ್ಲಿನ ಮೇಲೆ ಶಾಸನವಿರಬೇಕೆಂಬ ನಿಯಮವೂ ಇಲ್ಲ, ಆದರೆ ಎಲ್ಲದರಲ್ಲೂ ಸಾಮಾನ್ಯವಾಗಿ ಕಂಡುಬರುವ ಒಂದು ಅಂಶವೇನೆಂದರೆ ವೀರನ ಚಿತ್ರವನ್ನು ಒಂದೇ ಕಲ್ಲಿನ ಮೇಲೆ ಬಿಡಿಸಲಾಗಿರುತ್ತದೆ ಎನ್ನುವುದು.

ದೇವನಹಳ್ಳಿ ತಾಲೂಕಿನಲ್ಲಿ ಗಂಗರ ಕಾಲದಿಂದ ವಿಜಯನಗರೋತ್ತರ ಕಾಲದವರೆಗೆ ಹಾಕಿಸಿರುವ ಅಪಾರ ಸಂಖ್ಯೆಯಲ್ಲಿ ಒಂದೇ ಕಡೆ ಇರುವ ವೀರಗಾರರ ಗುಡಿಗಳು ಎಂದು ಕರೆಯಲ್ಪಡುತ್ತಿರುವ ಮತ್ತು ಕುರುಬ ಜನಾಂಗದವರಿಂದ ಆರಾಧಿಸಲ್ಪಡುವ ವೀರಗಲ್ಲುಗಳು ದೊರೆಯುತ್ತವೆ. ದೇವನಹಳ್ಳಿ ತಾಲೂಕಿನಲ್ಲಿ ದೊರೆತಿರುವ ವೀರಗಲ್ಲುಗಳನ್ನು ಪ್ರಧಾನವಾಗಿ ಎರಡು ವಿಭಾಗಗಳಲ್ಲಿ ಗುರುತಿಸಬಹುದು, ಮೊದಲನೆಯದಾಗಿ ಹೋರಾಟದಲ್ಲಿ ಮಡಿದ ವೀರರ ಸ್ಮಾರಕಗಳು ಎರಡನೆಯದಾಗಿ ಸಾಮಾಜಿಕ, ಧಾರ್ಮಿಕ ಕಾರಣಗಳಿಂದಾಗಿ ಆತ್ಮಬಲಿ ಮಾಡಿಕೊಂಡು ವೀರರ ಸ್ಮಾರಕಗಳು. ಹೋರಾಟದಲ್ಲಿ ಮಡಿದ ವೀರರ ಸ್ಮಾರಕಗಳನ್ನು

ತುರುಕಾಳಗ, ಕಳ್ಳರೊಂದಿಗೆ ಹೋರಾಡಿದವರು ಮತ್ತು ಯುದ್ಧದಲ್ಲಿ ಮಡಿದವರೆಂದು ವಿಭಾಗಿಸಬಹುದು.

ದೇವನಹಳ್ಳಿ ತಾಲೂಕಿನ ವಿಜಯಪುರ ಪಟ್ಟಣದ ಬೀರೇಶ್ವರ ದೇವಾಲಯ (ಬೀರದೇವರ ಗುಡಿ) ದಲ್ಲಿ ಸುಮಾರು 36 ವೀರಗಲ್ಲುಗಳು, ಚನ್ನರಾಯಪಟ್ಟಣ ಹೋಬಳಿ ಬಿದಲಪುರ ಗ್ರಾಮದಲ್ಲಿ ಸುಮಾರು 35 ವೀರಗಲ್ಲುಗಳು ಒಂದೇ ಕಡೆ ಕಂಡುಬಂದಿವೆ. ಇವು ವೀರಗಾರರ ಗುಡಿಗಳೆಂದು ಹೆಸರಾಗಿವೆ. ದೇವನಹಳ್ಳಿ ತಾಲೂಕಿನ ಬ್ಯಾಡರಹಳ್ಳಿಯಲ್ಲಿ ಆಕರ್ಷಕವಾದ ಸತಿಗಲ್ಲು ದೊರೆತಿದೆ.ದೇವನಹಳ್ಳಿ ತಾಲೂಕಿನಲ್ಲಿ ವಿವಿಧ ಕಡೆ ದೊರೆತಿರುವ ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.[13]

**ವಿಜಯಪುರ ಪಟ್ಟಣದ ವೀರಗಲ್ಲುಗಳು**

ವಿಜಯಪುರ ಹೊರವಲಯದಲ್ಲಿರುವ ಬೀರೇದೇವರ ಗುಡಿ ಆವರಣದಲ್ಲಿ 36ಕ್ಕಿಂತ ಹೆಚ್ಚು ವೀರಗಲ್ಲುಗಳು ಕಂಡುಬಂದಿವೆ. ಈ ದೇವಾಲಯದ ನಿರ್ವಾಹಕರು ಮತ್ತು ಸ್ಥಳೀಯರು ನೀಡಿರುವ ಮಾಹಿತಿಯಂತೆ ಈ ವೀರಗಲ್ಲುಗಳು ಕುರುಬ ಸಮುದಾಯಕ್ಕೆ ಸೇರಿವೆ. ಎಂದು ಹೇಳಿಕೊಂಡು ಸಂರಕ್ಷಿಕೊಂಡು ವಾರ್ಷಿಕ ಪೂಜೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಅವುಗಳ ವಿವರಣೆ ಈ ರೀತಿ ಇದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2 ಅಡಿ ಎತ್ತರ, 2.5 ಅಡಿ ಅಗಲವಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದೆ. ಇದರಲ್ಲಿ ಯುದ್ಧದಲ್ಲಿ ಸತ್ತ ವ್ಯಕ್ತಿಯನ್ನು ಚಾಮರಧಾರಿಣಿ ದೇವಕನ್ಯೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವನ್ನು ಖಂಡರಿಸಲಾಗಿದೆ. [14]

**ವೀರಗಲ್ಲು**: ಈ ವೀರಗಲ್ಲಿನಲ್ಲಿ ವೀರರು ಈಟಿ ಮತ್ತು ಖಡ್ಗವನ್ನು ಹಿಡಿದು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವಂತೆ ಖಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು 2 ಅಡಿ ಎತ್ತರ ಮತ್ತು 2.5 ಅಡಿ ಅಗಲವಿದ್ದು 4 ಇಂಚು ದಪ್ಪವಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ವೀರನು ಬಿಲ್ಲು ಮತ್ತು ಬಾಣ ಹಿಡಿದು ನಿಂತಿದ್ದಾನೆ.

**ವೀರಗಲ್ಲು**: ಈ ವೀರಗಲ್ಲು 2 ಅಡಿ ಎತ್ತರ ಮತ್ತು 1.5 ಅಡಿ ಅಗಲವಿದ್ದು 4 ಇಂಚು ದಪ್ಪವಾಗಿದ್ದು ಇಬ್ಬರು ದಂಪತಿಗಳು ಆಯುಧಗಳನ್ನು ಹಿಡಿದು ಹಾರವಾಗಿರುವುದು.

**ವೀರಗಲ್ಲು**: ಈ ವೀರಗಲ್ಲು 3.5 ಅಡಿ ಎತ್ತರ ಮತ್ತು 3 ಅಡಿ ಅಗಲವಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದು ವೀರಾವೇಶದಿಂದ ಹೋರಾಡಿ ಸತ್ತಿರುವುದು, ಈತನ ಎಡ ಮತ್ತು ಬಲಭಾಗದಲ್ಲಿ ಇಬ್ಬರು ಚಾಮರಧಾರಿಣಿ ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು 2 ಅಡಿ ಎತ್ತರ ಮತ್ತು 1.5 ಅಡಿ ಅಗಲವಿದ್ದು 4 ಇಂಚು ದಪ್ಪವಾಗಿದ್ದು ಇಬ್ಬರು ದಂಪತಿಗಳು ಆಯುಧಗಳನ್ನು ಹಿಡಿದು ಹಾರವಾಗಿರುವುದು.

**ವೀರಗಲ್ಲು**: ಈ ವೀರಗಲ್ಲು 2 ಅಡಿ ಎತ್ತರ, 3 ಅಡಿ ಅಗಲವಾಗಿದ್ದು ಕತ್ತಿ ಮತ್ತು ಗುರಾಣಿ ಹಿಡಿದು ವೀರಾವೇಶದಿಂದ ಹೋರಾಡಿ ಮಡಿದಿರುವ ದೃಶ್ಯವನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು ಸುಮಾರು 6 ಅಡಿ ಎತ್ತರ 2 ಅಡಿ ಅಗಲ, 5 ಇಂಚು ದಪ್ಪನಾದ ಏಕಶಿಲೆಯ ಗ್ರಾನೈಟ್ ಕಲ್ಲಾಗಿದ್ದು ಈ ಹಿಂದೆ ವಿವರಿಸಿದ ರೀತಿಗೆ ಹೋಲುವ ವೀರಗಲ್ಲಾಗಿದ್ದು ಇಲ್ಲಿ ಇಬ್ಬರು ವ್ಯಕ್ತಿಗಳು, ಒಂದು ಚಿಕ್ಕ ಮಗುವಿನ ಚಿತ್ರವಿರುವುದನ್ನು ಕಾಣಬಹುದು. ಇದರಲ್ಲಿ ಮೂರು ಜನ ವ್ಯಕ್ತಿಗಳು ಕೂದಲನ್ನು ಉಂಡೆಯ ರೀತಿಯಲ್ಲಿ ಕಟ್ಟಿದ್ದು, ಇವು ಸ್ತ್ರೀ ಹಾಗೂ ಪುರುಷ ಚಿತ್ರಗಳು ಎಂಬುದು ಸ್ಪಷ್ಟವಾಗಿ ಗೋಚರಿಸುತ್ತವೆ. ಜೊತೆಗೆ ಒಂದು ಮಗು ಇದ್ದರೂ ಸಹ ಕಲ್ಯಾಣವೊಂದು ನಡೆದು, ಯಾವುದೋ ಒಂದು ತ್ಯಾಗಕ್ಕಾಗಿ ಇವರುಗಳು ಒಟ್ಟಾಗಿ ಹಾರವಾಗಿರುವುದು ಕಂಡು ಬರುತ್ತದೆ ಹಾಗೂ ಪರಸ್ಪರ ಕೈಗಳನ್ನು ಹಿಡಿದುಕೊಂಡು ಸಾಲಾಗಿ ನಿಂತಿರುವುದು ತ್ಯಾಗ ಮತ್ತು ಉಂಜರ ಸಮಯದಲ್ಲಿರುವಾಗ ಕಟ್ಟನ್ನು ತಾವು ಸಂತೋಷವಾಗಿ ಅರ್ಪಿಸಿಕೊಂಡಿರುವುದು ನಂಬಲಾರ್ಹವಾದ ವಿಷಯವಾಗಿದೆ.

**ವೀರಗಲ್ಲು**: ಈ ವೀರಗಲ್ಲು 1.5 ಅಡಿ ಎತ್ತರ ಮತ್ತು 2 ಅಡಿ ಅಗಲವಾಗಿದ್ದು ವೀರನನ್ನು ಇಬ್ಬರು ಚಾಮರಧಾರಿಣಿ ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಕಾಣಬಹುದು. (ಚಿ.ಸಂ.172)

**ಬಿದಲಪುರ ಗ್ರಾಮದ ವೀರಗಲ್ಲುಗಳು**

ಚನ್ನರಾಯಪಟ್ಟಣ ಹೋಬಳಿ ನಲ್ಲೂರು ಬಳಿ ಇರುವ ಬಿದಲಪುರ ಗ್ರಾಮದ ಹೊರವಲಯದಲ್ಲಿ ಬೀರೇದೇವರ ಗುಡಿಯ ಮುಂಭಾಗ ಮತ್ತು ಹಿಂಭಾಗದಲ್ಲಿ ಒಟ್ಟು 33 ವೀರಗಲ್ಲು, ಮಾಸ್ತಿಗಲ್ಲುಗಳು ಕಂಡುಬಂದಿದ್ದು ಕುರುಬ ಸಮುದಾಯಕ್ಕೆ ಸೇರಿವೆ ಎಂದು ಊರಿನವರು ಬೀರೇ ದೇವರ ದೇವಾಲಯದ ಆವರಣದಲ್ಲಿ ಇವುಗಳನ್ನು ಪ್ರತಿಷ್ಠಾಪಿಸಿ

ವಾರ್ಷಿಕವಾಗಿ ಅನೇಕ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.[15] ಈ ಬಿದಲಪುರ ಗ್ರಾಮದಲ್ಲಿ ಒಂದೇ ಕಡೆ ಕಂಡುಬರುವ ವೀರಗಲ್ಲು, ಸ್ಮಾರಕ ಶಿಲ್ಪಗಳ ವಿವರಣೆ ಈ ರೀತಿ ಇದೆ.

**ವೀರಮಾಸ್ತಿಗಲ್ಲು:** ಈ ವೀರಮಾಸ್ತಿಕಲ್ಲು ಸುಮಾರು 3 ಅಡಿ ಎತ್ತರ ಮತ್ತು 4 ಅಡಿ ಅಗಲವಾಗಿದ್ದು 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಒಂದು ಹಂತವನ್ನು ಮಾತ್ರ ಹೊಂದಿದೆ. ಇದರಲ್ಲಿ ಇಬ್ಬರು ಸ್ತ್ರೀಯರು ಮತ್ತು ಒಬ್ಬ ಪುರುಷನ ಉಬ್ಬು ಶಿಲ್ಪ ಕೆತ್ತನೆಯಿದ್ದು ಯುದ್ಧದಲ್ಲಿ ರಾಜನು ಹೋರಾಡಿ ಜೊತೆಗೆ ತನ್ನ ಇಬ್ಬರು ಪತ್ನಿಯರನೊಳಗೊಂಡಂತೆ ವೀರವೇಶಾದಿಂದ ಯುದ್ಧ ಮಾಡಿ ಆಯುಧೋಪಕರಣಗಳಾದ ಗದೆ, ಈಟಿ, ಭರ್ಜಿ ಇನ್ನಿತರ ಆಯುಧಗಳನ್ನು ಹಿಡಿದು ಒಟ್ಟಾಗಿ ಮೂರು ಜನರು ಹಾರವಾಗಿರುವುದನ್ನು ಕಾಣಬಹುದು.

**ವೀರ ಸ್ಮಾರಕ ಶಿಲ್ಪ:** ಈ ಶಿಲ್ಪವು ಸುಮಾರು 3 ಅಡಿ ಎತ್ತರ ಮತ್ತು 2 ಅಡಿ ಅಗಲ 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದ್ದು ಚಿತ್ರದಲ್ಲಿ ಯೋಧನನ್ನು ಸುಂದರವಾಗಿ ಕೆತ್ತಲಾಗಿದೆ. ಇದರಿಂದ ಈ ಯೋಧ ಸ್ಥಳೀಯ ಪ್ರಾಂತ್ಯದವನೇ ಇರಬಹುದು ಎಂದು ಹೇಳಿದರೆ ತಪ್ಪಾಗಲಾರದು ಹಾಗೂ ಈತನು ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರವನ್ನು ಮೇಲೆ ಎತ್ತದಂತೆ ಅಂದರೆ ಕಚ್ಚೆಯಂತೆ ಕಟ್ಟಿರುವುದು ಸುಂದರವಾಗಿ ಮೂಡಿಬಂದಿದ್ದು, ಕಂಠದಲ್ಲಿ ಸರಗಳನ್ನು ಮಾಲೆಯಾಗಿ ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು, ತುಂಬಿದ ಅಗಲವಾದ ದಪ್ಪನೆಯ ಮುಖ ಹೊಂದಿದ್ದು ದಪ್ಪನೆಯ ಮೀಸೆ ಸುಂದರವಾದ ಆಕರ್ಷಕ ಕಣ್ಣುಗಳು ಸೊಗಸಾಗಿ ಈ ಶಿಲ್ಪಕಲೆಯಲ್ಲಿ ಮೂಡಿಬಂದಿರುವುದನ್ನು ಕಾಣಬಹುದು. ಜೊತೆಗೆ ಈತನು ಎರಡು ಕೈಗಳಲ್ಲಿ ಈಟಿ ಮತ್ತು ಕಮಂಡಲವನ್ನು ಆಯುಧವಾಗಿ ಹಿಡಿದಿರುತ್ತಾನೆ. ಈ ಶಿಲ್ಪಕಲೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಯುದ್ಧದಲ್ಲಿ ಹೋರಾಡಿರುವ ದೃಶ್ಯದಂತೆ ಮೂಡಿಬಂದಿದೆ. ಈ ತರಹದ ಶಿಲ್ಪಗಳು ಬಹುಶಃ ಮಹಿಷ ಮಂಡಲದ ಪ್ರಾಂತ್ಯದಲ್ಲಿ ಕಂಡು ಬಂದಿರುವುದನ್ನು ಕಾಣಬಹುದಾಗಿದೆ.

**ವೀರಗಲ್ಲು:** ಈ ವೀರಗಲ್ಲು 1.5 ಅಡಿ ಎತ್ತರ ಮತ್ತು 1.5 ಅಡಿ ಅಗಲ 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಹಂತದಿಂದ ಕೂಡಿದೆ.ಇದರಲ್ಲಿ ಇಬ್ಬರು ವ್ಯಕ್ತಿಗಳು, ಕತ್ತಿ ಮತ್ತು ಗುರಾಣಿ ಹಿಡಿದು ವೀರಾವೇಶದಿಂದ ಹೋರಾಡಿ ಹಾರವಾಗಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು 2 ಅಡಿ ಎತ್ತರ ಮತ್ತು 1.5 ಅಡಿ ಅಗಲ 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದ್ದು ವೀರನು ಯುದ್ಧಕ್ಕೆ ಸನ್ನದ್ಧನಾಗಿ ಕತ್ತಿ ಗುರಾಣಿಯನ್ನು ಹಿಡಿದು ವೀರವೇಶಾದಿಂದ ಹೋರಾಟಕ್ಕೆ ಸಜ್ಜಾಗಿ ನಿಂತಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು ಸುಮಾರು 1.5 ಅಡಿ ಎತ್ತರ, 1.5 ಅಡಿ ಅಗಲ, 4 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ಇಲ್ಲಿ ಪತಿ ಮತ್ತು ಪತ್ನಿಯೊಡಗೂಡಿ ಯುದ್ಧದಲ್ಲಿ ಹೋರಾಡಿ ಆಯುಧೋಪಕರಣಗಳ ಸಹಿತವಾಗಿ ಹಾರವಾಗಿ ನಿಂತಿರುವ ದೃಶ್ಯವನ್ನು ಕಾಣಬಹುದು.

**ಕುದುರೆ ಕಾಳಗದ ವೀರಗಲ್ಲು**: ಈ ವೀರಗಲ್ಲು ಸುಮಾರು 3 ಅಡಿ ಎತ್ತರವಾಗಿದ್ದು 3 ಅಡಿ ಅಗಲವಾಗಿದ್ದು 4 ಇಂಚು ದಪ್ಪನಾದ ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ವೀರನು ಸುಂದರನಾಗಿದ್ದು ಮೈಯಲ್ಲಿ ವಿವಿಧ ಆಭರಣಗಳನ್ನು ಧರಿಸಿ ಕುದುರೆಯ ಮೇಲೆ ಕುಳಿತು ಆಯುಧೋಪಕರಣಗಳನ್ನು ಹಿಡಿದು ವೀರಾವೇಶದಿಂದ ಯುದ್ಧಕ್ಕೆ ಹೊರಟಂತಿದ್ದು ಇದರ ಹಿಂಬದಿಯಲ್ಲಿ ಇಬ್ಬರು ವೀರರ ಉಬ್ಬುಶಿಲ್ಪ ಕೆತ್ತನೆಯನ್ನು ಖಂಡರಿಸಿರುವುದನ್ನು ಕಾಣಬಹುದು.

**ವೀರಮಾಸ್ತಿಕಲ್ಲು**: ಇದು ಸುಮಾರು 3 ಅಡಿ ಎತ್ತರ ಮತ್ತು 2 ಅಡಿ ಅಗಲ ಮತ್ತು 5 ಇಂಚು ದಪ್ಪವಾದ ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ವೀರನು ಎರಡೂ ಕೈಗಳಲ್ಲಿ ಈಟಿ ಮತ್ತು ಭರ್ಜಿಯನ್ನು ಹಿಡಿದಿರುವುದು ಮತ್ತು ಆತನ ಪತ್ನಿಯು ಆತನ ಪಕ್ಕದಲ್ಲಿ ಶಿವಭಕ್ತೆಯನ್ನು ಎರಡೂ ಕೈಗಳಲ್ಲಿ ಉದಕವನ್ನು ಹಿಡಿದುಕೊಂಡು ನಿಂತಿರುವುದು ಹಾಗೂ ಇಬ್ಬರು ತಮ್ಮ ಮೈತುಂಬಾ ಆಭರಣಗಳನ್ನು ಧರಿಸಿರುವುದು ಕಂಡುಬರುತ್ತದೆ.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಸುಮಾರು 1.5 ಅಡಿ ಎತ್ತರ ಮತ್ತು 1.5 ಅಡಿ ಅಗಲ ಮತ್ತು 4 ಇಂಚು ದಪ್ಪವಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ಸತಿ ಮತ್ತು ಪತಿ ಇಬ್ಬರು ಯುದ್ಧದಲ್ಲಿ ಭಾಗಿಯಾಗಿ ಹಾರವಾಗಿರುವುದು ವಿಶೇಷವಾಗಿದೆ.

**ವೀರಗಲ್ಲು**: ಇದು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ.ಯುದ್ಧದಲ್ಲಿ ಹೋರಾಡಿ ಮಡಿದ ವೀರನನ್ನು ಇಬ್ಬರು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ಕಂಡುಬರುತ್ತದೆ.

**ವೀರಗಲ್ಲು**: ಇದು ಸುಮಾರು 1.5 ಅಡಿ ಎತ್ತರ ಮತ್ತು 2.5 ಅಡಿ ಅಗಲ ಮತ್ತು 5 ಇಂಚು ದಪ್ಪನಾದ ಗ್ರಾನೈಟ್ ಶಿಲೆಯ ವೀರಗಲ್ಲಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ವೀರನು

ಯುದ್ಧಕ್ಕೆ ಸನ್ನದ್ಧನಾಗಿದ್ದು ಕತ್ತಿಯನ್ನು ಹೊರ ತೆಗೆದು ವೀರನಿಗೆ ಚುಚ್ಚುವ ರೀತಿಯಲ್ಲಿದ್ದು ಈತನ ಹಿಂಬದಿಯಲ್ಲಿ ಸ್ತ್ರೀ ನಿಂತಿರುವುದು ವಿಶೇಷವಾಗಿದೆ.

**ವೀರಗಲ್ಲು**: ಇದು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದ ವೀರನನ್ನು ಇಬ್ಬರು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವು ಕಂಡುಬರುತ್ತದೆ.

**ವೀರಗಲ್ಲು**: ಈ ವೀರಗಲ್ಲಿನಲ್ಲಿ ಸುಮಾರು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ಪತಿ ಪತ್ನಿಯರು ಜೊತೆಗೂಡಿ ಯುದ್ದದಲ್ಲಿ ಹೋರಾಡಿ ವಸ್ತ್ರಾಧಾರಿತ, ಆಭರಣಾಧಾರಿತ, ಅಲಂಕರಣೆಯಿಂದ ಕೂಡಿದ್ದು ತಮ್ಮ ಕೈಗಳಲ್ಲಿ ಆಯುಧಗಳನ್ನು ಹಿಡಿದು ಹಾರವಾಗಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು ಒಂದು ಪಟ್ಟಿಕೆಯಿಂದ ಕೂಡಿದ್ದು ಖಡ್ಗ ಮತ್ತು ಗುರಾಣಿಯನ್ನು ಹಿಡಿದು ದಂಪತಿಗಳಬ್ಬರು ಯುದ್ಧದಲ್ಲಿ ಹೋರಾಡಿ ಹಾರವಾಗಿರುವುದನ್ನು ಕಾಣಬಹುದು.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಸುಮಾರು 2.5 ಅಡಿ ಎತ್ತರ ಮತ್ತು 3 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ತಮ್ಮ ಕೈಗಳಲ್ಲಿ ಕತ್ತಿ, ಗುರಾಣಿ, ಬಿಲ್ಲು, ಬಾಣಗಳನ್ನು ಹಿಡಿದು, ಯುದ್ಧದಲ್ಲಿ ಹೋರಾಡಿ ಹಾರವಾಗಿರುವುದನ್ನು ಸ್ಪಷ್ಟ ಉಬ್ಬು ಕೆತ್ತನೆಯ ಒಂದೇ ಪಟ್ಟಿಕೆಯಾಗಿದೆ.

**ಸ್ಮಾರಕ ಶಿಲ್ಪ**: ಈ ಶಿಲ್ಪವು ಗ್ರಾನೈಟ್ ಕಲ್ಲಿನದ್ದಾಗಿದ್ದು 3 ಅಡಿ ಎತ್ತರ ಮತ್ತು 1.5 ಅಡಿ ಅಗಲ ಮತ್ತು 5 ಇಂಚು ದಪ್ಪನಾಗಿದ್ದು ಇದರಲ್ಲಿ ಯೋಧನನ್ನು ಸುಂದರವಾಗಿ ಕಂಡರಿಸಲಾಗಿದೆ. ಇದರಿಂದ ಯೋಧ ಸ್ಥಳೀಯ ಪ್ರಾಂತ್ಯದವನೇ ಇರಬಹುದು.ಈತ ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರವನ್ನು ಧರಿಸಿರುವುದು ಸುಂದರವಾಗಿ ಮೂಡಿಬಂದಿದ್ದು ಈತನು ಕಂಠದಲ್ಲಿ ಸರಮಾಲೆಯನ್ನು ಧರಿಸಿದ್ದು ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ತುಂಬಿದ ಅಗಲವಾದ ಆಕರ್ಷಕ ಕಣ್ಣುಗಳನ್ನು ಹೊಂದಿದ್ದು ಕೈಗಳಲ್ಲಿ ಆಯುಧವನ್ನು ಹಿಡಿದಿರುವುದನ್ನು ಕಾಣಬಹುದು.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಸುಮಾರು 2.5 ಅಡಿ ಎತ್ತರ ಮತ್ತು 3 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ತಮ್ಮ ಕೈಗಳಲ್ಲಿ ಕತ್ತಿ, ಗುರಾಣಿ, ಬಿಲ್ಲು, ಬಾಣಗಳನ್ನು ಹಿಡಿದು, ಯುದ್ಧದಲ್ಲಿ ಹೋರಾಡಿ ಹಾರವಾಗಿರುವುದನ್ನು ಕಾಣಬಹುದು. ಇದು ಸಹ ಒಂದು ಪಟ್ಟಿಕೆಯ ಉಬ್ಬು ಕೆತ್ತನೆಯ ಶಿಲ್ಪವಾಗಿದೆ.

**ಸ್ಮಾರಕ ಶಿಲ್ಪ**: ಇದು ಸುಮಾರು 2.5 ಅಡಿ ಎತ್ತರ ಮತ್ತು 1.5 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಕಲ್ಲಿನದ್ದಾಗಿದ್ದು ಒಂದು ಹಂತದಿಂದ ಕೂಡಿದೆ. ವೀರನು ಎರಡು ಕೈಗಳಲ್ಲಿ ಕತ್ತಿ, ಗುರಾಣಿ ಹಿಡಿದು ಯುದ್ಧಕ್ಕೆ ಸನ್ನದ್ಧನಾಗಿ ಹೊರಟು ನಿಂತಿರುವಂತೆ ಕಂಡರಿಸಲಾಗಿದ್ದು ಈತ ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರಾಭರಣಗಳನ್ನು ಅಂದರೆ ಕಂಠದಲ್ಲಿ ಕಂಠೀಹಾರ, ನಡುವಿನಲ್ಲಿ ಡಾಬು, ತೋಳಿನಲ್ಲಿ ತೋಳ್ಬಂದಿ, ಹಣೆಯಲ್ಲಿ ಹೆಣಗಂಟು ಕಟ್ಟಿದ್ದು ತುಂಬಿದ ಅಗಲವಾದ ದಪ್ಪನೆಯ ಮೀಸೆ ಸುಂದರವಾಗಿ ಶಿಲ್ಪಕಲೆಯಲ್ಲಿ ಮೂಡಿಬಂದಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು3 ಅಡಿ ಎತ್ತರ ಮತ್ತು4 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ ಗ್ರಾನೈಟ್ ಶಿಲೆಯದ್ದಾಗಿದ್ದು ಇಲ್ಲಿ ಇಬ್ಬರು ವೀರರು ಪರಸ್ಪರ ವೀರಾವೇಶದಿಂದ ಯುದ್ಧದಲ್ಲಿ ಹೋರಾಡಿ ತಮ್ಮ ಕೈಗಳಲ್ಲಿ ಕತ್ತಿ, ಗುರಾಣಿಯನ್ನಿಡಿದು ಹಾರವಾಗಿ ನಿಂತಿರುವುದು ಹಾಗೂ ಎಡಭಾಗದ ವೀರನ ಹಿಂಬದಿಯಲ್ಲಿ ಮಹಿಳೆಯು ಸಹ ಇದ್ದು ಈತನ ಮಡದಿಯಿರಬೇಕು. ಹೀಗಾಗಿ ಇವರು ಒಂದೇ ಕುಟುಂಬಕ್ಕೆ ಸೇರಿದವರಾಗಿದ್ದು ಹಾರವಾಗಿ ನಿಂತಿರುವುದು ಕಂಡುಬರುತ್ತದೆ.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಸುಮಾರು 3 ಅಡಿ ಎತ್ತರ ಮತ್ತು 4 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು, ಇದರಲ್ಲಿ ದಂಪತಿಗಳಿಬ್ಬರು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಒಂದು ಪಟ್ಟಿಕೆಯಿಂದ ಕೂಡಿದ್ದು ಪತಿ ಪತ್ನಿಯರಿಬ್ಬರು ವಿವಿಧ ಆಯುಧೋಪಕರಣಗಳನ್ನು ಹಿಡಿದು ವೀರಾವೇಶದಿಂದ ಯುದ್ಧಕ್ಕೆ ಸನ್ನದ್ಧರಾಗಿರುವುದನ್ನು ಕಾಣಬಹುದು.

**ಸ್ಮಾರಕ ಶಿಲ್ಪ**: ಈ ಶಿಲ್ಪವು ಗ್ರಾನೈಟ್ ಕಲ್ಲಿನದ್ದಾಗಿದ್ದು 3 ಅಡಿ ಎತ್ತರ ಮತ್ತು 1.5 ಅಡಿ ಅಗಲ ಮತ್ತು 5 ಇಂಚು ದಪ್ಪನಾಗಿದ್ದು ಇದರಲ್ಲಿ ಯೋಧನನ್ನು ಸುಂದರವಾಗಿ ಕಂಡರಿಸಲಾಗಿದೆ. ಇದರಿಂದ ಯೋಧ ಸ್ಥಳೀಯ ಪ್ರಾಂತ್ಯದವನೇ ಇರಬಹುದು. ಈತ ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರವನ್ನು ಧರಿಸಿರುವುದು ಸುಂದರವಾಗಿ ಮೂಡಿಬಂದಿದ್ದು ಈತನು ಕಂಠದಲ್ಲಿ ಸರಮಾಲೆಯನ್ನು ಧರಿಸಿದ್ದು ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ತುಂಬಿದ ಅಗಲವಾದ ಆಕರ್ಷಕ ಕಣ್ಣುಗಳನ್ನು ಹೊಂದಿದ್ದು ಕೈಗಳಲ್ಲಿ ಆಯುಧವನ್ನು ಹಿಡಿದಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು3 ಅಡಿ ಎತ್ತರ, 4 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ ಗ್ರಾನೈಟ್ ಶಿಲೆಯದ್ದಾಗಿದ್ದು ಇಲ್ಲಿ ಇಬ್ಬರು ವೀರರು ಪರಸ್ಪರ

ವೀರಾವೇಶದಿಂದ ಯುದ್ಧದಲ್ಲಿ ಹೋರಾಡಿ ತಮ್ಮ ಕೈಗಳಲ್ಲಿ ಕತ್ತಿ, ಗುರಾಣಿಯನ್ನಿಡಿದು ಹಾರವಾಗಿ ನಿಂತಿರುವುದು ಹಾಗೂ ಎಡಭಾಗದ ವೀರನ ಹಿಂಬದಿಯಲ್ಲಿ ಮಹಿಳೆಯು ಸಹ ಇದ್ದು ಈತನ ಮಡರಿಯಿರಬೇಕು. ಹೀಗಾಗಿ ಇವರು ಒಂದೇ ಕುಟುಂಬಕ್ಕೆ ಸೇರಿದವರಾಗಿದ್ದು ಹಾರವಾಗಿ ನಿಂತಿರುವುದನ್ನು ಕಾಣಬಹುದು.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು ಸುಮಾರು 3 ಅಡಿ ಎತ್ತರ ಮತ್ತು 4 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ದಂಪತಿಗಳಿಬ್ಬರು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲಿನಲ್ಲಿ ಸುಮಾರು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರಲ್ಲಿ ಪತಿ ಪತ್ನಿಯರು ಜೊತೆಗೂಡಿ ಯುದ್ದದಲ್ಲಿ ಹೋರಾಡಿ ವಸ್ತ್ರಾಧಾರಿತ, ಆಭರಣಾಧಾರಿತ, ಅಲಂಕರಣೆಯಿಂದ ಕೂಡಿದ್ದು ತಮ್ಮ ಕೈಗಳಲ್ಲಿ ಆಯುಧಗಳನ್ನು ಹಿಡಿದು ಹಾರವಾಗಿರುವುದನ್ನು ಕಾಣಬಹುದು.

**ವೀರಗಲ್ಲು**: ಈ ವೀರಗಲ್ಲು3 ಅಡಿ ಎತ್ತರ, 4 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ ಗ್ರಾನೈಟ್ ಶಿಲೆಯದ್ದಾಗಿದ್ದು ಇಲ್ಲಿ ಇಬ್ಬರು ವೀರರು ಪರಸ್ಪರ ವೀರಾವೇಶದಿಂದ ಯುದ್ಧದಲ್ಲಿ ಹೋರಾಡಿ ತಮ್ಮ ಕೈಗಳಲ್ಲಿ ಕತ್ತಿ, ಗುರಾಣಿಯನ್ನು ಹಿಡಿದು ಹಾರವಾಗಿ ನಿಂತಿರುವುದು ಹಾಗೂ ಎಡಭಾಗದ ವೀರನ ಹಿಂಬದಿಯಲ್ಲಿ ಮಹಿಳೆಯು ಸಹ ಇದ್ದು ಈತನ ಮಡದಿಯಿರಬೇಕು. ಹೀಗಾಗಿ ಇವರು ಒಂದೇ ಕುಟುಂಬಕ್ಕೆ ಸೇರಿದವರಾಗಿದ್ದು ಹಾರವಾಗಿ ನಿಂತಿರುವುದನ್ನು ಕಾಣಬಹುದು. (ಚಿ.ಸಂ.173) ಬಿದಲಪುರ ಗ್ರಾಮದ ಈ ವೀರಗಲ್ಲುಗಳಾ ವುದರಲ್ಲೂ ಶಾಸನಗಳಿಲ್ಲದಿರುವುದರಿಂದ ಯಾರ ಕಾಲಕ್ಕೆ ಸೇರಿದವೆಂದು ಹೇಳುವುದು ಕಷ್ಟ ವಾಗುತ್ತದೆ.

**ಶಾಸನೋಕ್ತ ವೀರಗಲ್ಲುಗಳು: ಅರದೇಶಹಳ್ಳಿ:** ಅರದೇಶಹಳ್ಳಿ ಗ್ರಾಮದ ಕರಗದ ವೀರಣ್ಣ ಮತ್ತು ಕೆ.ವಿ. ಜಯರಾಂರವರ ಮನೆಯ ಹತ್ತಿರ 15 ಅಡಿ ಉದ್ದ ಮತ್ತು 15 ಅಡಿ ಅಗಲವುಳ್ಳ ಕಲ್ಲು ಆವರಣದ ಒಳಗಡೆ ಶಾಸನೋಕ್ತ ವೀರಗಲ್ಲುಗಳು ಕಂಡುಬಂದಿವೆ.[16]

**ಮೊದಲನೇ ಶಾಸನೋಕ್ತ ವೀರಗಲ್ಲು**: ಇದರ ಎತ್ತರ 5.5 ಅಡಿ ಮತ್ತು ಅಗಲ 6.3 ಅಡಿಗಳಾಗಿದ್ದು,ಶಾಸನವು 21 ಸಾಲುಗಳನ್ನೊಳಗೊಂಡಿದ್ದು ಶಾಸನವು ಸ್ವಲ್ಪ ಭಗ್ನವಾಗಿದ್ದು ಮಣ್ಣಲ್ಲಿ ಹೂತು ಹೋಗಿದೆ. ಇದು ತುರುಗೋಳ್ ವೀರಗಲ್ಲು ಶಾಸನವಾಗಿದ್ದು ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದೆ. ಹಸುಗಳನ್ನು ಕಳ್ಳರಿಂದ ರಕ್ಷಿಸಲು ಹೋಗಿ ವೀರನ ಮರಣ ಆತನ ತಲೆ ಭುಜದ

ಭಾಗಕ್ಕೆ ಬಾಣಗಳು ನಾಟುತ್ತಿರುವ ದೃಶ್ಯ, ಆತನ ಹಿಂಭಾಗದಲ್ಲಿ ಹಸುಗಳು ಓಡುತ್ತಿರುವ ದೃಶ್ಯಗಳು ಕಂಡರಿಸಲ್ಪಟ್ಟಿದ್ದು, ದೇವಕನ್ಯೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದ್ದು, ಇದು ಮೂರು ಪಟ್ಟಿಕೆಗಳನ್ನು ಹೊಂದಿರದೇ ವೀರ ಮತ್ತು ದೇವಕನ್ಯೆರನ್ನು ಉಬ್ಬು ಕೆತ್ತನೆಯಲ್ಲಿ ಕಂಡರಿಸಲಾಗಿದೆ. ವೀರನ ತಲೆಯ ಕೂದಲಿನ ಗಂಟು ಆಕರ್ಷಕವಾಗಿದೆ. ವೀರ ಒಂದು ಕೈಯಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಕತ್ತಿ ಅಥವಾ ಬಾಣ ಹಿಡಿದಿದ್ದು ಸರಿಯಾಗಿ ಗೋಚರಿಸುತ್ತಿಲ್ಲ. ಸಾಮಾನ್ಯವಾಗಿ ರಾಷ್ಟ್ರಕೂಟರ ಕಾಲದ ವೀರಗಲ್ಲುಗಳು ಈರೀತಿಯ ಅಳತೆಯಲ್ಲಿ ಕಂಡುಬರುತ್ತವೆ. ಅರದೇಶಹಳ್ಳಿಯು ರಾಷ್ಟ್ರಕೂಟರ ಕಾಲದಲ್ಲಿ ಪ್ರಾಮುಖ್ಯತೆ ಪಡೆದ ಪ್ರದೇಶವಾಗಿತ್ತು. ಈ ಶಾಸನೋಕ್ತ ವೀರಗಲ್ಲು ಗ್ರಾನೈಟ್ ಶಿಲೆಯದ್ದಾಗಿದೆ. ವೀರನು ಬಿಲ್ಲು, ಬಾಣ, ಭರ್ಜಿ ಮತ್ತಿತರ ಆಯುಧಗಳನ್ನು ಹಿಡಿದು ಹೋರಾಟ ನಡೆಸುತ್ತಿರುವ ದೃಶ್ಯವು ಮೂಡಿಬಂದಿದ್ದು, ಮೇಲ್ಭಾಗದಲ್ಲಿ ಯುದ್ಧದಲ್ಲಿ ಮಡಿದ ವೀರನನ್ನು ಇಬ್ಬರು ಸುರಾಂಗನೆಯರು ಸ್ವರ್ಗಲೋಕಕ್ಕೆ ಚಾಮರಧಾರಿಣಿಯರಾಗಿ ಕೊಂಡ್ಯೊಯುತ್ತಿರುವ ದೃಶ್ಯ ಮೂಡಿಬಂದಿದೆ.

ಮತ್ತೊಂದು ಸಹ ಶಾಸನೋಕ್ತ ವೀರಗಲ್ಲಾಗಿದ್ದು, ಶಾಸನದ ಭಾಗಮಾತ್ರ ಮೇಲೆ ಕಂಡುಬರುತ್ತದೆ. ವೀರನ ತಲೆಯ ಭಾಗ ಕಂಡುಬಂದಿಲ್ಲ. ಈ ಶಾಸನೋಕ್ತ ವೀರಗಲ್ಲು ಭೂಮಿಯಲ್ಲಿ ಹೂತು ಹೋಗಿದ್ದು ಇನ್ನುಳಿದ ಭಾಗ ಭೂಮಿಯ ಮೇಲಿದೆ. ಈ ಶಾಸನ ಕಲ್ಲಿನ ಎತ್ತರ 2.3 ಅಡಿ ಅಗಲ 2.6 ಅಡಿ ಮತ್ತು 4 ಇಂಚು ದಪ್ಪವಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ವೀರನು ಬಿಲ್ಲು ಬಾಣವನ್ನು ಹಿಡಿದು ರಣರಂಗದಲ್ಲಿ ಹೋರಾಡುತ್ತಿದ್ದು ಈತನ ಹಿಂಭಾಗದಲ್ಲಿ 3 ಗೋವುಗಳು ಓಡಿ ಹೋಗುತ್ತಿರುವ ದೃಶ್ಯವನ್ನು ಖಂಡರಿಸಿದ್ದು ಮೇಲ್ಭಾಗದಲ್ಲಿ ಯುದ್ಧದಲ್ಲಿ ಮರಣ ಹೊಂದಿದ ವ್ಯಕ್ತಿಯನ್ನು ಇಬ್ಬರು ಚಾಮರಧಾರಿಣಿ ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಕೆತ್ತಲಾಗಿದೆ. ಈ ಎರಡು ಶಾಸನೋಕ್ತ ವೀರಗಲ್ಲುಗಳು ಕರ್ನಾಟಕ ರಾಜ್ಯ ಪ್ರಾಚ್ಯ, ವಸ್ತುಸಂಗ್ರಹಾಲಯಗಳ ಇಲಾಖೆರವರ ಸಂರಕ್ಷಣೆ ಯಲ್ಲಿದೆ.[17] ಮತ್ತೊಂದು ಶಾಸನಕಲ್ಲು ಪಕ್ಕದಲ್ಲಿ ಕಂಡುಬಂದಿದ್ದು ಅದರ ಮೇಲ್ಭಾಗ ಮುರಿದು ಹೋಗಿದೆ.ಉದ್ದ 1.6 ಅಡಿ ಅಗಲ 2 ಅಡಿ ಮುರಿದ ಭಾಗ ಕಂಡುಬರುತ್ತಿಲ್ಲ.

**ಅರದೇಶಹಳ್ಳಿ ಗ್ರಾಮದ ಇತರೇ ವೀರಗಲ್ಲುಗಳು**

ಅರದೇಶಹಳ್ಳಿಯಿಂದ ಬೆಟ್ಟೇನಹಳ್ಳಿಗೆ ಹೋಗುವ ಮಣ್ಣುರಸ್ತೆಯಲ್ಲಿ ಶಾಮಣ್ಣ, ವೆಂಕಟರತ್ನಶೆಟ್ಟಿ ಎಂಬುವರಿಗೆ ಸೇರಿದ ಜಮೀನಿನಲ್ಲಿ 5 ವೀರಗಲ್ಲುಗಳು ಕಂಡುಬಂದಿವೆ. ಇವುಗಳ ಬಗ್ಗೆ ಅರದೇಶಹಳ್ಳಿಯ ಗೋಪಾಲ್ ಎಂಬುವರಿಂದ ಮಾಹಿತಿಯನ್ನು ಪಡೆದಿದ್ದೇನೆ.[18]

**ವೀರಸ್ಮಾರಕ ಶಿಲ್ಪ**: ಈ ಶಿಲ್ಪವು ಸುಮಾರು 3 ಅಡಿ ಎತ್ತರ ಮತ್ತು 2 ಅಡಿ ಅಗಲ 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದ್ದು ಚಿತ್ರದಲ್ಲಿ ಯೋಧನನ್ನು ಸುಂದರವಾಗಿ ಕೆತ್ತಲಾಗಿದ್ದು ಯೋಧನು ಸ್ಥಳೀಯ ಪ್ರಾಂತ್ಯದವನೇ ಇರಬಹುದು ಎಂದು ಹೇಳಿದರೆ ತಪ್ಪಾಗಲಾರದು. ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರವನ್ನು ಮೇಲೆ ಎತ್ತದಂತೆ ಅಂದರೆ ಕಚ್ಚೆಯಂತೆ ಕಟ್ಟಿರುವುದು ಸುಂದರವಾಗಿ ಮೂಡಿಬಂದಿದ್ದು ಕಂಠದಲ್ಲಿ ಸರಗಳನ್ನು ಮಾಲೆಯಾಗಿ ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ಹಾಗೂ ತುಂಬಿದ ಅಗಲವಾದ ದಪ್ಪನೆಯ ಮುಖ ಹೊಂದಿದ್ದು ದಪ್ಪನೆಯ ಮೀಸೆ ಸುಂದರವಾದ ಆಕರ್ಷಕ ಕಣ್ಣುಗಳು ಸೊಗಸಾಗಿ ಈ ಶಿಲ್ಪಕಲೆಯಲ್ಲಿ ಮೂಡಿಬಂದಿರುವುದನ್ನು ಕಾಣಬಹುದು. ಜೊತೆಗೆ ಈತನು ಎರಡು ಕೈಗಳಲ್ಲಿ ಈಟಿ ಮತ್ತು ಕಮಂಡಲವನ್ನು ಆಯುಧವಾಗಿ ಹಿಡಿದಿರುತ್ತಾನೆ. ಈ ಶಿಲ್ಪಕಲೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯದಂತೆ ಮೂಡಿಬಂದಿದೆ. ಈ ತರಹದ ಶಿಲ್ಪಗಳು ಬಹುಶಃ ಮಹಿಷ ಮಂಡಲದ ಪ್ರಾಂತ್ಯದಲ್ಲಿ ಕಂಡು ಬಂದಿರುವುದನ್ನು ಕಾಣಬಹುದಾಗಿದೆ.

**ವೀರ ಸ್ಮಾರಕ ಶಿಲ್ಪ**: ಈ ಶಿಲ್ಪವು ಸುಮಾರು 3 ಅಡಿ ಎತ್ತರ ಮತ್ತು 2 ಅಡಿ ಅಗಲ 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದ್ದು ಚಿತ್ರದಲ್ಲಿ ಯೋಧನನ್ನು ಸುಂದರವಾಗಿ ಕೆತ್ತಲಾಗಿದ್ದು ಇದರಿಂದ ಈ ಯೋಧ ಸ್ಥಳೀಯ ಪ್ರಾಂತ್ಯದವನೇ ಇರಬಹುದು ಎಂದು ಹೇಳಿದರೆ ತಪ್ಪಾಗಲಾಗಲಾರದು, ಯೋಧನು ಒಬ್ಬ ಜಟ್ಟಿಯ ರೀತಿಯಲ್ಲಿ ವಸ್ತ್ರವನ್ನು ಮೇಲೆ ಎತ್ತದಂತೆ ಅಂದರೆ ಕಚ್ಚೆಯಂತೆ ಕಟ್ಟಿರುವುದು ಸುಂದರವಾಗಿ ಮೂಡಿಬಂದಿದ್ದು, ಕಂಠದಲ್ಲಿ ಸರಗಳನ್ನು ಮಾಲೆಯಾಗಿ ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ಹಾಗೂ ತುಂಬಿದ ಅಗಲವಾದ ದಪ್ಪನೆಯ ಮುಖ ಹೊಂದಿದ್ದು ದಪ್ಪನೆಯ ಮೀಸೆ ಸುಂದರವಾದ ಆಕರ್ಷಕ ಕಣ್ಣುಗಳು ಸೊಗಸಾಗಿ ಈ ಶಿಲ್ಪಕಲೆಯಲ್ಲಿ ಮೂಡಿಬಂದಿರುವುದನ್ನು ಕಾಣಬಹುದು ಜೊತೆಗೆ ಈತನು ಎರಡು ಕೈಗಳಲ್ಲಿ ಈಟಿ ಮತ್ತು ಕಮಂಡಲವನ್ನು ಆಯುಧವಾಗಿ ಹಿಡಿದಿರುತ್ತಾನೆ. ಈ ಶಿಲ್ಪಕಲೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯದಂತೆ ಮೂಡಿಬಂದಿದೆ. ಈ ತರಹದ ಶಿಲ್ಪಗಳು ಬಹುಶಃ ಮಹಿಷ ಮಂಡಲದ ಪ್ರಾಂತ್ಯದಲ್ಲಿ ಕಂಡು ಬಂದಿರುವುದನ್ನು ಕಾಣಬಹುದಾಗಿದೆ. ಮೇಲ್ತುದಿಯಲ್ಲಿ ನಂದಿಯ ಉಬ್ಬು ಶಿಲ್ಪದ ಕೆತ್ತನೆಯನ್ನು ಕಣಬಹುದು. ಆಯುಧಗಳು, ಬಿಲ್ಲು ಮತ್ತು ಬಾಣವನ್ನು ಕೆತ್ತಲಾಗಿದೆ. (ಚಿ.ಸಂ.174)

**ಹ್ಯಾಡಾಳ ಗ್ರಾಮದ ವೀರಗಲ್ಲುಗಳು**: ದೇವನಹಳ್ಳಿಯಿಂದ ಚನ್ನರಾಯಪಟ್ಟಣಕ್ಕೆ ಹೋಗುವ ರಸ್ತೆಯ ಮಾರ್ಗದಲ್ಲಿ, ಹ್ಯಾಡಾಳ ಗ್ರಾಮದ ಎಡಭಾಗದ ರಸ್ತೆಯ ಪಕ್ಕದಲ್ಲಿ ಏಳು ವೀರಗಲ್ಲು ಗುಡಿಗಳು ಕಂಡುಬಂದಿದ್ದು ಅವುಗಳ ವಿವರವನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ವೀರಮಾಸ್ತಿಗಲ್ಲು**: ಇದು ಸುಮಾರು 2 ಅಡಿ ಎತ್ತರ ಮತ್ತು 1.5 ಅಡಿ ಅಗಲವಾಗಿದ್ದು 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ.ಇದರಲ್ಲಿ ವೀರನು ಸುಂದರವಾದ ವಸ್ತ್ರಾಭರಣಗಳನ್ನು ಧರಿಸಿದ್ದು ಕೈಗಳಲ್ಲಿ ಆಯುಧಗಳಾದ ಖಡ್ಗ ಮತ್ತು ಗುರಾಣಿ ಹಿಡಿದು ವೀರಾವೇಶದಿಂದ ಹೋರಾಟಕ್ಕೆ ಹೊರಟಂತೆ ನಿಂತಿದ್ದು ಹಿಂಭಾಗದಲ್ಲಿ ಈತನ ಪತ್ನಿಯಿರುವುದನ್ನು ಕಾಣಬಹುದು.

**ವೀರಗಲ್ಲು**: ಇದು ಸುಮಾರು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 6 ಇಂಚು ದಪ್ಪನಾದ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ಇದರಲ್ಲಿ ಇಬ್ಬರು ವ್ಯಕ್ತಿಗಳು ವಸ್ತ್ರಾಧಾರಿಗಳಾಗಿದ್ದು ಕೈಗಳಲ್ಲಿ ಬಿಲ್ಲು, ಬಾಣ, ಖಡ್ಗ, ಗುರಾಣಿಯನ್ನು ಹಿಡಿದು ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವಂತೆ ಉಬ್ಬುಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.

**ಸ್ಮಾರಕ ಶಿಲ್ಪ**: ಈ ಶಿಲ್ಪವು 2 ಅಡಿ ಎತ್ತರ ಮತ್ತು 2 ಅಡಿ ಅಗಲವಾಗಿದ್ದು 6 ಇಂಚು ದಪ್ಪವಾಗಿದ್ದು ವೀರನು ಒಬ್ಬ ಜಟ್ಟಿಯ ರೀತಿಯಲ್ಲಿ ಕಚ್ಚೆಯಂತೆ ಕಟ್ಟಿರುವುದು ಸುಂದರವಾಗಿ ಮೂಡಿಬಂದಿದ್ದು ಈತನು ಕಂಠದಲ್ಲಿ ಸರಮಾಲೆಯನ್ನು ಧರಿಸಿದ್ದು ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ತುಂಬಿದ ಅಗಲವಾದ ದಪ್ಪನೆಯ ಮೀಸೆ, ಸುಂದರ ಆಕರ್ಷಕ ಕಣ್ಣುಗಳು ಸುಂದರವಾಗಿ ಶಿಲ್ಪಕಲೆಯಲ್ಲಿ ಮೂಡಿ ಬಂದಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2.5 ಅಡಿ ಎತ್ತರಮತ್ತು 3 ಅಡಿ ಅಗಲ, 6 ಇಂಚು ದಪ್ಪನಾದ ಗ್ರಾನೈಟ್ ಶಿಲೆಯದ್ದಾಗಿದೆ. ಇದು ಒಂದು ಪಟ್ಟಿಕೆಯಲ್ಲಿದ್ದು, ಇಬ್ಬರು ವೀರರು ವಸ್ತ್ರಾಧಾರಿಗಳಾಗಿದ್ದು ಕೈಗಳಲ್ಲಿ ಗದೆ ಮತ್ತು ಕತ್ತಿ ಹಿಡಿದಿದ್ದು ಕಂಠದಲ್ಲಿ ಕಂಠೀಹಾರ ಧರಿಸಿದ್ದು ಮತ್ತೊಬ್ಬ ವೀರನು ತನ್ನ ಕೈಗಳಲ್ಲಿ ಬಿಲ್ಲು ಮತ್ತು ಬಾಣ ಹಿಡಿದು ಯುದ್ಧಕ್ಕೆ ಸನ್ನದ್ಧರಾಗಿ ವೀರಾವೇಶದಿಂದ ಹೋರಾಟ ಮಾಡುವ ರೀತಿಯಲ್ಲಿ ಉಬ್ಬುಶಿಲ್ಪ ಕೆತ್ತನೆಯನ್ನು ಮಾಡಲಾಗಿದೆ.

**ವೀರಗಲ್ಲು**: ಇದು ಸುಮಾರು 2 ಅಡಿ ಎತ್ತರ ಮತ್ತು 3 ಅಡಿ ಅಗಲ, 6 ಇಂಚು ದಪ್ಪನಾದ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ಇದರಲ್ಲಿ ಇಬ್ಬರು ವ್ಯಕ್ತಿಗಳು ವಸ್ತ್ರಾಧಾರಿಗಳಾಗಿದ್ದು ಕೈಗಳಲ್ಲಿ ಬಿಲ್ಲು, ಬಾಣ, ಖಡ್ಗ, ಗುರಾಣಿಯನ್ನು ಹಿಡಿದು ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವಂತೆ ಉಬ್ಬುಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2.5 ಅಡಿ ಎತ್ತರ ಮತ್ತು 2 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದು ಒಂದು ಪಟ್ಟಿಕೆಯಿಂದ ಕೂಡಿದ್ದು ವೀರನು ಬಿಲ್ಲು ಬಾಣವನ್ನು ಹಿಡಿದು ವೀರಾವೇಶದಿಂದ ಯುದ್ಧಕ್ಕೆ ಹೊರಟಿರುವ ದೃಶ್ಯವನ್ನು ಕಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 3 ಅಡಿ ಎತ್ತರ ಮತ್ತು 1.2 ಅಡಿ ಅಗಲ, 6 ಇಂಚು ದಪ್ಪನಾದ ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಪಟ್ಟಿಕೆಯಿಂದೆ ಕೂಡಿದೆ. ಇದರಲ್ಲಿ ವೀರನು ಕತ್ತಿಯನ್ನು ಹೊರ ತೆಗೆದು ವೀರಾವೇಶದಿಂದ ಹೋರಾಡುತ್ತಾ ಸಾವನ್ನಪ್ಪಿರುವಂತೆ ಉಬ್ಬುಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 5 ಅಡಿ ಎತ್ತರ ಮತ್ತು 1.5 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ ಗ್ರಾನೈಟ್ ಶಿಲೆಯದ್ದಾಗಿದೆ.ಇದರಲ್ಲಿ ವೀರರು ವಸ್ತ್ರಾಧಾರಿಯಾಗಿದ್ದು, ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣವನ್ನು ಹಿಡಿದು ಸೊಂಟದ ಮೇಲೆ ಕೈಯನ್ನು ಹಾಕಿಕೊಂಡಿರುವುದನ್ನು ಕಾಣಬಹುದು. ಒಟ್ಟಾರೆ ಈ ಶಿಲ್ಪವು ಬಹಳ ಸುಂದರವಾಗಿದ್ದು ಕಲಾತ್ಮಕತೆಯ ಉಬ್ಬು ಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 3 ಅಡಿ ಎತ್ತರ ಮತ್ತು 3 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದ್ದು ಎರಡು ಪಟ್ಟಿಕೆಯಿಂದ ಕೂಡಿದ್ದು ಮೊದಲನೇ ಹಂತದಲ್ಲಿ ಮೂರು ಜನ ವೀರರು ಬಿಲ್ಲು ಬಾಣಗಳನ್ನು ತಮ್ಮ ಕೈಗಳಲ್ಲಿ ಹಿಡಿದು ವೀರಾವೇಶದಿಂದ ಹೋರಾಡುತ್ತಿರುವ ದೃಶ್ಯವಿದ್ದು, ಉಬ್ಬುಶಿಲ್ಪ ಕೆತ್ತನೆಯಿಂದ ಕೂಡಿದ್ದು, ವೀರನ ಹಿಂಭಾಗದಲ್ಲಿ ನಾಲ್ಕು ಗೋವುಗಳು ನಿಂತಿರುವುದನ್ನು ಕಾಣಬಹುದು. ಅಂದರೆ ಯುದ್ಧದಲ್ಲಿ ಇವುಗಳು ತಮ್ಮ ಪ್ರಾಣವನ್ನು ಅರ್ಪಿಸಿರುವುದನ್ನು ಕಾಣಬಹುದು. ಮೇಲ್ಭಾಗದ ಪಟ್ಟಿಕೆಯಲ್ಲಿ ಈ ಯುದ್ಧದಲ್ಲಿ ಮರಣ ಹೊಂದಿದ ವ್ಯಕ್ತಿಯನ್ನು ಇಬ್ಬರು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಖಂಡರಿಸಲಾಗಿದ್ದು ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಉಬ್ಬು ಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 5 ಅಡಿ ಎತ್ತರ ಮತ್ತು 2 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ವೀರನು ಬಿಲ್ಲು, ಬಾಣವನ್ನು ಹಿಡಿದಿದ್ದು ವೀರಾವೇಶದಿಂದ ಯುದ್ಧಕ್ಕೆ ಹೊರಟಿರುವಂತೆ ಶಿಲ್ಪವನ್ನು ಖಂಡರಿಸಲಾಗಿದ್ದು ಇದರ ಮೇಲ್ಭಾಗದಲ್ಲಿ ಯುದ್ಧದಲ್ಲಿ ಸತ್ತ ವೀರನನ್ನು ಇಬ್ಬರು ಚಾಮರಧಾರಿಣಿ ದೇವಕನ್ಯೆಯರು ಕರೆದೊಯ್ಯುತ್ತಿರುವ ದೃಶ್ಯವನ್ನು ಕಂಡರಿಸಲಾಗಿದೆ.

**ಗೋಗ್ರಹಣದ ವೀರಗಲ್ಲು**: ಈ ವೀರಗಲ್ಲು ಸುಮಾರು 2.5 ಅಡಿ ಎತ್ತರ ಮತ್ತು 3 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಒಂದು ಪಟ್ಟಿಕೆಯದ್ದಾಗಿದೆ. ಇದರಲ್ಲಿ ವೀರನು ಯುದ್ಧದಲ್ಲಿ ಹೋರಾಡಲು ವೀರಾವೇಶದಿಂದ ಕೈಗಳಲ್ಲಿ ಬಿಲ್ಲು, ಬಾಣವನ್ನು ಹಿಡಿದು

ನಿಂತಿರುವುದು ಹಾಗೂ ಈತನ ಹಿಂಭಾಗದಲ್ಲಿ ಮೂರು ಗೋವುಗಳು ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಮಾಸ್ತಿ ಕಲ್ಲು**: ಇದು ಸುಮಾರು 3 ಅಡಿ ಎತ್ತರ ಮತ್ತು 2 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇಬ್ಬರು ದಂಪತಿಗಳು ಅಲಂಕಾರಭರಿತ ವಸ್ತ್ರಾಧಾರಿ ಯಾಗಿದ್ದು ಕೈಗಳಲ್ಲಿ ಯುದ್ಧದ ಸಲಕರಣೆಗಳನ್ನು ಹಿಡಿದು ಯುದ್ಧದಲ್ಲಿ ಹೋರಾಡಿ ಹಾರವಾಗಿರುವ ದೃಶ್ಯವನ್ನು ಕಂಡರಿಸಲಾಗಿದೆ. (ಚಿ.ಸಂ.175)

**ವಾಜರಹಳ್ಳಿ ಗ್ರಾಮದ ವೀರಗಲ್ಲುಗಳು**: ಈ ಗ್ರಾಮವು ಬೇಚರಾಕ್ ಗ್ರಾಮವಾಗಿದ್ದು ಶ್ಯಾನಪ್ಪನಹಳ್ಳಿ ಮತ್ತು ವಿಶ್ವನಾಥಪುರ ಗ್ರಾಮಗಳಗೆ ಸಮೀಪದಲ್ಲಿದೆ. ಈ ಗ್ರಾಮದಲ್ಲಿ 7 ವೀರಗಾರರ ಮಂಟಪದಲ್ಲಿ ವೀರಗಲ್ಲುಗಳು ಕಂಡುಬಂದಿದ್ದು ಅವುಗಳ ವಿವರವನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2 ಅಡಿ ಎತ್ತರ ಮತ್ತು 1 ಅಡಿ ಅಗಲವಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ವೀರನು ಈಟಿ ಮತ್ತು ಭರ್ಜಿಯನ್ನು ಹಿಡಿದು ನಿಂತಿದ್ದಾನೆ.

**ವೀರಗಲ್ಲು**: ಇದು ಸುಮಾರು 2.5 ಅಡಿ ಎತ್ತರ, 1.5 ಅಡಿ ಅಗಲ, 4 ಇಂಚು ದಪ್ಪವಾಗಿದೆ. ವೀರನು ಈಟಿಯನ್ನು ಹಿಡಿದು ನಿಂತಿರುವ ದೃಶ್ಯವನ್ನು ಕಂಡರಿಸಲಾಗಿದೆ.

**ವೀರಮಾಸ್ತಿ ಕಲ್ಲು**: ಈ ವೀರಮಸ್ತಿಕಲ್ಲು 1 ಅಡಿ ಎತ್ತರ ಮತ್ತು 2 ಅಡಿ ಅಗಲ, 5 ಇಮಚು ದಪ್ಪನಾದ ವೀರಗಲ್ಲಾಗಿದ್ದು ಇಬ್ಬರು ದಂಪತಿಗಳು ಯುದ್ಧದಲ್ಲಿ ಹೋರಾಡಿ ಹಾರವಾಗಿರುವುದನ್ನು ಕಾಣಬಹುದು.

**ವೀರಗಲ್ಲುಗಳು**: ಮೊದಲನೇ ವೀರಗಲ್ಲು 1 ಅಡಿ ಎತ್ತರ ಮತ್ತು 2 ಅಡಿ ಅಗಲವಿದ್ದು, ಮೂರು ವೀರಗಲ್ಲುಗಳಲ್ಲಿ ವೀರನು ಈಟಿ, ಭರ್ಜಿ, ಕತ್ತಿ, ಬಿಲ್ಲು, ಬಾಣಗಳನ್ನು ಹಿಡಿದು ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2.5 ಅಡಿ ಎತ್ತರ ಮತ್ತು 1.5 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ವೀರನು ಕೈಗಳಲ್ಲಿ ಈಟಿ ಮತ್ತು ಖಡ್ಗವನ್ನು ಹಿಡಿದು ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಗಲ್ಲು**: ಎರಡನೆಯ ವೀರಗಲ್ಲಿನಲ್ಲಿ ವೀರನು ಕೈಗಳಲ್ಲಿ ಗುರಾಣಿ ಮತ್ತು ಕತ್ತಿಯನ್ನು ಹಿಡಿದು ನಿಂತಿರುವ ದೃಶ್ಯವನ್ನು ಖಂಡರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲಿನಲ್ಲಿ ವೀರರು ಕತ್ತಿ ಮತ್ತು ಭರ್ಜಿಯನ್ನು ಹಿಡಿದು ನಿಂತಿರುವುದನ್ನು ಕಾಣಬಹುದು. (ಚಿ.ಸಂ.176)

**ಮೀಸಗಾನಹಳ್ಳಿ ಗ್ರಾಮದ ವೀರಗಲ್ಲುಗಳು**: ಮೀಸಗಾನಹಳ್ಳಿಯ ಗ್ರಾಮದ ಮಧ್ಯಭಾಗದಲ್ಲಿ ಒಂದು ಕಂಬವಿದ್ದು ಕಂಬದ ಇಕ್ಕೆಲಗಳಲ್ಲಿ ಎರಡು ವೀರಗಲ್ಲುಗಳು ಕಂಡುಬಂದಿದ್ದು ಕಂಬದ ಎತ್ತರ ಸುಮಾರು 7 ಅಡಿಗಳಾಗಿದ್ದು ಕಂಬವು ಚೌಕ, ಅಷ್ಟ ಮಾದರಿಯನ್ನು ಮತ್ತು ಆವರಣವನ್ನು ಹೊಂದಿದ್ದು ಮತ್ತು ಇದೇ ಗ್ರಾಮದ ಊರ ಹೊರವಲಯದಲ್ಲಿ ಕಲ್ಲುಮಂಟಪದಲ್ಲಿ ಎರಡು ವೀರಗಲ್ಲುಗಳು ಕಂಡುಬಂದಿದ್ದು ಅವುಗಳ ವಿವರವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು 2.5 ಅಡಿ ಎತ್ತರ ಮತ್ತು 1 ಅಡಿ ಅಗಲ, 6 ಇಂಚು ದಪ್ಪನಾಗಿದ್ದು ವೀರನು ಈಟಿ ಮತ್ತು ಗದೆಯನ್ನು ಹಿಡಿದಿರುವುದನ್ನು ಕಾಣಬಹುದು.

**ವೀರಮಾಸ್ತಿ ಕಲ್ಲು**: ಇದು 2 ಅಡಿ ಎತ್ತರ ಮತ್ತು 1.5 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ.ಇದರಲ್ಲಿ ವೀರಾವೇಶದಿಂದ ಹೋರಾಡಿದ ಪತಿಯ ಜೊತೆ ಪತ್ನಿಯು ಸಹಕಾರಿಯಾಗಿ ಯುದ್ಧದಲ್ಲಿ ಮರಣ ಹೊಂದಿದ ದೃಶ್ಯವನ್ನು ಉಬ್ಬುಶಿಲ್ಪ ಕೆತ್ತನೆಯಲ್ಲಿ ಖಂಡರಿಸಲಾಗಿದೆ. (ಚಿ.ಸಂ.177)

**ಗುಳ್ಳೋಬನಹಳ್ಳಿ ಗ್ರಾಮದ ವೀರಗಲ್ಲುಗಳು:** ದೇವನಹಳ್ಳಿಯ ದೊಡ್ಡಕೆರೆಯಿಂದ ನೀಲೇರಿಗೆ ಹೋಗುವ ರಸ್ತೆಯಲ್ಲಿ ಎಡಭಾಗದ ಗುಡಿಯೊಳಗೆ ವೀರಗಲ್ಲುಗಳು ಕಂಡುಬಂದಿದ್ದು ಇಲ್ಲಿ ಒಟ್ಟು ಆರು ವೀರಗಲ್ಲುಗಳನ್ನು ಸಂರಕ್ಷಿಸಿದ್ದಾರೆ. ಅವುಗಳ ವಿವರವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಮಾಸ್ತಿಕಲ್ಲು**: ಇದು 2.5 ಅಡಿ ಎತ್ತರ ಮತ್ತು 3 ಅಡಿ ಅಗಲ, 4 ಇಂಚು ದಪ್ಪನಾಗಿದ್ದು ಇಬ್ಬರು ಸ್ತ್ರೀಯರು ತಮ್ಮ ಕೈಗಳಲ್ಲಿ ಕಮಂಡಲವನ್ನು ಹಿಡಿದು ವೀರ ವನಿತೆಯರಂತೆ ನಿಂತಿರುವ ದೃಶ್ಯವನ್ನು ಕಾಣಬಹುದು.

**ವೀರಮಾಸ್ತಿಕಲ್ಲು**: ಈ ಶಿಲೆಯು ಸುಮಾರು 2.5 ಅಡಿ ಎತ್ತರ ಮತ್ತು 3.5 ಅಡಿ ಅಗಲ 7 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆದ್ದಾಗಿದೆ.ಇದರಲ್ಲಿ ನಾಲ್ಕು ಜನ ವ್ಯಕ್ತಿಗಳಿದ್ದು ಮುಂಭಾಗದಲ್ಲಿ

ದಂಪತಿಗಳು ಯುದ್ಧದಲ್ಲಿ ಹೋರಾಡಿ ಹಾರವಾಗಿರುವುದಂಟು. ಇವರ ಹಿಂಭಾಗದಲ್ಲಿ ಇಬ್ಬರು ವೀರಯೋಧರು ಆಯುಧಗಳನ್ನಿಡಿದು ಹಾರವಾಗಿರುವ ದೃಶ್ಯವನ್ನು ಕಂಡರಿಸಲಾಗಿದೆ.

**ವೀರಮಾಸ್ತಿಕಲ್ಲು**: ಈ ವೀರಮಾಸ್ತಿಕಲ್ಲು 2 ಅಡಿ ಎತ್ತರ ಮತ್ತು 2 ಅಡಿ ಅಗಲ 4 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ಇದರಲ್ಲಿ ವೀರನು ಕತ್ತಿ, ಗುರಾಣಿ ಹಿಡಿದು ಯುದ್ಧಕ್ಕೆ ಸನ್ನದ್ಧನಾಗಿ ವೀರಾವೇಶದಿಂದ ಹೊರಟಿದ್ದು ಈತನ ಹಿಂಬದಿಯಲ್ಲಿ ಪತ್ನಿಯು ಸಹ ಜೊತೆಗೂಡಿ ಹಾರವಾಗಿರುವುದನ್ನು ಕಾಣಬಹುದು.(ಚಿ.ಸಂ.178)

**ಬ್ಯಾಡರಹಳ್ಳಿ ಗ್ರಾಮದ ಶಾಸನೋಕ್ತ ಸತಿಗಲ್ಲು ಮತ್ತು ವೀರಗಲ್ಲುಗಳು**: ಬ್ಯಾಡರಹಳ್ಳಿ ಗ್ರಾಮವು ಕುಂದಾಣ ಹೋಬಳಿಯಲ್ಲಿದ್ದು ಈ ಗ್ರಾಮದ ವೀರಗಲ್ಲುಗಳ ಬಗ್ಗೆ ಗ್ರಾಮದ ವಾಸಿಯಾದ ಮಟದಪ್ಪ ಎಂಬುವರು ಮಾಹಿತಿ ನೀಡಿರುತ್ತಾರೆ.ಈ ಗ್ರಾಮದ ಮರಿಶಾಮಪ್ಪ ಎಂಬುವರಿಗೆ ಸೇರಿದ ಜಮೀನಿನಲ್ಲಿರುವ ನೀಲಗಿರಿ ತೋಪಿನಲ್ಲಿ ಮಣ್ಣುರಸ್ತೆಗೆ ಹೊಂದಿಕೊಂಡಂತೆ ಶಾಸನೋಕ್ತ ಸತಿಗಲ್ಲು ಕಂಡುಬಂದಿದ್ದು ಇದರ ಎತ್ತರ 8 ಅಡಿ ಮತ್ತು ಅಗಲ 5 ಅಡಿಗಳಾಗಿದ್ದು ಮೂರು ಪಟ್ಟಿಕೆಗಳಿಂದ ಕೂಡಿದೆ. ಮೊದಲನೇ ಪಟ್ಟಿಕೆಯಲ್ಲಿ ಯುದ್ಧಕ್ಕೆ ಸನ್ನದ್ಧರಾಗಿದ್ದು ವಿವಿಧ ರೀತಿಯ ಆಯುಧಗಳಾದ ಬಿಲ್ಲು, ಬಾಣ, ಕತ್ತಿ, ಈಟಿ, ಭರ್ಜಿ, ಫಿರಂಗಿಗಳು, ಅಶ್ವದಳ, ರಥದಳ ಎಂಬಂತಹ ಪ್ರಾಚೀನ ಸೈನಿಕ ವ್ಯವಸ್ಥೆಯನ್ನು ನಿರೂಪಿಸುವಂತಹ ಹಾಗೂ ಪೌರಾಣಿಕ ಕಥಾನಿರೂಪಣಾ ಶಿಲ್ಪಗಳನ್ನು ಆಧರಿಸಿದ ಭಾಗದ ರೂಪದಲ್ಲಿ ಉಬ್ಬುಶಿಲ್ಪ ಕೆತ್ತನೆಯನ್ನು ಕೆತ್ತಲಾಗಿದ್ದು ಕುದುರೆಯ ಉಬ್ಬುಶಿಲ್ಪ ಕೆತ್ತನೆ ಚಾಮರಧಾರಿಣಿಯರು, ಸೈನಿಕರನ್ನು ಕಾಣಬಹುದು.

ಎರಡನೇ ಪಟ್ಟಿಕೆಯಲ್ಲಿ ಈ ಯುದ್ಧದಲ್ಲಿ ಪತಿ ಪತ್ನಿಯರಿಬ್ಬರು ಆಸೀನ ಭಂಗಿಯಲ್ಲಿ ಕುಳಿತಿರುವಂತೆ ಕಂಡರಿಸಲಾಗಿದ್ದು ಇದರ ಮೇಲ್ಭಾಗದಲ್ಲಿ ಅಂದರೆ ಮೂರನೇ ಪಟ್ಟಿಕೆಯಲ್ಲಿ ಈ ಯುದ್ಧದಲ್ಲಿ ಮಡಿದ ದಂಪತಿಗಳನ್ನು ಇಬ್ಬರು ಚಾಮರಧಾರಿಣಿ ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯಗಳನ್ನು ಕಾಣಬಹುದಾಗಿದೆ.[19] ಒಟ್ಟಾರೆಯಾಗಿ ಇದೊಂದು ಈ ಭಾಗದಲ್ಲಿ ಕಂಡುಬಂದಿರುವ ಅಪರೂಪದ ಸತಿಗಲ್ಲಾಗಿದೆ ಹಾಗೂ ಇದೇ ಗ್ರಾಮದ ಗೋವಿಂದ ಸ್ವಾಮಿ ಮತ್ತು ಕೆಂಪಣ್ಣನವರ ಜಮೀನಿನಲ್ಲಿ ಒಂದು ವೀರಗಲ್ಲು ಮತ್ತು ಪಿಳ್ಳಪ್ಪಯ್ಯರವರ ಜಮೀನಿನಲ್ಲಿ ಮೂರು ವೀರಗಲ್ಲುಗಳು ಕಂಡುಬಂದಿದ್ದು ಅವುಗಳ ವಿವರವನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 5 ಅಡಿ ಎತ್ತರ ಮತ್ತು 3 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಬಿಳಿಯ ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಹಂತದಿಂದ ಕೂಡಿದ್ದು ಇಲ್ಲಿ ವೀರನು

ಬಿಲ್ಲು ಬಾಣಗಳನ್ನು ಹಿಡಿದು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವಂತೆ ಕಂಡರಿಸಿದ್ದು ಈತನ ಹಿಂಬದಿಯಲ್ಲಿ ಎರಡು ವರಹಗಳು, ಹಾರ, ಒಂದು ಕುದುರೆ ಮುಂಭಾಗದಲ್ಲಿ ಮೇದುಕೆಯನ್ನಿಟರುವುದು ಕಾಣಬರುತ್ತದೆ. ಇದರ ಮುಂಭಾಗದಲ್ಲಿ ಯುದ್ಧದಲ್ಲಿ ಮಡಿದ ವೀರನನ್ನು ಇಬ್ಬರು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.(ಚಿ.ಸಂ.179)

**ಕಾರಹಳ್ಳಿ ಗ್ರಾಮದ ವೀರಗಲ್ಲುಗಳು**: ತೈಲಗೆರೆ ಗ್ರಾಮಕ್ಕೆ ಹೋಗುವ ರಸ್ತೆ ಬದಿಯ ಮಂಟಪದಲ್ಲಿ ವೀರಗಾರರ ಗುಡಿ ಎರಡು ಮಂಟಪಗಳಲ್ಲಿ, ಬಯಣ್ಣ, ದ್ಯಾವಪ್ಪ ಮತ್ತು ಅಜ್ಜೋರು ಚಂದ್ರಪ್ಪನವರ ಜಮೀನಿನಲ್ಲಿ ಕಂಡುಬಂದಿವೆ. (ಚಿ.ಸಂ.180)

**ಕೆಂಪತಿಮ್ಮನಹಳ್ಳಿ ಗ್ರಾಮದ ವೀರಗಲ್ಲುಗಳು:** ಉಗನವಾಡಿಯಿಂದ ಕೆಂಪತಿಮ್ಮನಹಳ್ಳಿಗೆ ಹೋಗುವ ರಸ್ತೆಯ ಎಡಭಾಗದಲ್ಲಿ 10 ಅಡಿ ಉದ್ದ ಮತ್ತು ಅಗಲ 6 ಅಡಿಗಳ ಮಂಟಪದಲ್ಲಿ ಎರಡು ವೀರಗಲ್ಲುಗಳು ಕಂಡುಬಂದ್ದು ಇವು ಪೂರ್ವಾಭಿಮುಖವಾಗಿದ್ದು ಅವುಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ವೀರಗಲ್ಲು**: ಈ ವೀರಗಲ್ಲು ಸುಮಾರು 2 ಅಡಿ ಎತ್ತರ ಮತ್ತು 2 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯದ್ದಾಗಿದೆ. ಇದರಲ್ಲಿ ವೀರನು ಬಿಲ್ಲು, ಬಾಣವನ್ನು ಹಿಡಿದು ವೀರಾವೇಶದಿಂದ ಹೋರಾಡಿ ಹಾರವಾಗಿರುವುದು ಮತ್ತು ಇದರ ಹಿಂಭಾಗದಲ್ಲಿ ತನ್ನ ಪತ್ನಿಯನ್ನು ನಿಲ್ಲಿಸಿಕೊಂಡಿರುವುದನ್ನು ಕಾಣಬಹುದು.

**ತುರುಗೋಳ್ ವೀರಗಲ್ಲು**: ಇದು 1.5 ಅಡಿ ಎತ್ತರ ಮತ್ತು 2 ಅಡಿ ಅಗಲ, 4 ಇಂಚು ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೂಡಿದೆ. ಇದರಲ್ಲಿ ವೀರನು ಕುದುರೆಯ ಮೇಲೆ ಕುಳಿತು ವೀರಾವೇಶದಿಂದ ಯುದ್ಧಕ್ಕೆ ಸನ್ನದ್ಧನಾಗಿ ವೈರಿಯನ್ನು ಈಟಿಯಿಂದ ಚುಚ್ಚುವ ರೀತಿಯಲ್ಲಿ ಗುರಾಣಿ ಮತ್ತು ಖಡ್ಗವನ್ನು ಹಿಡಿದು ಓಡುತ್ತಿರುವ ದೃಶ್ಯವನ್ನು ಕಂಡರಿಸಲಾಗಿದೆ. (ಚಿ.ಸಂ.181)

**ಮಂಡಿಬೆಲೆ ಗ್ರಾಮದ ವೀರಗಲ್ಲುಗಳು**: ದೇವನಹಳ್ಳಿ ತಾಲೂಕು ವಿಜಯಪುರ ಹೋಬಳಿ ಮಂಡಿಬೆಲೆ ಗ್ರಾಮದ ಹೊರವಲಯದಲ್ಲಿರುವ ಆಂಜನೇಯ ಗುಡಿ ಪಕ್ಕದಲ್ಲಿ ಒಟ್ಟು 11 ವೀರಗಲ್ಲುಗಳು ಕಂಡು ಬಂದಿದ್ದು ಇವು ಬಿಳಿ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಇವುಗಳ ಎತ್ತರ ಸುಮಾರು 2.5 ಅಡಿ ಮತ್ತು ಅಗಲ 2.5 ಅಡಿಗಳಾಗಿದ್ದು ಅವುಗಳ ವಿವರವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.[20]

**ವೀರಗಲ್ಲುಗಳು:(1 ರಿಂದ 8)**: ಇಲ್ಲ ಕಂಡು ಬರುವ ಎಂಟು ವೀರಗಲ್ಲುಗಳು 2.5 ಅಡಿ ಎತ್ತರ ಮತ್ತು 1.5 ಅಡಿ ಅಗಲ, 5 ಇಂಚು ದಪ್ಪನಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ ಗ್ರಾನೈಟ್ ಶಿಲೆಯ ವೀರಗಲ್ಲಾಗಿವೆ. ಒಂದರಲ್ಲಿ ವೀರನು ಖಡ್ಗ ಮತ್ತು ಈಟಿಯನ್ನು ಹಿಡಿದು ನಿಂತಿರುವುದು, ಎರಡನೆಯದರಲ್ಲಿ ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದಿರುವುದು, ಮೂರನೆಯದರಲ್ಲಿ ವೀರನು ಕುದುರೆಯ ಮೇಲೆ ಕುಳಿತು ಈಟಿ ಮತ್ತು ಭರ್ಜಿಯನ್ನು ಹಿಡಿದು ಸವಾರಿ ಮಾಡುತ್ತಿರುವುದ, ನಾಲ್ಕನೆಯದರಲ್ಲಿ ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದಿರುವುದು, ಐದನೆಯದರಲ್ಲಿ ವೀರನು ಭರ್ಜಿ ಮತ್ತು ಕತ್ತಿ ಹಿಡಿದಿರುವುದು, ಆರನೆಯದರಲ್ಲಿ ಕತ್ತಿಯನ್ನು ಹಿಡಿದು ನಿಂತಿರುವುದು, ಏಳನೆಯದರಲ್ಲಿ ಈಟಿ ಮತ್ತು ಭರ್ಜಿ ಹಿಡಿದಿರುವುದು, ಎಂಟನೆಯದರಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದಿರುವಂತೆ ಎಲ್ಲಾ ವೀರಗಲ್ಲುಗಳಲ್ಲಿ ಉಬ್ಬು ಶಿಲ್ಪ ಕೆತ್ತನೆಯನ್ನು ಕಂಡರಿಸಲಾಗಿದೆ.(ಚಿ.ಸಂ.182)

**ಸಾರಂಗಧಾರ ಶಾಸನೋಕ್ತ ವೀರಗಲ್ಲು–ಕೊಯಿರಾ:** ಕೊಯಿರಾ ಐತಿಹಾಸಿಕ ಮಹತ್ವ ಪಡೆದ ಗ್ರಾಮವಾಗಿದ್ದು ಇಲ್ಲರುವ ವೀರಗಲ್ಲು ಸಾರಂಗಧಾರನ ಬಗ್ಗೆ ತಿಳಿಸುತ್ತದೆ[21] ಈ ಭಾಗದಲ್ಲಿ ಸ್ಥಳೀಯವಾಗಿ ಸಾರಂಗಧಾರ ಕಥೆಯು ಹೆಚ್ಚು ಜನಪ್ರಿಯವಾಗಿದೆ. ಇದನ್ನು ಜಾನಪದ ಮತ್ತು ನಾಟಕಗಳಲ್ಲಿ ಅಭಿವ್ಯಕ್ತಪಡಿಸಲಾಗುತ್ತಿದೆ. ಇಲ್ಲಿನ ಸ್ಥಳೀಯ ಚರಿತ್ರೆಯಂತೆ ರಾಜಘಟ್ಟ ರಾಜಧಾನಿ ಗೋವಿಶೆಟ್ಟಿಹಳ್ಳಿ ಗೊಂದಲ, ಅರುವನಹಳ್ಳಿ ಅರಿವು ಮೂಡಿಸಿದ್ದು ಮನಗೊಂಡನಹಳ್ಳಿ ಮಾತುಕತೆ ಮುಗಿಸಿದು ಕೊಯಿರಾದಲ್ಲಿ ಕೊಯ್ದು ಹಾಕಿದ್ದು ಎಂಬಐತಿಹ್ಯ ಪ್ರಚಲಿತದಲ್ಲಿದೆ. ಈ ವೀರಗಲ್ಲು ಕೊಯಿರಾ ಗ್ರಾಮದ ಸರ್ವೇ ನಂ.9 ರಲ್ಲಿ ನಾಗರಾಜು ಎಂಬುವವರ ಜಮೀನಿನಲ್ಲಿದೆ.

ಇದು ಶಾಸನೋಕ್ತ ವೀರಗಲ್ಲು ಶಿಲ್ಪವಾಗಿದ್ದು ಇದರ ಉದ್ದ 5.5 ಅಡಿ ಮತ್ತು ಅಗಲ 5.11 ಅಡಿ ಮತ್ತು 6 ಇಂಚು ದಪ್ಪವನ್ನು ಹೊಂದಿದೆ.ಈ ಶಿಲ್ಪವು ಗ್ರಾನೈಟ್ ಶಿಲೆಯದ್ದಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದ್ದು ವೀರನು ಕುದುರೆಯ ಮೇಲೆ ಬಂದು ವೀರಾವೇಶದಿಂದ ಹೋರಾಡಲು ಸನ್ನದ್ಧನಾಗಿ ನಿಂತಿರುವಂತೆ ಅಶ್ವದಳ, ಕಾಲ್ದಳ, ಗಜದಳ ಎಂಬ ಸೈನಿಕ ವ್ಯವಸ್ಥೆ ಚಿತ್ರಿಸಲ್ಪಟ್ಟಿದೆ. ವೀರನ ಕೂದಲನ್ನು ಸುಂದರವಾಗಿ ಕೆತ್ತಲಾಗಿದ್ದು ಆತನನ್ನು ರಾಜನಂತೆ ಬಿಂಬಿಸಿದ್ದು ಯುದ್ಧವನ್ನು ಮುನ್ನೆಡೆಸಿರುವಂತೆ ಚಿತ್ರಿಸಲಾಗಿದೆ. ವೀರನು ಕುದರೆ ಮೇಲೆ ಬಂದು ಹೋರಾಟ ಮಾಡುತ್ತಿರುವಂತೆ ಕೈಯಲ್ಲಿ ಕತ್ತಿ ಗುರಾಣಿ ಹಿಡಿದಿರುವಂತೆ ಚಿತ್ರಿಸಲಾಗಿದೆ. ಯುದ್ಧದಲ್ಲಿ ಎದುರಾಳಿಯು ಆನೆಯ ಮೇಲೆ ಕುಳಿತು ರಭಸದಿಂದ ಹೋರಾಡುತ್ತಿರುವ ಮತ್ತು ಆನೆಯ ಸೊಂಡಿಲು ಮುರಿದು ಬಿದ್ದಿರುವ ದೃಶ್ಯವನ್ನು ಕಂಡರಿಸಲಾಗಿದೆ. ವೀರನ ಕೆಳಭಾಗದಲ್ಲಿ ಇಬ್ಬರು ಸತ್ತಿರುವ ದೃಶ್ಯವಿದ್ದು, ಇದರ ಮೇಲ್ಭಾಗದಲ್ಲಿ ಯುದ್ಧದಲ್ಲಿ ಸತ್ತ ವ್ಯಕ್ತಿಯನ್ನು ಇಬ್ಬರು

ಚಾಮರಧಾರಿಣಿ ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವೂ ಬಹಳ ವಿಶೇಷವಾಗಿದೆ.(ಚಿ.ಸಂ.183)

ಹೀಗೆ ಈ ಮೇಲೆ ತಿಳಿಸಿದ ಎಲ್ಲ ವೀರಗಲ್ಲುಗಳನ್ನು ಗಮನಿಸಿದಾಗ ದೇವನಹಳ್ಳಿ ತಾಲೂಕಿನಲ್ಲಿ ಕಂಡುಬಂದಿರುವ ವೀರಗಲ್ಲು, ಮಾಸ್ತಿಕಲ್ಲು, ವೀರಮಾಸ್ತಿಕಲ್ಲುಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿ ಶೈವ, ವೈಷ್ಣವ ಧರ್ಮಕ್ಕೆ ಸೇರಿದಂತಹ ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಪ್ರಾಮುಖ್ಯತೆ ಪಡೆದಿರುವ ಅನೇಕ ವೀರಗಾರರಗುಡಿಗಳು ಈ ತಾಲೂಕಿನಲ್ಲಿ ಕಂಡು ಬಂದಿರುವುದು ಒಂದು ವಿಶೇಷ ಎನ್ನಬಹುದು.

**ಅಪ್ರಕಟಿತ ಶಾಸನೋಕ್ತ ವೀರಗಲ್ಲುಗಳು**

**ಕಾರಹಳ್ಳಿ ಗ್ರಾಮದ ಶಾಸನೋಕ್ತ ವೀರಗಲ್ಲುಗಳು:** ಕಾರಹಳ್ಳಿ ಗ್ರಾಮದ ಪುಟ್ಟೇನಹಳ್ಳಿ ಶಿವಣ್ಣ ಎಂಬುವರು ನೀಡಿದ ಮಾಹಿತಿಯನ್ನು ಆಧರಿಸಿ ಪರಿಶೀಲಿಸಿದಾಗ, ಕಾರಹಳ್ಳಿ ಗ್ರಾಮದ ಬಯಣ್ಣನವರ ಜಮೀನಿನಲ್ಲಿ 7 ವೀರಗಲ್ಲುಗಳು ಕಂಡುಬಂದಿದ್ದು ಅವುಗಳು ಬಿಳಿ ಗ್ರಾನೈಟ್ ಶಿಲೆಯಿಂದ ರಚಿಸಲ್ಪಟ್ಟಿದ್ದು ಇತ್ತೀಚಿಗೆ ಜಮೀನಿನ ಮಾಲೀಕರು ಅವುಗಳನ್ನು ತಮ್ಮ ಜಮೀನಿನ ಪಕ್ಕದಲ್ಲಿ ನಿಲ್ಲಿಸಿದ್ದಾರೆ. ಈ 7 ವೀರಗಲ್ಲುಗಳಲ್ಲಿ 4 ಶಾಸನೋಕ್ತ ವೀರಗಲ್ಲುಗಳಾಗಿದ್ದು,[22] ಅವುಗಳ ಬಗ್ಗೆ ಈ ಮುಂದಿನಂತೆ ವಿವರಿಸಲಾಗಿದೆ.

1. **ಶಾಸನೋಕ್ತ ತುರುಗೋಳ್ ವೀರಗಲ್ಲು:** ಇದರ ಎತ್ತರ 5.7 ಅಡಿ ಮತ್ತು ಅಗಲ 4.5 ಅಡಿ ದಪ್ಪ ೯ ಇಂಚು ಆಗಿದ್ದು ಬಿಳಿ ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಕಲ್ಲಿನ ಎಡ ಬಲ ಮತ್ತು ಮೇಲ್ಭಾಗದಲ್ಲಿ ಕನ್ನಡ ಲಿಪಿಯ ಶಾಸನವಿದೆ. (ಚಿ.ಸಂ.184)

**ಶಾಸನ ಪಾಠ**

1. ಸ್ವಸ್ತಿ ಶ್ರೀ ಜರಿನಗರ ಮಹಾರಾಜ..ಯ್ವದಿ
2. ಮೆರಲಿ ಆ..ಲಾನೆ..
3. ಜಿಗನ..ರವಿಲ್ವ.
4. ನಾಳುತ್ತಂ ವಿ(ಲ್ವ) ತು ಭಾಗದೊಳಗೆ
5. ಒನ್ದು ಭಾಗಮ(ಂ) ಕೊಟ್ಟರ್ ಒ
6. ಸ ಧ್ಕ.ರಾ
7. ಟ್ಟ-ನ್

ಕಾಲ ಕ್ರಿ.ಶ. ಸುಮಾರು 10ನೆಯ ಶತಮಾನ

ಭಾಷೆ ಮತ್ತು ಲಿಪಿ-ಕನ್ನಡ

2. **ಶಾಸನೋಕ್ತ ತುರುಗೋಳ್ ವೀರಗಲ್ಲು:** ಇದರ ಎತ್ತರ 5 ಅಡಿ ಮತ್ತು ಅಗಲ 3.4 ಅಡಿ ದಪ್ಪ 8 ಇಂಚು ಆಗಿದ್ದು ಬಿಳಿಯ ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಕಲ್ಲಿನ ಎಡಭಾಗ ಮತ್ತು ಕೆಳಭಾಗದಲ್ಲಿ ಶಾಸನವಿದೆ. (ಚಿ.ಸಂ.185)

**ಶಾಸನ ಪಾಠ**

1. ಸ್ವಸ್ತಿಶ್ರೀ ಜ-
2. ಎನಗರದ ತು
3. ಮಿ ಗೊಳೊಳ್
4. ಉಳ್ಳಗಿರಿಯ
5. ಖದ್ಗಿ
6. ಲ್ಬುದಿ ಬ
7. .ಕ.ಡಿ
8. ಗಪದಿಕೊ-
9. .ಕವಿನಿ
10. .ದೊ.ಕಲ್ಲು
11. ಇದಮಿದೊನ್ವಚಮಹಾ
12. (ಪಾ)ತಕ ಬಾರಣಾಸಿ ಅಮಿದೋ (ನ್)

ಕಾಲ ಕ್ರಿ.ಶ. ಸುಮಾರು 10ನೆಯ ಶತಮಾನ

ಭಾಷೆ ಮತ್ತು ಲಿಪಿ-ಕನ್ನಡ

3. **ಶಾಸನೋಕ್ತ ತುರುಗೋಳ್ ವೀರಗಲ್ಲು:** ಇದರ ಎತ್ತರ 4.8 ಅಡಿ ಮತ್ತು ಅಗಲ 3.2 ಅಡಿ ದಪ್ಪ 9 ಇಂಚು ಆಗಿದ್ದು ಬಿಳಿ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಕಲ್ಲಿನ ಸುತ್ತಲೂ ಶಾಸನವಿದೆ. ಲಿಪಿ ಮತ್ತು ಭಾಷೆ ಕನ್ನಡವಾಗಿರುತ್ತದೆ. (ಚಿ.ಸಂ.186)

**ಶಾಸನ ಪಾಠ**

1. ಸ್ವಸ್ತಿಶ್ರೀ ಗಿರಿನಗರ ತುರು
2. ಗೊಳ್
3. ಕ ಕಳ್ದುದ
4. ರಮು.
5. ಯದ
6. ...
7. ..
8. ಕೊಟ್ಟ

ಕಾಲ ಕ್ರಿ.ಶ. ಸುಮಾರು 10ನೆಯ ಶತಮಾನ

ಭಾಷೆ ಮತ್ತು ಲಿಪಿ–ಕನ್ನಡ

4. **ಶಾಸನೋಕ್ತ ತುರುಗೋಳ್ ವೀರಗಲ್ಲು:** ಇದರ ಎತ್ತರ 3.6 ಅಡಿ ಮತ್ತು ಅಗಲ 4.2 ಅಡಿ ದಪ್ಪ 8 ಇಂಚು ದಪ್ಪವಾಗಿದ್ದು ಬಿಳಿಗ್ರಾನೈಟ್ ಶಿಲೆಯಿಂದ ಕೂಡಿದ್ದು ಕಲ್ಲಿನ ಎಡಭಾಗದಲ್ಲಿ ಶಾಸನವಿದೆ. (ಚಿ.ಸಂ.187)

**ಶಾಸನ ಪಾಠ**

1. ಸ್ವಸ್ತಿಶ್ರೀ ಗಿರಿನಗರ
2. ದ ತುರುಗೊಳ್ಗು. ಗನಮಗ
3. ನಿರಿಸಿ. ತ ಕೊಲ.ಗಿ.
4. ಅಯ್ಯುಳ ಮ್ಬರಮೊ.ದತ್ತಿ
5. ಮಣ್ಣುನೆ.ಪ್ಱಡ
6. ಉನಿದು

ಕಾಲ ಕ್ರಿ.ಶ. ಸುಮಾರು 10ನೆಯ ಶತಮಾನ

ಭಾಷೆ ಮತ್ತು ಲಿಪಿ–ಕನ್ನಡ

## ಅಪ್ರಕಟಿತ ಶಾಸನಗಳು

ದೇವನಹಳ್ಳಿ ತಾಲೂಕಿನಲ್ಲಿ ಈಗಾಗಲೇ ಹಲವಾರು ಕಡೆ ಶಾಸನಗಳು ದೊರಕಿದ್ದು, ಅವುಗಳು ಎ.ಕ.ಸಂ.9ರಲ್ಲಿ ದೇವನಹಳ್ಳಿಯೆಂದು ದಾಖಲಿಸಿ 81 ಶಾಸನಗಳನ್ನು ಪ್ರಕಟಿಸಲಾಗಿದೆ. ಇವುಗಳಲ್ಲಿ ಹೆಚ್ಚಿನ ಶಾಸನಗಳು ಕನ್ನಡ ಭಾಷೆಯಲ್ಲಿದ್ದು ಕೆಲವು ತಮಿಳು ಭಾಷೆಯ ಶಾಸನಗಳು ಕೂಡ ದೊರಕಿವೆ. ಇದಲ್ಲದೇ ಇತ್ತೀಚೆಗೆ ಕೆಲವು ಶಾಸನಗಳನ್ನು ಪರಿಷ್ಕರಿಸಿ, ವಿಶೇಷ ಸಂಚಿಕೆಯಲ್ಲಿ 12 ಶಾಸನಗಳನ್ನು ಪ್ರಕಟಿಸಲಾಗಿದೆ.ಇವುಗಳ ಹೊರತಾಗಿಯು ದೇವನಹಳ್ಳಿ ತಾಲೂಕಿನಲ್ಲಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅನೇಕ ಅಪ್ರಕಟಿತ ಶಾಸನಗಳು ಪತ್ತೆಯಾಗಿದ್ದು ಇವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.[23]

**ಸೋಮೇಶ್ವರ ದೇವಾಲಯ-ವಿಜಯಪುರ**: ಈ ದೇವಾಲಯದ ಮುಖಮಂಟಪದ ಎಡಭಾಗದ ಮೇಲ್ಛಾವಣಿಯ ಒಂದು ಚಪ್ಪಡಿಯಲ್ಲಿ ಶಿಲಾಶಾಸನ ಕಂಡುಬಂದಿದೆ. (ಚಿ.ಸಂ.188)

**ಶಾಸನ ಪಾಠ**

1. (ಸ್ವಸ್ತಿಶ್ರೀ) ಶಾಲಿವಾಹನ ಶಖ ೧೭೮೭ನೆ (ಕಿಲ)
2. ...ಸಂ/ ಭಾದ್ರಾಪದ ಶು13 ಸೋಮವಾರ
3. ಮುಂದಿನ ಎರಡು ಸಾಲು ತ್ರುಟಿತವಾಗಿದೆ
4. ಮುಂದಿನ ಎರಡು ಸಾಲು ತ್ರುಟಿತವಾಗಿದೆ

ಲಿಪಿ ಮತ್ತು ಭಾಷೆ ಕನ್ನಡ

**ರಾಯಸಂದ್ರ ಶಾಸನ**: ಈ ಶಾಸನವು ರಾಯಸಂದ್ರ ಗ್ರಾಮದ ಶ್ರೀವೆಂಕಟರಮಣಸ್ವಾಮಿ ದೇವಾಲಯದ ಮುಂಭಾಗದಲ್ಲಿ ಪಿಳ್ಳವೆಂಕಟರಾಯಪ್ಪ ಎಂಬುವವರ ಜಮೀನಿನಲ್ಲಿದೆ. ಈ ಶಾಸನವು ಬಿಳಿ ಗ್ರಾನೈಟ್ ಶಿಲೆಯಿಂದ ಕೂಡಿದ್ದು 3 ಅಡಿ ಎತ್ತರ ಮತ್ತು ಅಗಲ 2.5 ಅಡಿಗಳನ್ನು ಹೊಂದಿದ್ದು ಕನ್ನಡ ಭಾಷೆಯಲ್ಲಿದೆ. ಕಾಲ ಕ್ರಿ.ಶ.1498. (ಚಿ.ಸಂ.189)

**ಸಾದಹಳ್ಳಿ ಶಾಸನ**: ಈ ಶಾಸನವು ಸಾದಹಳ್ಳಿ ಗ್ರಾಮದ ಪದ್ಮಾವತಿ ನಾಗರಾಜು ಅವರ ಜಮೀನಿನಲ್ಲಿದ್ದು ಈ ಶಾಸನದ ಬಗ್ಗೆ ಪದ್ಮಾ ಮುರುಗೇಶ್ ಎಂಬುವರು ಪ್ರಾಥಮಿಕ ಮಾಹಿತಿಯನ್ನು ನೀಡಿರುತ್ತಾರೆ. ಈ ಶಾಸನವು ಪೂರ್ವಕ್ಕೆ ಮುಖಮಾಡಿದ್ದು ಬಿಳಿಗ್ರಾನೈಟ್ ಶಿಲೆಯಿಂದ ಕೂಡಿದ್ದು ಎತ್ತರ 3.8 ಅಡಿ ಮತ್ತು ಅಗಲ 2.5 ಅಡಿ ಅಗಲ ದಪ್ಪ 6 ಇಂಚು ದಪ್ಪವಾಗಿದೆ. ಇದೊಂದು ತುರುಗೋಳ್ ವೀರಗಲ್ಲು ಶಾಸನ, ವೀರನ ಮರಣ ಕಾಲ ಸುಮಾರು 8/9 ಶತಮಾನ. ಲಿಪಿ ಕನ್ನಡ (ಚಿ.ಸಂ.190)

**ಜಿ.ಹೊಸಹಳ್ಳಿ ಶಾಸನ**: ಈ ಶಾಸನವು ಜಿ.ಹೊಸಹಳ್ಳಿ ಗ್ರಾಮದ ಮಧ್ಯಭಾಗದಲ್ಲಿರುವ ಉಯ್ಯಾಲೆ ಮಂಟಪದಲ್ಲಿನ ಒಂದು ಕಂಬದಲ್ಲಿ ಕಂಡುಬಂದಿದ್ದು ಗ್ರಾನೈಟ್ ಶಿಲೆಯಲ್ಲಿ ಕೆತ್ತಲ್ಪಟ್ಟಿದ್ದು ಮೂರು ಸಾಲುಗಳಿಂದ ಕೂಡಿದೆ. ಉದ್ದ 1.5 ಅಡಿ ಅಗಲ 1.5 ಅಡಿಗಳಾಗಿರುತ್ತದೆ. (ಚಿ.ಸಂ.191)

**ಶಾಸನದ ಪಾಠ**

.ದುರ್ಮುಖಿ ಸಂವತ್ಸರ ಶ್ರಾವಣ ಬ (೫) ಲು

.ಹೊಸಗೂರ ರಾಮಪ್ಪಗೌಡನ ಕಾವರನು

.ಬೈರೇಗೌಡನು ಮಾಡಿಸಿದ ಕುರುಜು

ಕಾಲ ಆವತಿ ನಾಡಪ್ರಭುಗಳು

ಲಿಪಿ ಕನ್ನಡ

**ಬೊಮ್ಮವಾರ ಸುಂದರೇಶ್ವರ ದೇವಾಲಯದ ಶಾಸನ**: ಈ ದೇವಾಲಯದ ಮುಂಭಾಗದಲ್ಲಿರುವ ಧ್ವಜಸ್ತಂಭ ಸಮೀಪದಲ್ಲಿ ಎಡಭಾಗದಲ್ಲಿ ಒಂದು ಶಾಸನ ಕಂಡುಬಂದಿದ್ದು ಇದು ಬಿಳಿ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಎರಡು ಕಡೆ ಬರೆಯಲ್ಪಟ್ಟಿದೆ. ಈ ಶಾಸನದ ಎತ್ತರ ಸುಮಾರು 2.5 ಅಡಿ ಅಗಲ 2.2 ಅಡಿಗಳಾಗಿದೆ. (ಚಿ.ಸಂ.192)

**ಶಾಸನದ ಪಾಠ**

**ಮುಂಭಾಗ**

1.– ೦

2. ೦ ...ಸ..ದಾ...ತು..ಶ್ರೀ.ಮ

3. ೦ ತು ಬೊಮ್ಮವರ ಹೊಸ.ಅ

4. ೦ ಆಯನು ಅಳಿದ (ಕಂಚಿ)

5. ೦ ನಾಯಕರು ಬರಮಣ

6. ೦ ಸೆಟಿ ಕಟಿಸಿದ ಕ್ವರೆಯ

7. ೦ ಕೆಳಗೆ ಯಿ ಕಂಡುಗ

8. ೦ ಕೊಡಗೆ ಗಡೆಯ(ನು) ಕೊ

**ಹಿಂಭಾಗ**

9. ೦ ಬ...ನಮಗ

10. ೦ ಕೆ ಅವನು ಗಾ(ಡ)

11. ೦ ನಾಗಬರವರ.

12. ೦ ಸಿಮ.ಗವಾ

13. ೦ .......

ಕಾಲ 16/17ನೇ ಶತಮಾನ

ಲಿಪಿ ಕನ್ನಡ

**ಕುಮಾರಸ್ವಾಮಿ/ಷಣ್ಮುಖಸ್ವಾಮಿ ದೇವಾಲಯ-ವಿಜಯಪುರ**: ಈ ದೇವಾಲಯದ ಮುಖಮಂಟಪದ ಎಡಭಾಗದಲ್ಲಿರುವ ವಾಜನಭಾಗದಲ್ಲಿ ಶಾಸನ ಕಂಡುಬಂದಿದೆ. (ಚಿ.ಸಂ.193)

**ಶಾಸನ ಪಾಠ**

ಸ್ರ ೧೮೭೪ನೆ ಭಾವ ಸಂ/ಜೆ/ಶು/5ಲ್ಲು ವಡಿಗೇನಹಳ್ಳಿ ವಿ// ಅಣ್ಣೈಯಪ್ಪನವರಿಂ

ದ ಶ್ರೀ ಷಣ್ಮಕ ಸ್ವಾಮಿಯವರ ಪ್ರತಿಷ್ಟ ಮಾಡಿ ಇವರ ಮಗ ವಿರಶೆಟ್ಟಪ್ಪನವರು ಜಿರ್ಣೋದ್ದಾರ

ಮಾಡಿ ಇಮ್ಮಕ್ಕಳು ಚಿಕ್ಕ ವಿರಂಣ್ಣಯಿವರ ತಂಮಂದಿರಿಂದ ಕಿಲಕ ಸಂ/ಜೇ/ಬ/೯ಲ್ಲು ಯಿ ದ

ವಸ್ಥಾನದ ಶಿಖರದ ಮೇಲೆ ಭಂಗಾರದ ಮುಲಾಮು ಕಲಶವೂ ಸಹಾಚಿಯಾ ಶ್ವಿರಾರ್ಪಿತವಾ

ಗಿ ಪ್ರತಿಷ್ಠೆ ಮಾಡಿಶಿಇರುತ್ತದೆ//ಶ್ರಿ//

ಕಾಲ ಮೈಸೂರು ಒಡೆಯರು

ಲಿಪಿ ಕನ್ನಡ

**ಅಡಿ ಟಿಪ್ಪಣಿಗಳು**

1. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ ಸಂಖ್ಯೆ 801, 2009.
2. ಅದೇ, ಪು.ಸಂ.814.
3. ಅರುಣಿ ಎಸ್.ಕೆ, ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪು.ಸಂ.43, 2007.
4. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.139, 1989.
5. ಅದೇ, ಪು.ಸ. 812
6. ವಸಂತಲಕ್ಷ್ಮಿ, ಕೆ. ಇತಿಹಾಸ ದರ್ಶನ, ಸಂಪುಟ 18, ಬೆಂಗಳೂರು, ಪು.ಸಂ.31-36, 2003.
7. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು-ಒಂದು ಅಧ್ಯಯನ, ಕ.ಸ.ಪ, ಪು.ಸಂ.149, 1994.
8. ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ಸರ್ಕಾರ, ಪು.ಸಂ.812, 1989.
9. ಕ್ಷೇತ್ರಕಾರ್ಯ ವರದಿಯನ್ನು ಆದರಿಸಿ ಬರೆಯಲಾಗಿದೆ.
10. ಅದೇ,
11. ಅದೇ,
12. ಶೇಷಶಾಸ್ತ್ರಿ, ಆರ್, ಕರ್ನಾಟಕದ ವೀರಗಲ್ಲುಗಳು, ಕ.ಸ.ಪ, ಪು.ಸಂ.59, 1982.
13. ಕ್ಷೇತ್ರಕಾರ್ಯ ವರದಿಯನ್ನು ಆದರಿಸಿ ಬರೆಯಲಾಗಿದೆ.
14. ಅದೇ,
15. ಅದೇ,
16. ಎ.ಕ.ಸಂ.9, ಡಿ.ವಿ, 42, ಕ್ರಿ.ಶ.900, ಅರದೇಶನಹಳ್ಳಿ, ಪು.ಸಂ. 176. ಮತ್ತು ಎ.ಕ.ಸಂ.9, ಡಿ.ವಿ, 43, ಕ್ರಿ.ಶ.900, ಪು.ಸಂ. 177.
17. ಸಂರಕ್ಷಿತ ಸ್ಮಾರಕಗಳ ನಿರ್ದೇಶಿಕೆ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಪು.ಸಂ. 19, 2003, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಟ್ಟಿ, 2003.
18. ಕ್ಷೇತ್ರಕಾರ್ಯ ವರದಿಯನ್ನು ಆದರಿಸಿ ಬರೆಯಲಾಗಿದೆ.
19. ಎ.ಕ.ಸಂ.9, ಡಿ.ವಿ. 14, ಕ್ರಿ.ಶ.1067, ಬ್ಯಾಡರಹಳ್ಳಿ, ಪು.ಸಂ. 163.
20. ಕ್ಷೇತ್ರಕಾರ್ಯ ವರದಿಯನ್ನು ಆದರಿಸಿ ಬರೆಯಲಾಗಿದೆ.
21. ಬೆಂಗಳೂರು ಡಿಸ್ಟ್ರಿಕ್ಟ್ ಹ್ಯಾಂಡ್‌ಬುಕ್, ಪು.ಸಂ.294, 1930.

## ಅಧ್ಯಾಯ-೮

## ಸಾಂಸ್ಕೃತಿಕ ಪರಂಪರೆಯ ವೈಶಿಷ್ಟ್ಯತೆಗಳು

ದೇವನಹಳ್ಳಿ ತಾಲೂಕು ಹಲವುರೀತಿಯ ಸಾಂಸ್ಕೃತಿಕ ಪರಂಪರೆಗಳಿಗೆ ಹೆಸರಾಗಿದ್ದು ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಶಿಲ್ಪಕಲೆ**: ಶಿಲ್ಪಕಲೆಯು ಲಲಿತ ಕಲೆಗಳಾದ ಚಿತ್ರಕಲೆ, ಸಂಗೀತ, ನೃತ್ಯಗಳಂತೆಯೇ ಪ್ರಾಚೀನವಾದುದು ಮತ್ತು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುತ್ತದೆ. ಶಿಲ್ಪಕಲೆಯು ಒಂದು ಘನಮಾಧ್ಯಮದ ಕಲೆಯಾಗಿದ್ದು ಶಿಲಾಕೃತಿಗಳ ಮೂಲಕ ಗುರುತಿಸಬಹುದು. ಸಾಂಪ್ರಾದಾಯಿಕವಾಗಿ ಮತ್ತು ವ್ಯಕ್ತಿಗಳಿಂದಲೂ ಅನೇಕ ರೀತಿಯ ಶಿಲ್ಪಶೈಲಿಗಳು ರೂಪುಗೊಂಡಿವೆ. ಪೂರ್ವ ಪ್ರಾಚೀನ ಶಿಲಾಯುಗ, ನೂತನ ಶಿಲಾಯುಗಗಳಲ್ಲಿ ಆದಿಮಾನವನಿಂದ ಸೃಷ್ಟಿಸಲ್ಪಟ್ಟ ಕಲಾಕೃತಿಗಳು ಇಂದಿಗೂ ಪ್ರಾಮುಖ್ಯತೆಯನ್ನು ಪಡೆದಿದ್ದು, ಬೆಟ್ಟಗುಹೆಗಳಲ್ಲಿರುವ ಚಿತ್ರಗಳು ಮತ್ತು ಶಿಲ್ಪಗಳು ನಮ್ಮ ಪೂರ್ವಿಕರ ಸಂಸ್ಕೃತಿ ಭವ್ಯ ಪರಂಪರೆ ಮತ್ತು ಜೀವನ ವಿಧಾನವನ್ನು ತಿಳಿಸುತ್ತವೆ. ಪ್ರಾಚೀನ ಗ್ರಂಥಗಳಾದ ಮನುಷ್ಯಾಲಯ ಚಂದ್ರಿಕೆ, ಸನತ್ಕುಮಾರ ವಾಸ್ತುಶಾಸ್ತ್ರ, ಆಗಮಶಿಲ್ಪಸಾರ, ಶಿಲ್ಪಾಭರಣ ಕ್ರಿಯಾಯೋಗ, ಸಕಲಾಂಶೇಷು ಮುಂತಾದ ಗ್ರಂಥಗಳು ಶಿಲ್ಪಶಾಸ್ತ್ರದ ಬಗ್ಗೆ ಅಮೂಲ್ಯ ಮಾಹಿತಿಯನ್ನು ಒದಗಿಸುತ್ತದೆ. ಶಿಲ್ಪಕಲೆಯನ್ನು ಅನೇಕ ಭಾಗಗಳಾಗಿ ವಿಂಗಡಿಸಲಾಗಿದ್ದು, ಅವುಗಳಲ್ಲಿ ಪ್ರಮುಖವಾಗಿ ದೇವಾಲಯ ನಿರ್ಮಾಣ-ವಾಸ್ತುವಿನ್ಯಾಸ, ಪ್ರಾಕಾರಾದಿ ಶಿಲ್ಪಗಳು, ರಾಜಗೋಪುರ ನಿರ್ಮಾಣ, ಧ್ವಜಸ್ಥಂಭ, ಬಲಿಸ್ಥಾನ ಇತ್ಯಾದಿ, ಮುಖಮಂಟಪಗಳಲ್ಲಿ ಇರುವ ಶಿಲ್ಪಗಳು, ಮಂಟಪದ ಸ್ತಂಭಗಳ ಮೇಲೆ ಕೆತ್ತಿರುವ ಶಿಲ್ಪಗಳು, ಸುಖನಾಸಿ, ಗರ್ಭದ್ವಾರದ ಮೇಲಿನ ಶಿಲ್ಪಗಳು, ಗರ್ಭಗುಡಿಯಲ್ಲಿ ಆಗಮ, ಶಿಲ್ಪಶಾಸ್ತ್ರದಂತೆ ಕೆತ್ತಿರುವ ಶಿಲ್ಪಗಳು ಮುಂತಾದವು.[1]

**ಶಿಲ್ಪಿಗಳು**: ದೇವಾಲಯದ ನಿರ್ಮಾಣದಲ್ಲಿ ಬಡಗಿಗಳು, ಕಮ್ಮಾರರು, ಅಕ್ಕಸಾಲಿಗರು ಉಪ್ಪಾರರು, ಕಂಚುಗಾರರು, ವಿಶ್ವಕರ್ಮ ಸೇವೆಗೆ ಸೇರಿದವರು.[2] ಇವರನ್ನು ವೀರ ಪಾಂಚಾಳರೆಂದು ಕರೆಯಲಾಗುತ್ತಿತ್ತು.[3] ಶಿಲ್ಪಿಗಳ ಬಗ್ಗೆ ಶಾಸನಗಳಲ್ಲಿ ಕೂಡ ಉಲ್ಲೇಖವಿದೆ. ಗಂಗವಾರದ ಸೋಮೇಶ್ವರ ದೇವಾಲಯದ ದ್ವಾರಮಂಟಪ ಮತ್ತು ರಂಗಮಂಟಪದ ನಿರ್ಮಾಣದಲ್ಲಿ ಕ್ರಿ.ಶ. 1100ರಲ್ಲಿ ಕಣ್ಣನ್ ಮತ್ತುವಾಮನಂ ಎಂಬ ಶಿಲ್ಪಿಗಳು ಕಾರ್ಯನಿರ್ವಹಿಸಿದ್ದಾರೆ.[4]ಎಂಬ ಮಾಹಿತಿಯು ಶಾಸನೋಕ್ತವಾಗಿದೆ. ದೇವನಹಳ್ಳಿಯ ಮುಖ್ಯಸ್ಥನಾಗಿದ್ದದೇವ ಎಂಬುವನು ಭದ್ರಾಚಲಂ ಗೋಪಾಲಾಚಾರ್ಯ ಮತ್ತು ರಾಮಾಚಾರ್ಯ ಎಂಬ ಇಬ್ಬರು ಶಿಲ್ಪಿಗಳನ್ನು

ದೇವನಹಳ್ಳಿಗೆ ಬರಮಾಡಿಕೊಂಡನು. ಇವರು ದೇವನಹಳ್ಳಿ ಕೋಟೆ ಮತ್ತು ಶ್ರೀ ವೇಣುಗೋಪಾಲಸ್ವಾಮಿ ದೇವಾಲಯಗಳ ನಿರ್ಮಾಣದಲ್ಲಿ ಕಾರ್ಯನಿರ್ವಹಿಸಿದ್ದು, ಇವರನ್ನು ದೇವನಹಳ್ಳಿ ಶಿಲ್ಪಕಲಾ ಶಾಲೆಯ ನಿರ್ಮಾತೃಗಳೆಂದು ಭಾವಿಸಲಾಗಿದೆ. ಹೆಸರಾಂತ ಶಿಲ್ಪಿಯಾದ ಚನ್ನಕೇಶವಾಚಾರ್ಯ ಎಂಬುವರು ಈ ಕುಟುಂಬಕ್ಕೆ ಸೇರಿದ್ದುಇವರ ಶ್ರೀಮತಿಯಾದ ಶೇಷಾಂಬ ಎಂಬುವರು ಸಹ ಶಿಲ್ಪಿಯಾಗಿದ್ದು ನಂತರ ಇವರ ಕುಟುಂಬಕ್ಕೆಸೇರಿದ ಎ.ಸಿ. ಹನುಮಂತಾ ಚಾರ್ಯ ಎಂಬುವರುಸಹ ಹೆಸರಾಂತ ಶಿಲ್ಪಿಯಾಗಿದ್ದು ಹಲವಾರು ಶಿಲ್ಪಗಳನ್ನು ಕೆತ್ತಿದ್ದಾರೆ.[5]

**ಶಿಲ್ಪಕಲಾ ಶಾಲೆ-ದೇವನಹಳ್ಳಿ:**

ದೇವನಹಳ್ಳಿಯಲ್ಲಿ ಸಾಂಪ್ರದಾಯಿಕ ಶಿಲ್ಪಕಲಾ ಶಾಲೆಯಿದ್ದು, ಇದು ದೇವನಹಳ್ಳಿಯ ಬೆಂಗಳೂರು-ಬಳ್ಳಾರಿ ರಸ್ತೆಯಲ್ಲಿ ಪಿಎಲ್‌ಡಿ ಬ್ಯಾಂಕ್ ಸಮೀಪದಲ್ಲಿದ್ದು ಭಾರತೀಯ ಶಿಲ್ಪಶಾಸ್ತ್ರ ಶಿಕ್ಷಣವನ್ನು ಅತ್ಯಂತ ಸಂಪ್ರದಾಯವಾಗಿ ಪಾಲಿಸಿಕೊಂಡು ಬರುತ್ತಿರುವ ರಾಜ್ಯದ ಕೆಲವೇ ಸಂಸ್ಥೆಗಳಲ್ಲಿ ಒಂದಾಗಿದೆ.ಈ ಸಂಸ್ಥೆಯನ್ನು 1952ರಲ್ಲಿ ಸ್ಥಾಪಿಸಿದ್ದು ಗುರುಕುಲ ಪದ್ಧತಿಯನ್ನು ಇಂದಿಗೂ ಉಳಿಸಿಕೊಂಡು ಬರುತ್ತಿರುವ ಹೆಗ್ಗಳಿಕೆಯನ್ನು ಹೊಂದಿದೆ.ಎ.ಸಿ.ಹನುಮಂತಚಾರ್ಯ ಅವರ ಕುಟುಂಬಕ್ಕೆ ಸೇರಿದ ಶಿಲ್ಪಿ ಸರೋಜಾದೇವಿ ಆಚಾರ್ಯ ಎಂಬುವರೂ ಸಹ ಶಿಲ್ಪಿಯಾಗಿದ್ದು, ಕೆ.ವಿ.ಶಂಕರ ನಾರಾಯಣ ಅವರ ಸಹಕಾರದಿಂದ ಪ್ರಸ್ತುತ ಶಿಲ್ಪಕಲಾ ಶಾಲೆಯನ್ನು ಮತ್ತು ಗುರುಕುಲವನ್ನು ನಡೆಸಿಕೊಂಡು ಬರುತ್ತಿದ್ದಾರೆ. (ಚಿ.ಸಂ.194)

**ಬಂಡೆ ಚಿತ್ರಕಲೆ:** ಬಯಲು ಬಂಡೆ ಚಿತ್ರಗಳ ಕ್ರಮವು ಸಹಜವಾಗಿ ಭಿನ್ನವಾಗಿರುತ್ತದೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಮಧ್ಯದ ಮತ್ತು ಮೇಲಿನ ಹಂತಗಳಲ್ಲಿ ಬಯಲಿನಲ್ಲಿರುವ ಅಲ್ಲೊಂದು ಇಲ್ಲೊಂದು ಬಂಡೆಯ ಸಮಾನ ಮೇಲ್ಮೈ ಮೇಲೆ ಬೇಕಾದ ಚಿತ್ರವನ್ನು ಮೂಡಿಸುವುದಕ್ಕೆ ಅನುಕೂಲಕರವಾದ ಕಲ್ಲಿನಿಂದ ಏಕಪ್ರಕಾರವಾಗಿ ಕುಟ್ಟಿ ಬಿಡಿಸುವುದು, ಮೊನಚಾದ ಉಪಕರಣದಿಂದ ಗೆರೆಗಳನ್ನು ಬಿಡಿಸಿರುವುದು ಕಂಡುಬರುತ್ತದೆ.[6]

ದೇವನಹಳ್ಳಿ ತಾಲೂಕಿನ ಕೊಯಿರಾ ಗ್ರಾಮದ ಕಾರಹಳ್ಳಿಯ ರಸ್ತೆಗೆ ಹೊಂದಿಕೊಂಡಂತಿರುವ ಬಂಡೆ ಆಂಜನೇಯ ದೇವಾಲಯದಲ್ಲಿ ಚಿತ್ರಕಲೆಯು ಕಂಡುಬಂದಿದ್ದು ಇದು ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆಯಂತೆ ಕಂಡುಬರುವುದಿಲ್ಲ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸ್ಥಳೀಯರು ನೀಡಿದ ಮಾಹಿತಿಯಂತೆ ಇದು ಸುಮಾರು 250 ವರ್ಷಗಳಿಗಿಂತ ಹಳೆಯದಾಗಿದ್ದು, ಇಲ್ಲಿನ ಚಿತ್ರಗಳನ್ನು ಸುಣ್ಣ ಎಲೆ, ಅಡಿಕೆ ಪರಿಕರಗಳಿಂದ ಚಿತ್ರಿಸಲಾಗಿದ್ದು ಇಲ್ಲಿ ಬಿಡಿಸಿರುವ ಚಿತ್ರಗಳು ಸ್ಪಷ್ಟವಾಗಿ ಗೋಚರಿಸುತ್ತಿಲ್ಲ. ಒಬ್ಬ ವ್ಯಕ್ತಿಯು ಬಿಲ್ಲನ್ನು ಹಿಡಿದಿರುವಂತೆ

ಮತ್ತು ಕೈಗಳನ್ನು ಹೊಂದಿರುವಂತೆ ಚಿತ್ರಿಸಲಾಗಿದೆ. ಮತ್ತೊಂದು ಕಡೆ ಮನುಷ್ಯ,ಕುದುರೆ, ನಾಯಿಚಿತ್ರಗಳನ್ನು ಬಿಡಿಸಲಾಗಿದ್ದು (ಚಿ.ಸಂ.195) ಚಿತ್ರಗಳಗೆ ಹೊಂದಿಕೊಂಡಂತೆ ಬಂಡೆಯ ಮೇಲೆ ಹಳೆಗನ್ನಡ ಲಿಪಿಯ ಬರಹವಿದೆ.[7]

**ಕುಸ್ತಿ**: ನಮ್ಮ ದೇಶದ ಹಲವಾರು ಕಲೆಗಳಲ್ಲಿ ಕುಸ್ತಿಯು ಕೂಡ ಒಂದು. ಭಾರತೀಯ ಶೈಲಿಯ ಸಮರ ಕಲೆಯಲ್ಲಿ ಮಲ್ಲಯುದ್ಧ (ಕುಸ್ತಿ) ಮತ್ತು ವಜ್ರಮುಷ್ಠಿ ಕಾಳಗಗಳು ಕಂಡುಬರುತ್ತವೆ. ಶಾರೀರಿಕ ಶಿಕ್ಷಣಗಳಲ್ಲಿ ಮಲ್ಲಯುದ್ಧ ಉತ್ತಮ ಎಂದು ಹೇಳಲಾಗುತ್ತಿದ್ದು, ಮಲ್ಲಯುದ್ಧ 64 ವಿದ್ಯೆಗಳಲ್ಲಿ ಒಂದಾಗಿದೆ. ಇದು ವಿಜಯನಗರ ಮತ್ತು ಮೈಸೂರು ಒಡೆಯರ್‌ರವರ ಆಳ್ವಿಕೆ ಕಾಲದಲ್ಲಿ ಹೆಚ್ಚು ಜನಪ್ರಿಯತೆ ಪಡೆದುಕೊಂಡಿತ್ತು. ರಾಜರ ಆಶ್ರಯದಲ್ಲಿ ಶಕ್ತಿ ಸಾಮರ್ಥ್ಯದ ಪ್ರದರ್ಶನದ ಜೊತೆಗೆ ಸಮಾಜ ರಕ್ಷಣೆ, ಬಲವರ್ದನೆ ಹಾಗೂ ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ಸಹಕಾರಿಯಾಗಿದ್ದಂತಹ ಉತ್ತಮ ಕಲೆ. ಕುಸ್ತಿಯ ಬಗ್ಗೆ ಹಲವಾರು ಗ್ರಂಥಗಳು ಮತ್ತು ಪುರಾಣಗಳಲ್ಲಿ ಉಲ್ಲೇಖವಿದ್ದು, ಕಲ್ಯಾಣ ಚಾಲುಕ್ಯ ಅರಸ 3ನೇ ಸೋಮೇಶ್ವರನ ಮಾನಸೊಲ್ಲಾಸದಲ್ಲಿ ಮಲ್ಲರು, ಆಕಾರ, ಶರೀರ ಮುಂತಾದವುಗಳ ಬಗ್ಗೆ ಉಲ್ಲೇಖವಿದೆ. ರತ್ನಾಕರ ವರ್ಣಿಯ ಭರತೇಶ ವೈಭವ, ಭಾಗವತ ಪುರಾಣ ಮತ್ತು ಗದುಗಿನ ಭಾರತದಲ್ಲಿ ಕುಸ್ತಿಯ ಬಗ್ಗೆ ಉಲ್ಲೇಖವಿದೆ. ಕುಸ್ತಿಪಟುಗಳು ಅಂಗಸಾಧನೆ ಮಾಡಲು ಗರಡಿ ಮನೆಗಳು ಅಸ್ತಿತ್ವಕ್ಕೆ ಬಂದವು.ಸೈನಿಕರಿಗೆ ಗರಡಿ ಶಿಕ್ಷಣವನ್ನು ಕೊಡಿಸಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ಮಲ್ಲಯುದ್ಧ (ಕುಸ್ತಿ)ಕ್ಕೆ ವಿಶೇಷವಾದ ಪ್ರೋತ್ಸಾಹವಿತ್ತು. ದಸರಾ ಮಹೋತ್ಸವ ಸಂದರ್ಭದಲ್ಲಿ ಹಂಪಿಯ ಮಹಾನವಮಿ ದಿಬ್ಬದಲ್ಲಿ ಮಲ್ಲಯುದ್ಧ ವಿಶೇಷ ಆಕರ್ಷಣೆಯಾಗಿತ್ತು. ಕೃಷ್ಣದೇವರಾಯನು ಕುಸ್ತಿಯನ್ನು ಪ್ರೋತ್ಸಾಹಿಸಿದನು. ವಿಜಯನಗರವನ್ನು ಸಂದರ್ಶಿಸಿದ ಡೊಮಿಂಗೋ ಪಯಾಸ್ ಮಲ್ಲಯುದ್ಧದ ಬಗ್ಗೆ ಉಲ್ಲೇಖಿಸಿದ್ದಾನೆ. ಮೈಸೂರಿನ ರಣಧೀರ ಕಂಠೀರವವರು ಕೂಡ ಮಲ್ಲಯುದ್ಧಕ್ಕೆ ಹೆಸರಾಗಿದ್ದರು.[8]

ಭಾರತೀಯ ಕುಸ್ತಿಯನ್ನು ಮಲ್ಲಕ್ರೀಡೆ ಮತ್ತು ಮಲ್ಲಯುದ್ಧ ಎಂದು ವರ್ಗೀಕರಿಸಲಾಗಿದೆ. ಗುಣ ಮತ್ತು ಕ್ರಮಗಳ ಆಧಾರದ ಮೇಲೆ ಮಲ್ಲಯುದ್ಧವನ್ನು ವರ್ಗೀಕರಿಸಲಾಗಿದೆ.ಕುಸ್ತಿಯನ್ನು ಕಠಿಣ ಕ್ರೀಡೆಯೆಂದು ಸಹ ಕರೆಯಲಾಗುತ್ತಿದ್ದು ಕುಸ್ತಿಪಟುಗಳು ಬಹಳ ಮುಖ್ಯವಾಗಿ ದೇಹದ ದಾರ್ಡ್ಯತೆಯನ್ನು ಕಾಪಾಡಿ ಕೊಳ್ಳಬೇಕಾಗುತ್ತದೆ.ಮಲ್ಲಯುದ್ಧ ಅಥವಾ ಕುಸ್ತಿಯನ್ನು ಅಭ್ಯಸಿಸಲು ಆಕ್ರಮಣ ಮತ್ತು ರಕ್ಷಣಾತ್ಮಕ ಗುಣಗಳು ಬಹಳ ಮುಖ್ಯವಾದವು.ಎದುರಾಳಿಯನ್ನು ಸೂಕ್ಷ್ಮವಾಗಿ ಗಮನಿಸಿ ಸಮಯ ನೋಡಿ ಆಕ್ರಮಣ ಮಾಡುವುದು ಅಥವಾ ಸೂಕ್ತ ಪಟ್ಟನ್ನು ಪ್ರಯೋಗ

ಮಾಡುವುದು ಒಂದು ವಿಧವಾದರೆ, ಎದುರಾಳಿ ಆಕ್ರಮಣವನ್ನು ಹೇಗೆ ತಡೆದು ರಕ್ಷಣೆ ಮಾಡಿಕೊಳ್ಳಬೇಕು ಎಂಬುದು ಮತ್ತೊಂದು ವಿಧವಾಗುತ್ತದೆ.

ವಿಜಯನಗರ ಕಾಲದ ಮಲ್ಲಯುದ್ಧಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳು ದೇವಾಲಯಗಳ ಭಿತ್ತಿ ಮತ್ತು ಕಂಬಗಳಲ್ಲಿ ಕಂಡರಿಸಲ್ಪಟ್ಟಿವೆ. ಅದೇ ರೀತಿ ಮೈಸೂರು ಮತ್ತು ಕೆಳದಿ ಅರಸರ ಕಾಲದ ಶಿಲ್ಪಗಳಲ್ಲೂ ಸಹ ಮಲ್ಲಶಿಲ್ಪಗಳನ್ನು ಕಾಣಬಹುದಾಗಿದೆ. ಹಂಪಿಯ ಹಜಾರ ರಾಮಸ್ವಾಮಿ ದೇವಾಲಯದ ದ್ವಾರದ ಪೂರ್ವ ಆಗ್ನೇಯ ದಿಕ್ಕಿನ ಒಳಭಾಗದ ಬಾವಿಯ ಪಕ್ಕದ ಶಿಲ್ಪ. ಅಚ್ಯುತರಾಯ ದೇವಾಲಯದ ಒಳಪ್ರಾಂಗಾಣದಲ್ಲಿ ಪಶ್ಚಿಮ ಬಾಗಿಲಿನ ಶಿಖರದ 1ನೇ ಕಂಬದಲ್ಲಿರುವ ಶಿಲ್ಪ. 2ನೇ ಶಿಖರದ 2ನೇ ಕಂಬದಲ್ಲಿರುವಉಬ್ಬುಶಿಲ್ಪ, 5ನೇ ಕಂಬದ ಉಬ್ಬುಶಿಲ್ಪ ಮುಂತಾದವುಗಳನ್ನು ಉಲ್ಲೇಖಿಸಬಹುದು.[9]

ಕುಸ್ತಿಯಲ್ಲಿ ವಿವಿಧ ಪಟ್ಟುಗಳಾದ ಡಾಕ್, ಬಗಲ್‌ಡುಬ್, ಅಂಟಿದಾವ್, ಏಕಟಾಂಗ್, ಟಾಂಗ್, ದೋಬಿಚಟ್, ನಿಕಾಲ್, ಲುಕಾನ್, ಸಕಿ, ಉಕಾಡ್, ಬಾರಲಿ, ಕಳಾರ್‌ಜಂಗ್ ಮುಂತಾದ ಪಟ್ಟುಗಳು ಕಂಡುಬರುತ್ತವೆ.[10]ಕುಸ್ತಿಯಲ್ಲಿ ಗರಡಿಮನೆ, ಅಖಾಡ (ಗೋದ) ದಂಗಲ್, ಪೈಲ್ವಾನ್, ಖಲೀಫ್, ಉಸ್ತಾದ್, ಯಜಮಾನರು ಮುಂತಾದ ಪದಗಳು ಸಾಮಾನ್ಯವಾಗಿ ಕಂಡುಬರುತ್ತದೆ.[11]

ದೇವನಹಳ್ಳಿಯ ಕುಸ್ತಿ ಮತ್ತು ಕುಸ್ತಿ ಪಂದ್ಯಾವಳಿಗಳಿಗೆ ತನ್ನದೇ ಆದ ಇತಿಹಾಸವಿದ್ದು ದೇವನಹಳ್ಳಿ ಪಟ್ಟಣದ ಸರೋವರ ಬೀದಿಯಲ್ಲಿ ಮಾರುತಿ ವ್ಯಾಯಾಮ ಶಾಲೆ ಮತ್ತು ಮರಳುಬಾಗಿಲಿನಲ್ಲಿ ದೇಶದ ಪೇಟೆ ದೊಡ್ಡಗರಡಿ ಮನೆಗಳು ಅಸ್ತಿತ್ವಕ್ಕೆ ಬಂದವು. (ಚಿ.ಸಂ.196) ಇಲ್ಲಿ ಹಲವಾರು ಕುಸ್ತಿಪಟುಗಳನ್ನು ತಯಾರು ಮಾಡಲಾಯಿತು. ದೇವನಹಳ್ಳಿ ಕುಸ್ತಿಗೆ ಒಂದು ಹೊಸ ರೂಪ ನೀಡಿದ ಕುಸ್ತಿ ಪಟುವೆಂದರೆ ಅರಳೆಪೇಟೆ ಗೋಪಾಲ ರಾಯರು ಮತ್ತು ಇತರರು ದೇವನಹಳ್ಳಿಯ ಕುಸ್ತಿಪಟುಗಳು ರಾಜ್ಯ ಮತ್ತು ಮೈಸೂರಿನ ದಸರಾ ಕ್ರೀಡೆಗಳ ಪಂದ್ಯಗಳಲ್ಲಿ ಭಾಗವಹಿಸಿ ಖ್ಯಾತಿಗಳಿಸಿದ್ದಾರೆ. ಹೈದರ್‌ಅಲಿ ಖಾನನು ಕ್ರಿ.ಶ.1749ರಲ್ಲಿ ದೇವನಹಳ್ಳಿ ಮುತ್ತಿಗೆಯಲ್ಲಿ ಬೆಂಗಳೂರಿನ ಗರಡಿ ಮನೆಯ ಪೈಲ್ವಾನ್‌ರನ್ನು ಬಳಸಿಕೊಂಡಿದ್ದನು ಎಂಬ ಮಾಹಿತಿಯು ಕಂಡುಬರುತ್ತದೆ.[12]

**ವಜ್ರಮುಷ್ಠಿ ಕಾಳಗ**: ಸೌಂದರ್ಯ ಕಾವ್ಯ ವಿವರಿಸಿರುವ ಪ್ರಕಾರ ಜಟ್ಟಿಗಳು ಮಲ್ಲಗಾಸೆ, ಹನುಮಾಗಸೆ, ವೀರಗಾಸೆ ಧರಿಸಿ, ಕೊರಳಿಗೆ ಮಲ್ಲಿಗೆ ಇತ್ಯಾದಿ ಹೂವಿನ ಮಾಲೆ ಹಾಕಿಕೊಂಡು ಹಣಗೆ ಕಸ್ತೂರಿ ತಿಲಕ ಮತ್ತು ಶಿರಕ್ಕೆ ಕೆಮ್ಮಣ್ಣು ಹಚ್ಚಿ ತಮ್ಮ ಸರದಿಗಾಗಿ ಕಾಯುತ್ತಿದ್ದರು. ಸ್ಪರ್ಧೆಗೆ

ಆಗಮಿಸಿದ್ದ ಪ್ರತಿಯೊಬ್ಬ ಜಟ್ಟಿಯೂ ಗೆಲ್ಲಲೇಬೇಕೆಂಬ ಛಲದಿಂದ ವಿವಿಧ ಪಟ್ಟುಗಳನ್ನು ಹಾಕುತ್ತ ಹಾರಿ, ಕುಪ್ಪಳಿಸಿ, ಹಲ್ಲು ಕಡಿದು ವಜ್ರಮುಷ್ಟಿಯಿಂದ ಚಚ್ಚುತ ಪರಸ್ಪರರ ಮೇಲೆರಗಿ ಎದುರಾಳಿಯನ್ನು ಕೆಡುವಲು ಯತ್ನಿಸುತ್ತಿದ್ದರು. ಸ್ಪರ್ಧೆಯಲ್ಲಿ ಗೆದ್ದ ಮಲ್ಲನಿಗೆ ಬಹುಮಾನಗಳನ್ನು ನೀಡಿ ಗೌರವಿಸಲಾಗುತ್ತಿತ್ತು[13] ಎಂಬ ವರ್ಣನೆಯು ವಜ್ರಮುಷ್ಠಿ ಕಾಳಗದ ಮಹತ್ವವನ್ನು ತಿಳಿಸುತ್ತದೆ.

ಕಾಳಗದಲ್ಲಿ ವಜ್ರಮುಷ್ಠಿ ಕಾಳಗವೂ ಒಂದಾಗಿದ್ದು ತನ್ನದೇ ಆದ ಇತಿಹಾಸ ಮತ್ತು ವೈಶಿಷ್ಟ್ಯತೆಯನ್ನು ಹೊಂದಿದ್ದು ಅದರದೇ ಆದ ಕ್ರಮವಿದೆ. ಇಬ್ಬರು ಜಟ್ಟಿಗಳು ಕೈಯಲ್ಲಿ ಸಾಧನವನ್ನು ಹೊಂದಿರುತ್ತಾರೆ. ಬಳೆಯಂತಿರುವ ಸಾದನಕ್ಕೆ 4 ಮತ್ತು 5 ಹಲ್ಲುಗಳಂತಿರುವ ರಚನೆ ಇದ್ದು ಇದನ್ನು 4 ಬೆರಳುಗಳಲ್ಲಿ ಬಿಗಿಯಾಗಿರುವಂತೆ ದಾರ ಕಟ್ಟಿರುತ್ತಾರೆ. ಮಹಾರಾಜರು ಆಯುಧ ಪೂಜೆಯ ಕತ್ತಿಯನ್ನು ಕುಂಬಳಕಾಯಿ ಮೇಲಿಡುತ್ತಿದ್ದಂತೆ ವಜ್ರಮುಷ್ಠಿ ಕಾಳಗ ಪ್ರಾರಂಭವಾಗುತ್ತದೆ. ಇದರಲ್ಲಿ ಜಟ್ಟಿಗಳು ತಲೆಯನ್ನು ಬೋಳಿಸಿದ್ದು, ಈ ಕಾಳಗದಲ್ಲಿ ತಲೆಯಲ್ಲದೆ ಬೇರೆ ಯಾವುದೇ ಜಾಗಕ್ಕೆ ಹೊಡೆಯುವಂತಿಲ್ಲ ಒಂದು ಕೈಯನ್ನು ಗುರಾಣಿಯಂತೆ ತಡೆಯುತ್ತಾರೆ. ಮತ್ತೊಂದು ಕೈಯಲ್ಲಿ ಆಯುಧ ಹಿಡಿದು ಕೈಯಿಂದ ಪ್ರಹಾರ ಪ್ರಾರಂಭವಾಗುತ್ತದೆ. ಇದರಲ್ಲಿ ಯಾರೊಬ್ಬರಿಗೆ ಆಗಲಿ ತಲೆಗೆ ಹೊಡೆದಾಗ ರಕ್ತಬಂದ ತಕ್ಷಣ ಅಲ್ಲಿಯೇ ಇರುವ ಉಸ್ತಾದಗಳು ಕಾಳಗ ನಿಲ್ಲಿಸುತ್ತಾರೆ ಮತ್ತು ಜಯಶೀಲರು ಯಾರೆಂಬುದನ್ನು ನಿರ್ಧರಿಸುತ್ತಾರೆ. ನಂಜನಗೂಡಿನ ನಂಜುಂಡೇಶ್ವರ ದೇವಾಲಯದ ಪ್ರವೇಶದ್ವಾರದ ಒಳಭಾಗದ ಎಡಭಿತ್ತಿಯ ಎತ್ತರ ಭಾಗದಲ್ಲಿ ವಜ್ರಮುಷ್ಠಿಕಾಳಗದ ಶಿಲ್ಪವಿದೆ.ಮೈಸೂರು ಅರಸರು ವಜ್ರಮುಷ್ಠಿ ಕಾಳಗವನ್ನು ಪ್ರೋತ್ಸಾಹಿಸಿದ್ದರು.[14]ದೇವನಹಳ್ಳಿಯ ಕೋಟೆ ಬೀದಿಯ ಹಿಂಭಾಗದ ರಸ್ತೆಯಲ್ಲಿ ಈಗಲೂಸಹ ಜಟ್ಟಿ ಬೀದಿ ಇದೆ. ಇಂದಿಗೂ ಮೈಸೂರಿನಲ್ಲಿ ಅಂಬಾವಿಲಾಸ ಅರಮನೆಯ ಜಟ್ಟಿ ಕಾಳಗದ ಆವರಣ ಇದ್ದು ದಸರಾ ಸಂದರ್ಭದ ಜಂಬೂ ಸವಾರಿಗೂ ಮುನ್ನ ರಾಜ್ಯದ ವಿವಿಧ ಕಡೆಗಳಿಂದ ವಜ್ರಮುಷ್ಠಿ ಕಾಳಗ ಪ್ರವೀಣರನ್ನು ಕರೆಸಿ ಒಂದೇ ಜೊತೆ ವಜ್ರಮುಷ್ಠಿ ಕಾಳಗವನ್ನು ನಡೆಸಿ ಗೆದ್ದವರಿಗೆ ಬಹುಮಾನ ನೀಡಿ ಆನಂತರವೇ ಜಂಬೂ ಸವಾರಿ ಪ್ರಾರಂಭವಾಗುವುದು. ಈ ಪದ್ಧತಿ ಮೈಸೂರು ಮಹಾರಾಜರ ಕಾಲದಿಂದಲೂ ಸಾಂಪ್ರದಾಯಿಕವಾಗಿ ಒಂದು ವಿಶೇಷ ಕ್ರೀಡೆಯಾಗಿ ನಡೆದುಕೊಂಡು ಬಂದಿದೆ.[15]

**ಚಕ್ಕೋತ ಹಣ್ಣು:** ಒಂದೊಂದು ಊರು ಒಂದೊಂದು ರೀತಿಯಲ್ಲಿ ವಿಶೇಷವಾಗಿರುತ್ತದೆ ಅಲ್ಲಿ ಬೆಳೆಯುವ ಹಣ್ಣು ತಯಾರಸುವ ಪದಾರ್ಥ ಸಿದ್ದಪಡಿಸುವ ಉತ್ಪನ್ನ ಎಲ್ಲವು ಆ ನೆಲದ ಗುಣಕ್ಕೆ ತಕ್ಕಂತೆ ರೂಪ ಪಡೆದಿರುತ್ತದೆ ಅದರಲ್ಲಿ ಕರ್ನಾಟಕ ರಾಜ್ಯವು ವಿಶೇಷತೆಗಳ ತವರೂರು

ಎಂದೆನಿಸಿದ್ದು ಕರ್ನಾಟಕದಲ್ಲಿ ಭೌಗೋಳಿಕ ಸೂಚಿಯಲ್ಲಿರುವ 33 ಉತ್ಪನ್ನಗಳಿದ್ದು ಇವುಗಳಲ್ಲಿ ದೇವನಹಳ್ಳಿಯ ಚಕ್ಕೋತ ಕೂಡ ಒಂದೆನಿಸಿದೆ. ಜಿಯೋಗ್ರಫಿಕಲ್ ಇಂಡಿಕೇಷನ್ ಪಟ್ಟಿಯನ್ನು ಭಾರತ ಸರ್ಕಾರ ಸಿದ್ಧಪಡಿಸಲು ಮುಂದಾಗಿದೆ, ಜಿಯೋಗ್ರಫಿಕಲ್ ಇಂಡಿಕೇಷನ್ ಸಂಸ್ಥೆಯು ಒಂದು ನಿರ್ದಿಷ್ಟ ಸ್ಥಳದಿಂದ ಉತ್ಪತ್ತಿಯಾಗುವ ಉತ್ಪನ್ನಕ್ಕೆ ಸಿಗುವ ಹಣೆಪಟ್ಟಿ ನೀಡುವ ಸಂಸ್ಥೆಯಾಗಿದೆ. ನಿರ್ದಿಷ್ಟ ಪ್ರದೇಶದಿಂದ ಹೊರಬರುವ ಉತ್ಪನ್ನವು ವಿಶಿಷ್ಟವಾದ ಗುಣವನ್ನು ಹೊಂದಿದ್ದು ತನ್ನದೇ ಆದ ಮಾರುಕಟ್ಟೆಯನ್ನು ಸೃಷ್ಟಿಸಿಕೊಂಡು ಶಕ್ತಿಯನ್ನು ಹೊಂದಿದೆ. ಅನೇಕ ಕಡೆಗಳಲ್ಲಿ ಇರಬಹುದಾದ ಇಂತಹ ವೈಶಿಷ್ಟ್ಯತೆಗಳನ್ನು ಗುರುತಿಸಿ ಅವುಗಳಿಗೆ ಜಿಯೋಗ್ರಪಿಕಲ್ ಇಂಡಿಕೇಷನ್ ಮಾನ್ಯತೆ ನೀಡುತ್ತದೆ. ಉತ್ಪನ್ನಗಳ ಅಧಿಕೃತತೆಯನ್ನು ಪ್ರಮಾಣೀಕರಿಸುವ ಪದ್ಧತಿ ಇದಾಗಿದ್ದು ಗುಣಮಟ್ಟವನ್ನು ಪರೋಕ್ಷವಾಗಿ ಆದ್ಯತೆಯನ್ನಾಗಿಸುತ್ತದೆ ಮತ್ತು ನಕಲಿ ಉತ್ಪನ್ನಗಳ ಜಾಲವನ್ನು ತಡೆಯುವುದು ಕೂಡ ಆಗಿರುತ್ತದೆ.ಈ ಹಿನ್ನೆಲೆಯಲ್ಲಿ 1999ರಲ್ಲಿ ಜಿಯೋಗ್ರಾಫಿಕಲ್ ಇಂಡಿಕೇಷನ್ ಆಫ್ ಗೂಡ್ಸ್ (ನೋಂದಣಿ ಮತ್ತು ರಕ್ಷಣೆ) ಕಾಯ್ದೆಯನ್ನು ಜಾರಿಗೆ ತರಲಾಯಿತು, ಇದು 2003ರಲ್ಲಿ ಕಾರ್ಯರೂಪಕ್ಕೆ ಬಂದಿತು. ಇದರಲ್ಲಿ ನೋಂದಣಿ ಕಾರ್ಯ ಚೆನ್ನೈನಲ್ಲಿ ನಡೆಯುತ್ತದೆ ಅದರಂತೆ ಪ್ರತಿವರ್ಷ ದೇಶದ ವಿವಿಧ ಭಾಗಗಳ ಪದಾರ್ಥಗಳು ಜಿಐ ಮುದ್ರೆಯನ್ನು ಪಡೆದಿದ್ದು ವಿದೇಶಿ ಮಾರುಕಟ್ಟೆಯ ಗಮನವನ್ನು ಸೆಳೆಯುತ್ತಿದೆ. 2003ರಲ್ಲಿ ಡಾರ್ಜಲಿಂಗ್ ಟೀ ಜಿಐ ಟ್ಯಾಗನ್ನು ಮೊದಲ ಭಾರತೀಯ ಉತ್ಪನ್ನ ಎಂದೆನಿಸಿಕೊಂಡಿತು ಇದುವರೆಗೂ 191 ಉತ್ಪನ್ನಗಳು ಈ ಟ್ಯಾಗನ್ನು ಪಡೆದುಕೊಂಡಿದೆ, ಹಲವು ಸಾಂಸ್ಕೃತಿಕ ಮತ್ತು ಪಾರಂಪರಿಕ ಮಹತ್ವವುಳ್ಳ ಉತ್ಪನ್ನಗಳನ್ನು ರಕ್ಷಿಸುವುದಕ್ಕೆ ಈ ಪದ್ಧತಿ ನೆರವಾಗುತ್ತದೆ. ಇಲ್ಲಿ ಭೌಗೋಳಿಕ ಅನುಸೂಚಿ ಎಂದರೆ ಯಾವುದೇ ಪ್ರದೇಶದ ವಿಶಿಷ್ಟ ಉತ್ಪನ್ನಕ್ಕೆ ಕೊಡುವ ಹಕ್ಕು ಆಗಿರುತ್ತದೆ. ಅದು ತೋಟಗಾರಿಕೆ ಅಥವಾ ಕೃಷಿ ಉತ್ಪನ್ನವಾಗಿರಬಹುದು ಕರಕುಶಲ ಇಲ್ಲವೇ ಉತ್ಪಾದನೆ ಕ್ಷೇತ್ರವಾಗಿರಬಹುದು ಇವುಗಳಿಗೆ ತನ್ನದೇ ಆದ ವಿಶೇಷ ಗುಣಗಳಿರುತ್ತವೆ ಉದಾ: ಭೌಗೋಳಿಕ ಬೆಳೆಗಳನ್ನೇ ತೆಗೆದುಕೊಂಡರೆ ಒಂದೊಂದು ಪ್ರದೇಶದ ವಾತಾವಾರಣ ಹಾಗೂ ಮಣ್ಣಿನ ಗುಣಧರ್ಮಗಳಲ್ಲಿ ಬೆಳೆದ ಬೆಳೆಗಳು ವಿಶಿಷ್ಟವಾಗಿರುತ್ತವೆ ಅಂತಹವುಗಳಿಗೆ ಬೇಡಿಕೆಯು ಕೂಡ ಹೆಚ್ಚಿರುತ್ತದೆ, ಆದರೆ ಇದೇ ಬೆಳೆಯನ್ನು ಬೇರೆ ಭೌಗೋಳಿಕ ವಾತಾವರಣದಲ್ಲಿ ಅಥವಾ ಪ್ರದೇಶದಲ್ಲಿ ಬೆಳೆದರೆ ಮೂಲ ವೈಶಿಷ್ಟ್ಯತೆ ಕಾಣುವುದಿಲ್ಲ. ಬೇರೆಡೆ ಬೆಳೆದ ಇಂತಹ ಬೆಳೆಗಳನ್ನು ಇವುಗಳ ಊರಿನ ಹೆಸರಿನಲ್ಲಿ ಮಾರಾಟ ಮಾಡಿದಲ್ಲಿ ಅವುಗಳಿಗೆ ಇರುವ ಮೌಲ್ಯವನ್ನು ಕಡಿಮೆ ಮಾಡಿದಂತಾಗುತ್ತದೆ ಇದನ್ನು ತಪ್ಪಿಸುವ ಉದ್ದೇಶದಿಂದ ಇವುಗಳ ನೋಂದಣಿ ಮಾಡುವ ವ್ಯವಸ್ಥೆ ಮಾಡಲಾಗಿದೆ. ಕರ್ನಾಟಕದಲ್ಲಿ ಭೌಗೋಳಿಕ ಸೂಚಿಗಳಿರುವ 33 ಉತ್ಪನ್ನಗಳೆಂದರೆ ಮೈಸೂರು ರೇಷ್ಮೆ, ಮೈಸೂರು ವೀಳ್ಯೆದೆಲೆ, ನಂಜನಗೂಡು ರಸಬಾಳೆ, ಮೈಸೂರು ಸ್ಯಾಂಡಲ್

ಸೋಪ್, ಗಂಜಿಫಾಕಲೆ, ಚನ್ನಪಟ್ಟಣ ಗೊಂಬೆ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೀಲಿ ದ್ರಾಕ್ಷಿ ಮತ್ತು ಕೆಂಪು ಈರುಳ್ಳಿ, ಮೊಳಕಾಲ್ಮೂರು ಸೀರೆ, ಹಡಗಲಿ ಮಲ್ಲಿಗೆ, ಕಮಲಾಪುರ ಕೆಂಪು ಬಾಳೆ, ಕೊಪ್ಪಳ ಕಿನ್ನಾಳ ಬೊಂಬೆಗಳು, ಬೀದರ್‌ನ ಬಿದರಿಕಲೆ, ಇಳಕಲ್ ಸೀರೆ, ಧಾರವಾಡ ಪೇಡ, ಬ್ಯಾಡಗಿ ಮೆಣಸಿನಕಾಯಿ ಅದೇ ರೀತಿ ದೇವನಹಳ್ಳಿಯ ಚಕ್ಕೋತ ಕೂಡ ಒಂದು.[15] ಚಕ್ಕೋತವು ದೇವನಹಳ್ಳಿಯ ಪಾರಂಪರಿಕ ಹಣ್ಣಾಗಿದ್ದು, ಇದರಲ್ಲಿ ವಿವಿಧ ರೀತಿಯ ಕಾಯಿಲೆಗಳನ್ನು ಗುಣಪಡಿಸುವ ಮತ್ತು ಆರೋಗ್ಯವನ್ನು ಸುಧಾರಿಸುವ ವಿಟಮಿನ್‌ಗಳಿವೆ ಎಂದು ಭಾವಿಸಲಾಗಿದೆ. ಸಾಮಾನ್ಯವಾಗಿ ಯಾವುದಾದರೂ ಶುಭಕಾರ್ಯ ಜರುಗಿದರೆ, ಗಣ್ಯರಿಗೆ ನೀಡಲು ಮತ್ತು ಅಭಿನಂದನೆಗೆ/ಸನ್ಮಾನಿಸಲು ಈ ಹಣ್ಣನ್ನು ನೀಡುವ ಮುಖಾಂತರ ಸಾಂಪ್ರದಾಯಿಕವಾಗಿ ಗೌರವಿಸುವ ಪದ್ಧತಿ ಈಗಲೂ ಕೂಡ ಬಳಕೆಯಲ್ಲಿರುವುದನ್ನು ನಾವು ಕಾಣಬಹುದಾಗಿದೆ. ಕಿತ್ತಲೆ ಹಣ್ಣಿನ ಹಣ್ಣುಗಳ ಗುಂಪಿಗೆ ಸೇರಿದ ದೊಡ್ಡ ಗಾತ್ರದ ಹಣ್ಣು ಎಂದರೆ ಚಕ್ಕೋತ, ಇದನ್ನು Citrusgrandi's ಎಂದು ವೈಜ್ಞಾನಿಕವಾಗಿ ಕರೆಯಲಾಗುತ್ತಿದ್ದು Rutaceae ಸಸ್ಯಜಾತಿಗೆ ಸೇರಿರುತ್ತದೆ.ಇದರ ಮೂಲ ಏಷ್ಯಾಖಂಡವಾಗಿದ್ದು ಇದನ್ನು ಚೈನಾ, ಜಪಾನ್, ಭಾರತ, ಮಲೇಷಿಯಾ, ಫಿಜಿ ಮುಂತಾದ ದೇಶಗಳಲ್ಲಿ, ಇತ್ತೀಚೆಗೆ ಕೆರಿಬಿಯನ್, ಅಮೇರಿಕಾ ಸಂಯುಕ್ತ ಸಂಸ್ಥಾನದ ಕ್ಯಾಲಿಫೋರ್ನಿಯ, ಫ್ಲೋರಿಡಾಗಳಲ್ಲಿ ಬೆಳೆಯಲಾಗುತ್ತಿದೆ.

ಕರ್ನಾಟಕದಲ್ಲಿ ಮುಖ್ಯವಾಗಿ ಚಕ್ಕೋತವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ 35 ಕಿ.ಮೀ ವ್ಯಾಪ್ತಿಯಲ್ಲಿ ಬೆಳೆಯಲಾಗುತ್ತಿದ್ದು ಇದನ್ನು ಪ್ರಮುಖವಾಗಿ ದೇವನಹಳ್ಳಿ ತಾಲೂಕಿನ ದೇವನಹಳ್ಳಿ ಕಸಬಾ, ಮೇಲಿನ ತೋಟ-ಅಕ್ಕುಪೇಟೆ ಹಿರೇ ಅಮಾನಿಕೆರೆ, ಕಸಬಾ ಹೋಬಳಿ ಮತ್ತು ತಾಲೂಕಿನ ವಿವಿಧ ಗ್ರಾಮಗಳು, ಶಿಡ್ಲಘಟ್ಟ ತಾಲೂಕಿನ ಸುಮಾರು 8 ಗ್ರಾಮಗಳು, ದೊಡ್ಡಬಳ್ಳಾಪುರ ತಾಲೂಕಿನ 7 ಗ್ರಾಮಗಳು ಹಾಗೂ ಚಿಕ್ಕಬಳ್ಳಾಪುರ ತಾಲೂಕಿನ 4 ಗ್ರಾಮಗಳಲ್ಲಿ ಇತರೆ ಹಣ್ಣುಗಳ ಜೊತೆಯಲ್ಲಿ ಬೆಳೆಯಲಾಗುತ್ತಿದೆ.

ದೇವನಹಳ್ಳಿಯ ಚಕ್ಕೋತಕ್ಕೆ ಸುಮಾರು 350 ವರ್ಷಗಳ ಹಿನ್ನೆಲೆ ಇದ್ದು ಚಕ್ಕೋತವನ್ನು ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಹೆಚ್ಚು ಪರಿಚಯಿಸಲಾಯಿತು ಎಂದು ಸ್ಥಳೀಯರಿಂದ ತಿಳಿದುಬರುತ್ತದೆ. ಚಕ್ಕೋತದ ಸಿಪ್ಪೆಯು ದಪ್ಪವಾಗಿದ್ದು, ಅದು ಸ್ಪಂಜಿನಂತೆ ಇರುತ್ತದೆ ಅದರ ಒಳಗಡೆ ಕೆಂಪು ತಿಳಿಕೆಂಪು ಬಣ್ಣದ ರಸ ತುಂಬಿದ ಎಳೆಗಳಿದ್ದು ಎಳೆಗಳು ಸಾಮಾನ್ಯವಾಗಿ ರಸದಿಂದ ಕೂಡಿದ್ದು ಕೆಲವೊಮ್ಮೆ ಒಣಗಿದಂತೆ ಕಂಡುಬರುತ್ತದೆ. ಹಣ್ಣಿನ ತೊಳೆಗಳನ್ನು ಸುಲಭವಾಗಿ ಬೇರ್ಪಡಿಸಬಹುದು. ಹಣ್ಣಿನ ಎಳೆಗಳು ಹುಳಿಸಹಿತ ಸಿಹಿಯನ್ನು ಹೊಂದಿರುತ್ತದೆ. ಸಾಮಾನ್ಯವಾಗಿ ಚಕ್ಕೋತ ಹಣ್ಣು 20 ರಿಂದ 50 ಸೆ.ಮೀ ಸುತ್ತಳತೆಯನ್ನು

ಹೊಂದಿದ್ದು ಗುಂಡಾಕಾರವನ್ನು ಹೊಂದಿರುತ್ತದೆ, ಹಣ್ಣು ಮಾಗಿದಾಗ ಅದರ ಸಿಪ್ಪೆಯು ಹಳದಿ ಬಣ್ಣಕ್ಕೆ ತಿರುಗುತ್ತದೆ. ದೇವನಹಳ್ಳಿ ಚಕ್ಕೋತವು ವಿಶಿಷ್ಟ ತಳಿಗಳು ಮತ್ತು ರುಚಿಸ್ವಾದಗಳಿಗೆ ಹೆಸರಾಗಿದ್ದು ಕೆಲವು ರೈತರು ತಮ್ಮ ಜಮೀನುಗಳಲ್ಲಿ ಇವುಗಳನ್ನು ಬೆಳೆಸಿದ್ದಾರೆ. ಇತ್ತೀಚೆಗೆ ಕಸಿ ಮೂಲಕ ಕೂಡ ಚಕ್ಕೋತ ಗಿಡಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ. ಚಕ್ಕೋತವನ್ನು ಬೆಳೆಯಲು ಸಾವಾಯವ ಗೊಬ್ಬರ ಮತ್ತು ಅಗತ್ಯಕ್ಕೆ ತಕ್ಕಂತೆ ನೀರನ್ನು ಪೂರೈಸಿ ಉತ್ತಮ ಇಳುವರಿಯನ್ನು ಪಡೆಯಬಹುದಾಗಿದೆ. ಸಾಮಾನ್ಯವಾಗಿ ಹಣ್ಣು ಫಲ ನೀಡಲು ಸುಮಾರು ೮-೯ ತಿಂಗಳು ಕಾಲಾವಕಾಶ ಬೇಕಾಗುತ್ತದೆ. ಮಾರ್ಚ್‌ನಿಂದ ಆಗಸ್ಟ್ ತಿಂಗಳಲ್ಲಿ ಹೆಚ್ಚಿನ ಫಸಲನ್ನು ಹಾಗೂ ಉಳಿದ ಸಮಯದಲ್ಲಿ ಸಾಧಾರಣ ಫಸಲನ್ನು ನಿರೀಕ್ಷಿಸಬಹುದು. ದೇವನಹಳ್ಳಿಯ ಚಕ್ಕೋತದಲ್ಲಿ ಹಲವಾರು ತಳಿಗಳಿದ್ದು ಅವುಗಳಲ್ಲಿ ಮುಖ್ಯವಾಗಿ ದಪ್ಪಗಾತ್ರದ ಮತ್ತು ಮಧ್ಯಮ ಗಾತ್ರದ ಕೆಂಪು ತಿರುಳಿನ ಹಣ್ಣು ಹೆಚ್ಚು ಹೆಸರುವಾಸಿಯಾಗಿದೆ. ತಳಿಯ ಆಯ್ಕೆಯಲ್ಲಿ ಸಿಹಿಯಿಂದ ಕೂಡಿದ ಹಣ್ಣಿನ ಬೀಜಗಳು ಪ್ರಮುಖ ಪಾತ್ರವಹಿಸುತ್ತವೆ. ದೇವನಹಳ್ಳಿಯ ತೋಟಗಾರಿಕೆ ಇಲಾಖೆಯಲ್ಲಿ ಚಕ್ಕೋತ ಹಣ್ಣು ಸಂರಕ್ಷಣ ಕೇಂದ್ರವನ್ನು ಸ್ಥಾಪಿಸಿದ್ದು ಇದರ ಮೂಲಕ ಚಕ್ಕೋತ ಹಣ್ಣಿನ ಬಗ್ಗೆ ಅರಿವು, ಸಂರಕ್ಷಣೆ ಮತ್ತು ಸಂಶೋಧನೆಗೆ ಆದ್ಯತೆ ನೀಡಲಾಗುತ್ತಿದೆ.(ಚಿ.ಸಂ.197)

**ಕೊಯಿರ ಬಂಡೆಕಲ್ಲು:** ದೇವನಹಳ್ಳಿ ತಾಲೂಕಿನ ಕೊಯಿರಾ, (ಸುಮಾರು 27 ಎಕರೆ) ಮನಗೊಂಡನ ಹಳ್ಳಿ, (ಸುಮಾರು ಎರಡೂವರೆ ಎಕರೆ) ಅರುವನಹಳ್ಳಿ, (ಸುಮಾರು ಎರಡು ಎಕರೆ) ರಾಮನಾಥಪುರ (ಸುಮಾರು 10 ಎಕರೆ) ಮುಂತಾದ ಗ್ರಾಮಗಳಲ್ಲಿ ಈ ಬಂಡೆಕಲ್ಲು ವ್ಯಾಪಿಸಿದ್ದು ಸಹಜವಾಗಿ ಈ ಭಾಗದಲ್ಲಿ ಕೊಯಿರಾ ಬಂಡೆಕಲ್ಲು ಎಂದು ಹೆಸರಾಗಿದೆ. ಕೊಯಿರಾ ಬಂಡೆಕಲ್ಲು ತನ್ನ ಕಲ್ಲಿನ ಮಹತ್ವದಿಂದ ಅಂತರಾಷ್ಟ್ರೀಯ, ರಾಷ್ಟ್ರೀಯ, ಮತ್ತು ರಾಜ್ಯದ ಗಮನವನ್ನು ಸೆಳೆದಿದೆ. ಏಕೆಂದರೆ ಕಟ್ಟಡಗಳ ನಿರ್ಮಾಣ ಮತ್ತು ವಿಗ್ರಹಗಳ ಕೆತ್ತನೆಯಲ್ಲಿ ಈ ಕಲ್ಲನ್ನು ಬಳಸಲಾಗುತ್ತಿದ್ದು ಇದು ಮೃದು, ಗಟ್ಟಿ ಮತ್ತು ಬಿಳಿಗ್ರಾನೈಟ್ ಶಿಲೆಯಾಗಿದೆ ಈ ಬಂಡೆಯ ವಿವಿಧ ಮಾದರಿ ಗಾತ್ರ ಸ್ಲ್ಯಾಬ್‌ಗಳ ಮುಖಾಂತರ ಬಳಸಿಕೊಂಡು ವಾಸದ ಮನೆಗಳು ಲೌಕಿಕ ಕಟ್ಟಡಗಳನ್ನು ಮತ್ತು ವಿಗ್ರಹಗಳನ್ನು ನಿರ್ಮಿಸಲಾಗಿದೆ. ಬೆಂಗಳೂರಿನ ವಿಶ್ವವಿಖ್ಯಾತ ವಿಧಾನಸೌ**ಧ** ನಿರ್ಮಾಣ ವಾಗಿರುವುದು ಈ ಕಲ್ಲಿನಿಂದ[17] ಮಾತ್ರವಲ್ಲದೆ ಇತ್ತೀಚಿಗೆ ಹೊಸದಾಗಿ ನಿರ್ಮಾಣವಾಗಿರುವ ಬೆಂಗಳೂರಿನ ವಿಕಾಸ ಸೌಧದ ನಿರ್ಮಾಣದಲ್ಲೂ ಸಹ ಈ ಬಂಡೆ ಕಲ್ಲನ್ನು ಬಳಸಲಾಗಿದೆ. ಈ ಬಗ್ಗೆ ವಿಧಾನ ಸೌಧ ಮತ್ತು ವಿಕಾಸ ಸೌಧಗಳ ಶಿಲಾನ್ಯಾಸ ನಾಮಫಲಕಗಳಲ್ಲಿ ನಮೂದಿಸಲಾಗಿದೆ. ಈ ಕಲ್ಲಿನಿಂದ ಆಂಜನೇಯ, ಬಾಹುಬಲಿ, ಮಹಾವೀರ ಮುಂತಾದ ಮೂರ್ತಿ ಶಿಲ್ಪಗಳನ್ನು ಕೆತ್ತಲಾಗಿದೆ ಎಂದು ಸ್ಥಳೀಯರು ತಿಳಿಸಿರುತ್ತಾರೆ. ಈ ಬಂಡೆ ಕಲ್ಲನ್ನು ದೇಶ-

ವಿದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಕೊಯಿರಾ ಬಂಡೆಕಲ್ಲನ್ನು ಬಿಳಿಚಿನ್ನ ಎಂದು ಕರೆಯಲಾಗುತ್ತಿದೆ. (ಚಿ.ಸಂ.198)

**ನಲ್ಲೂರಿನ ಹುಣಸೇ ತೋಪು–ಭಾರತದ ಮೊದಲ ಜೀವ ವೈವಿದ್ಯತೆಯ ಪಾರಂಪರಿಕ ತಾಣ:**

ದೇವನಹಳ್ಳಿ ತಾಲೂಕಿನ ನಲ್ಲೂರಿನಲ್ಲಿರುವ ಹುಣಸೆತೋಪು ಹಲವಾರು ಶತಮಾನಗಳಿಂದ ಪ್ರಕೃತಿ ವೈಪರಿತ್ಯಗಳನ್ನು ತಡೆದು ಜೀವಂತ ಪಳೆಯುಳಿಕೆಯಾಗಿ ನಿಂತಿದೆ. ನಲ್ಲೂರಿನ ಹುಣಸೇ ತೋಪು ಭಾರತದ ಮೊದಲನೆ ಜೀವ ವೈವಿಧ್ಯತೆಯ ಪಾರಂಪರಿಕ ತಾಣವೆಂದು ಘೋಷಿಸಲ್ಪಟ್ಟಿದೆ.[18]

ಈ ತಾಣವು ದೇವನಹಳ್ಳಿ–ಹೊಸಕೋಟೆ ರಸ್ತೆಯಲ್ಲಿ ದೇವನಹಳ್ಳಿ ಪಟ್ಟಣದಿಂದ ಸುಮಾರು 9 ಕಿ.ಮೀ. ದೂರದಲ್ಲಿ ಮತ್ತು ಬೆಂಗಳೂರು ನಗರದಿಂದ ಸುಮಾರು 46 ಕಿ.ಮೀ ದೂರದಲ್ಲಿದೆ. 13° 11 55.4° N ಅಕ್ಷಾಂಶ 77° 46.° ಈ ರೇಖಾಂಶದಲ್ಲಿರುವ ಈ ತಾಣವು ಸಮುದ್ರ ಮಟ್ಟದಿಂದ 830 ಮೀ. ಎತ್ತರದಲ್ಲಿದೆ. ಈ ತಾಣವು ದೇವನಹಳ್ಳಿ ತಾಲೂಕು ಚನ್ನರಾಯಪಟ್ಟಣ ಹೋಬಳಿ ನಲ್ಲೂರು ಗ್ರಾಮದ ಅಮರಾಯಿ ಸರ್ವೇನಂಬರ್ 1 ರಲ್ಲಿ ಸುಮಾರು 53 ಎಕರೆ ಪ್ರದೇಶದಲ್ಲಿ ಸುಮಾರು 300 ಹುಣಸೇ ಮರಗಳಿವೆ. ಜೀವ ವೈವಿದ್ಯ ಕಾಯ್ದೆ 2012ರ ಕಲಂ 37 (1) ಅಡಿಯಲ್ಲಿ ಈ ಹುಣಸೆ ತೋಪನ್ನು ಕರ್ನಾಟಕ ಸರ್ಕಾರ ದಿನಾಂಕ 24–01–2007ರಂತೆ ಜೀವ ವೈವಿದ್ಯತೆಯ ಪಾರಂಪರಿಕ ತಾಣವೆಂದು ಘೋಷಿಸಿದೆ. 13ನೇ ಶತಮಾನದಲ್ಲಿ ಈ ಪ್ರದೇಶವನ್ನು ಆಳುತ್ತಿದ್ದ ಚೋಳವಂಶದ ರಾಜನ ಕಾಲದಲ್ಲಿ ಈ ಹುಣಸೇ ತೋಪು ನಿರ್ಮಾಣವಾಗಿರ ಬಹುದೆಂದು ನಂಬಲಾಗಿದೆ. ಆಗಿನ ಕಾಲದಿಂದಲೂ ಈ ಹುಣಸೇ ತೋಪನ್ನು ದೇವರ ಬನವೆಂದು ಸಂರಕ್ಷಿಸಲ್ಪಟ್ಟಿದೆ. ಈ ಶತಾಯುಷಿ ಮರಗಳು ಶತಮಾನಗಳಿಂದ ಎಲ್ಲಾ ರೀತಿಯ ಪ್ರಾಕೃತಿಕ ವೈಫಲ್ಯಗಳನ್ನು ಎದುರಿಸುತ್ತ ಬದುಕುಳಿದಿರುವ ಜೀವಂತ ಪಳಯುಳಿಕೆಗಳಂತಿವೆ. ಈ ಹುಣಸೆ ತೋಪಿನ ಒಂದು ಮರವು ಅಂದರೆ ಮರಸಂಖ್ಯೆ 155ವು ಸುಮಾರು 410 ವರ್ಷಗಳಷ್ಟು ಹಳೆಯದೆಂದು ಕಾರ್ಬನ್ ಡೇಟಿಂಗ್‌ನಿಂದ ಸಾಬೀತಾಗಿದೆ. ಉಳಿದ ಮರಗಳು ಸುಮಾರು 200 ವರ್ಷಗಳಿಗಿಂತಲೂ ಹಿಂದಿನವು. ಈ ತೋಪಿನಲ್ಲಿರುವ ಮರಗಳಲ್ಲಿ 5 ಆಕಾರದ ಶಿರಭಾಗ, ನಾಲ್ಕು ರೀತಿಯ ಎಲೆಗಳು, ಮೂರು ರೀತಿಯ ಹೂ ಗೊಂಚಲುಗಳು ಮತ್ತು ಮೂರು ರೀತಿಯ ಕಾಂಡಗಳಿರುವ ಮರಗಳಿವೆ. ಈ ಹುಣಸೆ ಮರಗಳಲ್ಲಿ ಎಲ್ಲೂ ಕಂಡುಬಾರದ ಹಾಗೂ ದಾಖಲಾಗದ ವೈಶಿಷ್ಟ್ಯತೆಗಳಾದ ಬಿಳಲು (ಪ್ರಾಫ್ ರೂಟ್ಸ್) ಮತ್ತು ಬೇರುಗಳಿಂದ ಬೆಳೆದ ಮರಗಳು ಈ ಹುಣಸೆ ತೋಪು ಕೆಂಪು ಫಲವತ್ತಾದ ಮಣ್ಣುಳ್ಳ ಬಯಲು ಪ್ರದೇಶದಲ್ಲಿದ್ದು ವಿವಿಧ

ರೀತಿಯ ಹಕ್ಕಿಗಳು, ಸಸ್ತನಿಗಳು, ಸರಿಸೃಪಗಳು, ಉಬಯವಾಸಿಗಳು, ಕೀಟಗಳು ಮತ್ತು ವಿವಿಧ ರೀತಿಯ ಸಸ್ಯಗಳಗೆ ಆಶ್ರಯ ನೀಡಿದೆ.[19]

ಈ ಹುಣಸೆತೋಪಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾವಲುಗಾರನಾದ ಮುನಿರಾಜು ನೀಡಿದ ಮಾಹಿತಿಯಂತೆ ಹುಣಸೆತೋಪಿನಲ್ಲಿ ಪಾಳುಬಿದ್ದಿರುವ ದೇವಾಲಯದ ಮುಂಭಾಗದ ಮಣ್ಣಿನ ರಸ್ತೆಯಲ್ಲಿ ಮರದಿಂದ ಬೇರುಬಿಟ್ಟಿರುವ ೮ ಮರಗಳವೆ. ಹುಣಸೆತೋಪಿನ ಬಲಭಾಗದಲ್ಲಿ ಡಾಂಬರು ರಸ್ತೆಯ ಪಕ್ಕದಲ್ಲಿ ಒಂದು ಮರದಿಂದ ೮ ಮರಗಳಾಗಿದ್ದು, ಒಂದೇ ಮರ ಎರಡು ಭಾಗವಾಗಿದ್ದು, ಗುಡುಗು ಮಿಂಚು ಸಿಡಿಲಿನಿಂದ ಎರಡು ಭಾಗವಾದರೂ ಈಗಲೂ ಉಳದುಕೊಂಡಿದೆ. (ಚಿ.ಸಂ.199)

**ಕರಗ ಉತ್ಸವ**

ಇದು ತಿಗಳ ಸಮುದಾಯದ ಪ್ರಮುಖ ಹಬ್ಬವಾಗಿದ್ದು ಪಾಂಡವರು ಮತ್ತು ದ್ರೌಪದಿಯ ಗೌರವ ಪ್ರತೀಕ. ಕರ್ನಾಟಕದಲ್ಲಿ ಬೆಂಗಳೂರು, ಹೊಸಕೋಟೆ, ದೇವನಹಳ್ಳಿ, ಕೋಲಾರ, ಆನೇಕಲ್, ಮೈಸೂರು, ದೊಡ್ಡಬಳ್ಳಾಪುರ ಮುಂತಾದ ಕಡೆಗಳಲ್ಲಿ ಕರಗ ಉತ್ಸವಗಳು ನಡೆಯುತ್ತವೆ. ಇದೊಂದು ಶಕ್ತ್ಯೋತ್ಸವಾಗಿದ್ದು ಪೌರಾಣಿಕವಾಗಿ ಸಂಬಂಧವನ್ನು ಹೊಂದಿದ್ದು ಮಹಾಭಾರತದಲ್ಲಿನ ಪಾಂಡವರ ಪತ್ನಿ ದ್ರೌಪದಿಯನ್ನು ಆದಿಶಕ್ತಿ ಸ್ವರೂಪಿಣಿ ಎಂದು ಹೇಳಲಾಗುತ್ತದೆ. ಕೌರವರು ಸೇರಿದಂತೆ ರಾಕ್ಷರ ಸಂಹಾರದ ಬಳಕ ಪಾಂಡವರ ಸ್ವರ್ಗಾರೋಹಣ ನೆರವೇರುತ್ತದೆ. ಆದರೆ ಧರ್ಮರಾಯ ಹೊರತುಪಡಿಸಿ ಉಳದವರು ಮಾರ್ಗಮಧ್ಯೆ ಬಿದ್ದು ಹೋಗುತ್ತಾರೆ. ದ್ರೌಪದಿಯು ಬಿದ್ದು ಹೋದಾಗ ಆಕೆಯು ರಾಕ್ಷಸನಿಂದ ತೊಂದರೆಗೆ ಒಳಗಾಗುತ್ತಾಳೆ. ಆಗ ದ್ರೌಪದಿಯು ಶಕ್ತಿ ಸ್ವರೂಪಿಣಿಯಾಗಿ ಜನ್ಮತಾಳ ತನ್ನ ಬೆವರಿನಿಂದ ವೀರಯೋಧರನ್ನು ಸೃಷ್ಟಿಮಾಡಿ ಅವರದ್ದೇ ಆದ ಒಂದು ಸೈನ್ಯವನ್ನು ಸೃಷ್ಟಿಮಾಡಿಕೊಂಡು ಆ ರಾಕ್ಷಸನನ್ನು ಸಂಹಾರ ಮಾಡುತ್ತಾರೆ. ಇವರನ್ನು ವೀರಕುಮಾರ ಎಂದು ಕರೆಯಲಾಗುತ್ತದೆ. ಪ್ರತಿವರ್ಷದ ಚೈತ್ರಮಾಸದಲ್ಲಿ ಹುಣ್ಣಿಮೆಯ ಸಂದರ್ಭದಲ್ಲಿ ಕರಗ ಉತ್ಸವದ ಮೂಲಕ ದ್ರೌಪದಿಯನ್ನು ಮೈಮೇಲೆ ಆಹ್ವಾನಿಸಿಕೊಂಡು ಪೂಜೆಯನ್ನು ಮಾಡುವ ಮಾಡಲಾಗುತ್ತದೆ. ಅಂದಿನಿಂದ ಇಂದಿನವರೆಗೆ ಈ ಸಂಪ್ರದಾಯವನ್ನು ದ್ರೌಪದಮ್ಮ ಕರಗದಲ್ಲಿ ಕಾಣಬಹುದಾಗಿದೆ. ಕರಗ ಉತ್ಸವವು ಸಾಮಾನ್ಯವಾಗಿ ದ್ರೌಪದಮ್ಮ ಕರಗ ಎಂದು ಹೆಸರಾಗಿದೆ.[20]

ಅಗ್ನಿದೇವನ ವರಪ್ರಸಾದದಿಂದ ಜನಿಸಿದ ದ್ರೌಪದಿಯು ವಹ್ನಿಕುಲ ಕ್ಷತ್ರಿಯರ ಅಥವಾ ತಿಗಳ ಜನಾಂಗದವರ ಕುಲದೇವತೆಯಾಗಿದ್ದು ಈಕೆಯ ಹೆಸರಿನಲ್ಲಿ 11 ದಿನಗಳು ವಿವಿಧ ಪೂಜಾ

